ಪ್ರತಿಭಾ ಗ್ರಂಥಮಾಲೆ, ಧಾರವಾಡ. ವರ್ಷ : ೮, ಕಿರಣ ೧·

# ರಂಗವಿಲಾಸಿನಿ

( ರಾಜಕೀಯ ಕಾದಂಬರಿ )

ಅನುವಾದಕರು :

ಮಲ್ಲಾರಿ ಮೋಪುಂಡಿ



೧ ಜನೆವರಿ ೧೯೫೧] • [ಬೆಲೆ : ೩-೦-೨

ಪ್ರಕಾಶಕರು :
ಬಾಲಚಂದ್ರ ಘಾಣೇಕರ
ಪ್ರತಿಭಾ ಗ್ರಂಥಮಾಲೆ
ಧಾರವಾಡ.

ಮುಂದಿನ ಪ್ರಕಟನೆ

## ನಿಸರ್ಗದುಡಿಯಲ್ಲಿ

ವಿವಿಧ ಲೇಖಕರ-ಸ್ವಾರಸ್ಯಮಯ

ಕಥಾಸಂಕಲನ

ಬೆಲೆ : ೧-೮-೦

ಮುದ್ರಕರು :
ಎಸ್. ಎಲ್. ಜೋಶಿ
ಮೋಹನ ಮುದ್ರಣಾಲಯ
ಧಾರವಾಡ.

# ಹೊಸ ವರುಷದ ಕುರಿತು

ಈ ಪುಸ್ತಕದಿಂದ ನಮ್ಮ ಪ್ರತಿಭಾ ಗ್ರಂಥಮಾಲೆಯು ಎಂಟನೆಯ ವರ್ಷಾರಂಭವಾಯಿತು. ಸಾಹಿತ್ಯ ವ್ಯವಸಾಯದಲ್ಲಿ ಸಾಮಾನ್ಯವಾಗಿರುವ ಎಡರು ತೊಡರುಗಳಿದ್ದರೂ ಇರಬೇಕಾದಷ್ಟು ಪ್ರೋತ್ಸಾಹನೆಯಿಲ್ಲದಿದ್ದರೂ ನಿರ್ದಿಷ್ಟವಾದ ಪ್ರಕಟನೆಗಳನ್ನು ಕನ್ನಡ ಶಾರದೆಯ ಭಂಡಾರಕ್ಕೆ ಸಕಾಲಕ್ಕೆ ಒದಗಿಸುತ್ತ ಬಂದಿದ್ದೇವೆ; ಈ ಪರಂಪರೆಯನ್ನು ಮುಂದೆಯೂ ಕಾಯ್ದು-ಕೊಳ್ಳಲಾದೀತೆಂಬ ಭರವಸೆಯೂ ಇದೆ. ಪ್ರಚಾರ ಪ್ರಯತ್ನವೇನೂ ಇಲ್ಲದೆ ನಮ್ಮ ಮಾಲೆಯ ವಾಚಕ ಸಂಖ್ಯೆ ಅಲ್ಪ ಪ್ರಮಾಣದಲ್ಲಿಯೇ ಆಗಲಿ-ವರ್ಷವರ್ಷವೂ ಹೆಚ್ಚುತ್ತಿರುವುದು ಜನತೆಯಲ್ಲಿ ವಾಚನಾಭಿರುಚಿ ಬೆಳೆಯು-ತ್ತಿದೆ ಎಂಬುದಕ್ಕೆ – ಹಾಗೆಯೆ ಮಾಲೆ ಜನಪ್ರಿಯವಾಗುತ್ತಿದೆ ಎಂಬುದಕ್ಕೆ ಕೂಡ–ನಿದರ್ಶನವೆಂಬುದು ಹೆಮ್ಮೆಯ ಮಾತು.

ನಮ್ಮ ಮಾಲೆ ಹೆಚ್ಚಾಗಿ ಕಾದಂಬರಿಗಳನ್ನು ಒದಗಿಸುತ್ತಿದ್ದರೂ ಅದ-ರಲ್ಲಿಯೂ ವೈವಿಧ್ಯವನ್ನಿಟ್ಟುಕೊಂಡಿರುವ ವಿಷಯ ವಾಚಕರ ಗಮನಕ್ಕೆ ಬಂದಿರಲು ಸಾಕು. ಕನ್ನಡದಲ್ಲಿ ರಾಜಕೀಯ ಕಾದಂಬರಿಗಳು ವಿರಳವಾಗಿರುವಾಗ 'ರಂಗವಿಲಾಸಿನಿ'ಯಿಂದ ಈ ವರ್ಷ ಮೊದಲಾದುದು ಒಂದು ವೈಶಿಷ್ಟ್ಯವೆಂದು ಹೇಳಬಹುದು. ಇದೊಂದು ಅನುವಾದವೇ ಆಗಿದ್ದರೂ ಓದಿದವರು ಬೇಸರಿಸಲಾರರು, ಮೂಗು ಮುರಿಯಲಾರರು ಎಂದು ನಮ್ಮ ನಂಬುಗೆ. ಬರ್ಜಿಲಂಡೆಂಬ ಚಿಕ್ಕ ನಾಡಿನಲ್ಲಿ ರಾಜಶಾಸನವನ್ನು ಶಾಂತ-ಶಾಸನಸಂಮತ ಮಾರ್ಗದಿಂದ ಕಿತ್ತು ಹಾಕಿ ಪ್ರಜಾಧಿಪತ್ಯವನ್ನು ಸ್ಥಾಪಿಸಿದ ರಾಜಕೀಯ ತಂತ್ರಗಳಿಂದೊಡಗೂಡಿದ ಕಥೆಯಿದು. ರಂಗವಿಲಾಸಿನಿಯೊಬ್ಬಳು ಉಪಪಾತ್ರವಾಗಿರುವುದರಿಂದ ಸ್ವಾರಸ್ಯಮಯವಾಗಿರುವಂತೆ ಆ ದೇಶದ ಯುವರಾಜನೇ ಅಜ್ಞಾತವಾಗಿ ಈ ರಾಜ್ಯಕ್ರಾಂತಿಯ ನಾಯಕನಾಗಿ ಇದನ್ನು ಅದ್ಭುತ ರಮ್ಯವಾಗಿ ಚಿತ್ರಿಸಿದ್ದಾನೆ. ಯುವರಾಜನ ತ್ಯಾಗ ಹೃದಯ ಸ್ಪರ್ಶಿಯಾಗಿದೆ,

ಆವನ ಸಾಹಸ ರೋಮಾಂಚಕಾರಿ, ಮೂಬಗೆಯ ವ್ಯಕ್ತಿತ್ವವುಳ್ಳ ಅವನ ಚರಿತ್ರ ರಹಸ್ಯಮಯವಾಗಿ ಕುತೂಹಲಕಾರಿಯಾಗಿದೆ. ಈ ಜಾತಿಯ ಕಾದಂಬರಿ ಕನ್ನಡಕ್ಕೆ ಹೊಸತೇ ಸರಿ. ಕನ್ನಡಕ್ಕೆ ಹಲವು ಅನುವಾದ ಕೃತಿಗಳನ್ನಿತ್ತ ಶ್ರೀ. ಮಲ್ಲಾರಿಯವರ ಆಯಿಕೆಯ ದೃಷ್ಟಿಯಲ್ಲಿ ಒಂದು ವಿಶೇಷ ಗುಣವಿರುತ್ತದೆ ಎಂಬುದಕ್ಕೆ 'ರಂಗವಿಲಾಸಿ'ನಿಯೂ ಒಂದು ಸಾಕ್ಷಿ ಎಂದರೆ ಅತ್ಯುಕ್ತಿಯಾಗಲಿಕ್ಕಿಲ್ಲ. ವರ್ಷಾರಂಭದಲ್ಲಿ ಈ ಪುಸ್ತಕವನ್ನು ಒದಗಿಸಿದುದರಿಂದ ವಾಚಕರಿಗೆ ಸಂತೋಷವಾಗದಿರದೆಂದು ನಮಗೆನಿಸುತ್ತದೆ.

ಈ ವರ್ಷದ ಇನ್ನೆರಡು ಪುಸ್ತಕಗಳೂ ತಿಂಗಳೊಪ್ಪೊತ್ತಿನಲ್ಲಿ ಹೊರಬರುತ್ತವೆಯೆಂದು ತಿಳಿಸಲು ಆನಂದವಾಗುತ್ತದೆ. ಒಂದು ಹೆಸರಾಂತ ಶ್ರೀ. ಹೊಯ್ಸಳರೇ ಮೊದಲಾದ ವಿವಿಧ ಲೇಖಕರ ವೈವಿಧ್ಯಪೂರ್ಣ ಸಣ್ಣ ಕಥೆಗಳ ಸಂಕಲನ; ಇನ್ನೊಂದು ನಮ್ಮ ವಾಚಕರಿಗೆ ಪರಿಚಿತರಾದ ಶ್ರೀ. ನವಗಿರಿನಂದರ ಕಾದಂಬರಿ;— ಪ್ರತಿಭಾ ಮಾಲೆಯಲ್ಲಿಯೇ ಬೆಳಗಿದ ಇವರ 'ಇಂದ್ರಜಾಲ' ಕಾದಂಬರಿಯ ನಾಯಕ ಸಾಹಿತಿ ಶೀನುವಿನ ಮುಂದಿನ **ಜೀವನಕಥೆ.**

ಇನ್ನು ಕೃತಜ್ಞತಾರ್ಪಣೆ: ಬರೆಹಗಾರ ಶ್ರೀ. ಮಲ್ಲಾರಿಯವರಿಗೆ, ಚಿತ್ರಕಾರ ಶ್ರೀ. ಮೂರ್ತಿಯವರಿಗೆ ಪಡಿಯಚ್ಚುಗಾರ ಶ್ರೀ. ಬೆಂಗೇರಿಯವರಿಗೆ, ಹಿಡಿದ ಕೆಲಸವನ್ನು ಬದಿಗಿಡದೆ ಅದಕ್ಕೇ ಬೆಂಬತ್ತಿ ದೊಡ್ಡದಾದರೂ ಅಲ್ಪಾವಧಿಯಲ್ಲಿ ಪೂರಯಿಸಿ ಮುಂಬಯಿ ಕನ್ನಡ ಸಾಹಿತ್ಯ ಸಮ್ಮೇಲನದೊಳಗಾಗಿ ಪುಸ್ತಕವನ್ನೊದಗಿಸಿದ ಅಚ್ಚುಗಾರ ಶ್ರೀ. ಎಸ್. ಎಲ್. ಜೋಶಿಯವರಿಗೆ ನಾವು ತುಂಬ ಉಪಕೃತರಾಗಿದ್ದೇವೆ.

—**ಭಾಲಚಂದ್ರ ಘಾಣೇಕರ.**

ಸಂಪಾದಕ

# ರಂಗವಿಲಾಸಿನಿ

## ೧

ಪ್ರಕೃತಿಯ ನಂದನವನವಾದ ಇಟಲಿ ದೇಶದ ಸೇಂಟ್ ಮರಿಜ್ ನಗರದಲ್ಲಿ, ಸುವಿಸ್ತೀರ್ಣವಾದ ಸರೋವರ ತೀರದಲ್ಲಿ ಒಂದು ಇಳಿಹೊತ್ತಿನಲ್ಲಿ ಸಂತೋಷಕೂಟ ನಡೆದಿತ್ತು; ಬಹುಜನ ನರನಾರಿಯರು ಸೇರಿದ್ದರು. ಎಲ್ಲರೂ ನಿಸರ್ಗಸೌಂದರ್ಯದಿಂದ ಮುಗ್ಧರಾಗಿ ಪ್ರಫುಲ್ಲಚಿತ್ತದಿಂದ ಹಾಸ್ಯಾಮೋದಗಳಲ್ಲಿ ಮೈಮರೆತಿದ್ದರು ಅವರಿಗೆ ಹೊರತಾದವರೆಂದರೆ ಇಬ್ಬರು ಮಾತ್ರ— ಒಬ್ಬ ಯುವಕ ಒಬ್ಬ ಯುವತಿ. ಎಲ್ಲರೊಡನೆ ಆನಂದ ವಿಹಾರದಲ್ಲಿ ಅವರು ಬೆರೆತಿರಲಿಲ್ಲ. ನೆರವಿಯಿಂದ ತುಸು ದೂರದಲ್ಲಿ ಕುಳಿತು ಗಂಭೀರವಾದ ಮಾತುಕತೆಯಲ್ಲಿ ತೊಡಗಿದ್ದರು.

" ತಾವು ಇಷ್ಟು ಶೀಘ್ರವೇ ಹೊರಡಬೇಕಾಗಿದೆಯೆ ? " ಯುವತಿ ಕೇಳಿದಳು.

" ಹೌದು. ಇಲ್ಲಿಂದ ತೆರಳುವುದಂತೂ ಸರಿ; ಅಲ್ಲದೆ ನನ್ನ ಜೀವನದ ಗತಿಯೂ ಬದಲಾಗುವುದು; ಹೊಸ ಬಾಳನ್ನು ಆರಂಭಿಸಬೇಕಾಗುವುದು. ಈ ವಯಸ್ಸಿನಲ್ಲಿ ಇದುವರೆಗೆ ತುಳಿಯುತ್ತ ಬಂದ ಬಾಳ ಹಾದಿಯನ್ನು ಬಿಟ್ಟು ಹೊಸ ಹಾದಿಯಲ್ಲಿ ನಡೆಯುವುದು ಎಷ್ಟು ವಿಡಂಬನಾಜನಕವೆಂಬುದು ನನ್ನಷ್ಟು ವಯಸಾಗದೆ ನಿನಗೆ ತಿಳಿಯದು " ಎಂದ ಯುವಕ.

" ತಮಗೆಷ್ಟಾಗಿದೆ ವಯಸ್ಸು ? "

" ಈಗ ಮೂವತ್ತುಮೂರರಲ್ಲಿದೆ ಅಷ್ಟೆ. ನೋಡಲಿಕ್ಕೆ ಅದಕ್ಕೂ ಹೆಚ್ಚೆಂದು ಕಾಣುತ್ತಿದೆಯಲ್ಲವೆ ? ಈಗಾಗಲೇ ಮುದುಕನಾಗಿ ಬಿಟ್ಟೆ, ಬದು-

ಕುವುದು ಇನ್ನೆಷ್ಟು ದಿನವೊ ಎನಿಸುತ್ತಿದೆ ಮೊದಲ ಹರಯದ ಆನಂದ ಉತ್ಸಾಹಗಳು ಮರೆತಂತೆಯೆ ಆಗಿವೆ. ಇನ್ನು ಕೆಲ ದಿನಗಳಲ್ಲಿ ಆ ಹಳ ಮಾತುಗಳ ನೆನಪಿನ ಗುರುತೂ ಉಳಿಯಲಿಕ್ಕಿಲ್ಲ. "

" ಅನಿವಾರ್ಯವಾಗಿ ಹೋಗುತ್ತಿದ್ದೀರಾ ? "

" ಹಂ. ಇಚ್ಛೆಯಿಲ್ಲದೆಯೆ ಹೋಗುತ್ತಿದ್ದೇನೆ. ಕೆಲ ಗಂಟೆಗಳ ಮೊದಲು ನಾನು ನಂಬಿದ್ದೆ— ನಾನು ಸ್ವತಂತ್ರ, ನನ್ನಿಚ್ಛೆಯಂತೆ ನಾನು ನಡೆಯಬಲ್ಲೆ ಎಂದು ಈ ಪಾರ್ವತ್ಯ ಪ್ರಾಂತದಲ್ಲಿ ಬಂದ ಮೇಲೆ ಅನೇಕ ನೂತನ ಆಸೆಗಳು, ನೂತನ ವಿಚಾರಗಳು ನನ್ನ ಹೃದಯವನ್ನು ಆಕ್ರಮಿಸಿವೆ. ಅವೆಲ್ಲವನ್ನೂ ತೊರೆಯಲು ಅಸಮರ್ಥನಾಗಿದ್ದೇನೆ. ಆದರೆ ಹಠಾತ್ ಎಲ್ಲವೂ ಬುಡಮೇಲಾಯಿತು. ಈಗ ನನ್ನ ತಲೆಯ ಮೇಲೆ ಒಂದು ಹೊಣೆ ಬಿದ್ದಿದೆ. ಒಲ್ಲೆನೆಂದು ಉಳಿದುಕೊಳ್ಳುವ ಹಾಗಿಲ್ಲ. ಅದಕ್ಕಾಗಿ ಎಲ್ಲ ಆಶೆ-ಆಕಾಂಕ್ಷೆಗಳನ್ನು ಹೊಡೆದು ಕೆಡವಲೇ ಬೇಕಾಗಿದೆ. ಮಾನವ ಜಾತಿಯ ವಿಶಾಲ ಕಾರ್ಯಕ್ಷೇತ್ರ ನನ್ನನ್ನು ಕರೆಯುತ್ತಿದೆ, ನಾನು ಕಿವಿಮುಚ್ಚಿಕೊಂಡು ಇರಲಾರೆ. "

" ಈ ಹೊಸಹಾದಿ ತಮಗೆ ಬೇಕಾದುದೇ ಅಲ್ಲವೆ ? " ಯುವತಿ ತಲೆ ತಗ್ಗಿಸಿಕೊಂಡು ಪ್ರಶ್ನಿಸಿದಳು.

" ನನ್ನಿಚ್ಛೆಯಂತೆ ಕೆಲಸ ನಡೆಯುವುದಾಗಿದ್ದರೆ, ಈ ಹಾದಿಯನ್ನು ಬಿಟ್ಟು ನಾನು ಆಂತರಿಕ ಸುಖದ ಹಾದಿಯನ್ನು ಹಿಡಿಯುತ್ತಿದ್ದೆ " ಎಂದ ಯುವಕ.

ಎಷ್ಟೋ ಹೊತ್ತು ಯಾರೂ ಮಾತಾಡಲಿಲ್ಲ. ಬಳಿಕ ಯುವತಿಯೆಂದಳು : " ಹೋಗಲಿಕ್ಕೆ ನನ್ನ ಅಡ್ಡಿಯೇನೂ ಇಲ್ಲ. ಆದರೆ ಓಯಾಲ್ಜ ನೃತ್ಯವನ್ನು ನನಗೆ ಕಲಿಸಿ ಹೋಗಿರಿ. ಅಕಾ, ವಾದನ ಆರಂಭವಾಗಿದೆ. ಬೇಗ ಉಪಹಾರ ಮುಗಿಸಿಕೊಳ್ಳಬೇಕು. "

ಇಬ್ಬರೂ ಹತ್ತಿರದ ಹೋಟೆಲಿಗೆ ಹೋದರು. ಎಲ್ಲರೂ ಸೋಜಿಗದಿಂದ ಅವರನ್ನೇ ನೋಡುತ್ತಿದ್ದರು. ಇಂತಹ ಅಂದದ ಪುರುಷನನ್ನೂ ಚೆಂದದ ನಾರಿಯನ್ನೂ ಜೊತೆಜೊತೆಯಾಗಿ ಅವರೆಂದೂ ನೋಡಿರಲಿಲ್ಲ.

ಯುವತಿ ಧನಾಢ್ಯರ ಮಗಳು; ಅವಳ ಮೈಯಲ್ಲಿ ಮಾರ್ಕಿಣರ ನೆತ್ತರು ಹರಿಯುತ್ತಿದೆ; ಸುಂದರಿಯಾಗಿದ್ದಷ್ಟೂ ಮಾತಿನಲ್ಲಿ ನಿಪುಣೆ. ಯುವಕನು ರೂಪವಂತನಿಷ್ಟೇ ಅಲ್ಲ, ಉಚ್ಚ ಕುಲದಲ್ಲಿ ಹುಟ್ಟಿದವನೆಂದು ಅವನ ಮುಖವೇ ಹೇಳುತ್ತಿತ್ತು; ಆವನ ಹೆಸರು ದಸೆ ಮಾತ್ರ ಯಾರಿಗೂ ಗೊತ್ತಿಲ್ಲ. ಹೋಟೆಳಿನಲ್ಲಿ ಯುವತಿಗೆ ಬಲು ಮಂದಿಯ ಗುರುತಿತ್ತು, ಗೆಳೆತನವಿದ್ದಿತು. ಯುವಕನೂ ಅದೇ ಹೊಟೆಲಿನಲ್ಲಿ ಇರುತ್ತಿದ್ದ. ಆದರೆ ಪ್ರತ್ಯೇಕವಾದ ಕೋಣೆಯೊಳಗೆ ಒಂಟಿಯಾಗಿ ಅವನ ವಾಸ. ಅವನು ಸಾಧಾರಣರ ಕಣ್ಣಿಗೆ ಬೀಳುವುದೇ ಅಪರೂಪ. ಈ ಅರ್ಧಮಾರ್ಕಿಣ ಯುವತಿಯೊಡನೆ ಮಾತ್ರ ಅವನ ಗುರುತು, ತಕ್ಕಮಟ್ಟಿಗೆ ಗೆಳೆತನವೂ ಉಂಟಾಗಿತ್ತೆನ್ನಿರಿ.

ಅಂದು ಯುವಕನು ಯುವತಿಯೊಂದಿಗೆ ಓಯಾಲ್ಜನ್ನು ನರ್ತಿಸಿದ. ಮರುದಿನ ನಸುಕಿನಲ್ಲಿ ಆವನು ಎರಡು ಜೋಡು ಕುದುರೆಗಳ ಬಂಡಿಯಲ್ಲಿ ಸಾಮಾನುಗಳನ್ನು ಹೇರಿಕೊಂಡು ಹೋಟೆಲನ್ನು ಬಿಟ್ಟ. ಬೀಳ್ಕೊಳ್ಳುವಾಗ ಯುವತಿಗೆಂದ : " ನಾನಿನ್ನು ಕರಾರಿಗೆ ಹೋಗಿ ರಾಜಕಾರ್ಯದಲ್ಲಿ ತೊಡಗಬೇಕು ಸಾಧ್ಯವಾದರೆ ಇಂದು ಎಕ್ಸ್‌ಪ್ರೆಸ್ ಗಾಡಿಯನ್ನೇ ಹತ್ತುವೆ. ನಿನಗೆ ಹೇಳಿ ಹೋಗಲು ಬಂದೆ. ಮುಂದೆ ಭೆಟ್ಟಿಯಾಗುವುದೊ ಇಲ್ಲವೊ ಯಾರು ಬಲ್ಲರು ? "

ಪೂರ್ಣದೃಷ್ಟಿಯಿಂದ ಯುವಕನ ಮೊಗವನ್ನು ನೋಡುತ್ತ ಅವಳೆಂದಳು : " ಹೋಗಿ ಬರ್ರಿ ಹಾಗಾದರೆ; ಮತ್ತೆ ಭೆಟ್ಟಿಯಾಗುವುದೆಂದು ನನಗೇನೋ ಆಸೆ. "

ಯುವತಿಯ ಕೈಯನ್ನು ಕುಲುಕಿ ಯುವಕನೆಂದ : " ಆಸೆಯಿಂದಲೇ ಮನುಷ್ಯ ಬದುಕುವುದು. ಈ ಯಾತ್ರೆ ಇಷ್ಟರವರೆಗೆ ! "

ಬಂಡಿ ಹೊರಟುಹೋಯಿತು. ಅದು ನೋಟದ ಗಡಿಯನ್ನು ದಾಟಿದ ಮೇಲೂ ಮಿಸ್ ಫೆನಿಸರ್ ಕೆಲಹೊತ್ತು ಆ ಹಾದಿಯನ್ನೇ ನೋಡುತ್ತಲೇ ಇದ್ದಳು. ಬಳಿಕ ಅನ್ಯಮನಸ್ಕಭಾವದಿಂದ ತನ್ನ ಕೋಣೆಯೊಳಗೆ ಹೋಗಿ ಬಾಗಿಲಿಕ್ಕಿಕೊಂಡಳು.

* * * *

ಎರಡು ವರುಷಗಳು ಗತಿಸಿದವು.

ಲಂಡನಿನ ಹೋಟೆಲೊಂದರಲ್ಲಿ ಮಿಸ್ ಪೆನಿಸರ್ ಇನ್ನೊಬ್ಬ ಯುವಕ ನೊಡನೆ ಮಾತನಾಡುತ್ತಲಿದ್ದಳು. "ವಿಲಂಬದಿಂದ ನನಗೆ ಬೇಸರವಾಗ ಲಿಲ್ಲ, ಸೊಗಸಾಗಿಯೆ ಹೊತ್ತುಗಳೆದೆ. ಇಲ್ಲಿ ಎಷ್ಟು ಬಗೆಯ ಜನ ಬರು ತ್ತಾರೆ! ಅವರ ನಡೆನುಡಿ, ಭಾವಭಂಗಿಗಳನ್ನು ನೋಡುವುದು ಎಷ್ಟು ಆನಂ ದದ ವಿಷಯ ! "

ಯುವಕನು ಅಧೀರಭಾವದಿಂದ ಮಾತನಾಡಿದ : " ಶನಿ ಆಳು ಬೇಗ ಕಾಫಿ ತರಲೊಲ್ಲ, ಇಪ್ಪತ್ತು ನಿಮಿಷ ಆಯಿತು ಬಂದು, ಯಾರೂ ಕೇಳುವ ವರೇ ಇಲ್ಲ. "

" ಇಂದಿಲ್ಲಿ ಬಲು ಗದ್ದಲ. ಅವರಿಗೆ ಕೈ ತೆರವೇ ಇಲ್ಲವೆಂದು ತೋರು ತ್ತದೆ. ಕಾಫಿಗಾಗಿ ಚಡಪಡಿಸಬೇಡಿರಿ. ಅಕೋ ಆ ಕಡೆ ಕುಳಿತವರ ಗುರುತು ನಿಮಗಿದೆಯೆ ? ಅಕಾ, ಆ ಕಡೆ ಕುಳಿತಿದ್ದಾರೆ; ದುಂಡುಮೋರೆ, ಉದ್ದುದ್ದ ಕೂದಲು; ಕೈ ಮೋರೆ ತಿರುವುತ್ತ ಮಾತನಾಡುತ್ತಿದ್ದಾರೆ;– ಅವರು ಯಾರು?"

ಕನ್ನಡಕವನ್ನು ಸರಿಯಾಗಿ ಧರಿಸಿ ಯುವಕ ಆ ಮನುಷ್ಯನ ಕಡೆ ನೋಡಿದ. " ಅವರೊಬ್ಬ ವಿಖ್ಯಾತ ಪಿಯಾನೋ ವಾದಕರು, ಆಸ್ಟ್ರೇಲಿಯ ದಿಂದ ಬಂದಿದ್ದಾರೆ. ಅವರ ಬದಿಯಲ್ಲಿ ಕುಳಿತು ಮಾತನಾಡುವ ಹೆಂಗುಸು ಅಪೆರಾದಲ್ಲಿ ಗಾಯಿಕೆ. ಇನ್ನುಳಿದ ಮೂರು ನಾಲ್ಕು ಜನರು ಬಣಜಿಗರು; ಎಲ್ಲರೂ ತುಂಬ ಹಣವಂತರು. "

" ಆ ಗಿಡ್ಡ ಮನುಷ್ಯ, ಕನ್ನಡಕ ಹಾಕಿದವರು ಯಾರು ? "

ಯುವಕನು ನಕ್ಕು ಉತ್ತರವಿತ್ತ : " ಈಗ ನಾನು ಸೋತೆ. ಅವರ ಗುರುತು ನನಗಿಲ್ಲ; ಮುಖ ನೋಡಿದರೆ ಮಾರ್ಕಿಣ ಪ್ರವಾಸಿಯಂತಿದೆ. ರವಿವಾರ ಸಂಜೆಯಲ್ಲಿ ಇಲ್ಲಿಯ ಹೋಟೆಲುಗಳಲ್ಲಿ ಎಷ್ಟು ತೆರದ ಜನ ನೋಡಲು ಸಿಕ್ಕುತ್ತಾರೋ, ಹೇಳಲಿಕ್ಕಾಗದು. "

" ನಾನಿಲ್ಲಿಗೆ ಬಂದು ಒಳ್ಳೇ ಸೊಗಸಾಗಿದ್ದೇನೆ. ನಮ್ಮ ದೇಶದವರು ಇಲ್ಲಿ ಯಾರೂ ಇಲ್ಲ ನಿಜ, ಆದರೂ ನಾನಾ ದೇಶಗಳ ನಾನಾ ಜಾತೀಯ ಜನರನ್ನು ನೋಡಿ ನನಗೆ ಮನೋರಂಜನೆಯಾಗುತ್ತಿದೆ. "

ಆ ಯುವಕ ಯುವತಿಯರಲ್ಲಿ ತುಂಬ ಮಾತುಕತೆ ನಡೆದಿದ್ದವು. ಆದರೆ ಯುವತಿಯ ವಿಶೇಷ ಪರಿಚಯ ಯುವಕನಿಗೆ ಆಗಿರಲಿಲ್ಲ. ಅವಳ

ವಯಸ್ಸು ಇಪ್ಪತ್ತೆಯ್ದನ್ನು ಮಿಕ್ಕಿಲ್ಲ. ಉಚ್ಚ ಕುಲದಲ್ಲಿ ಹುಟ್ಟಿದವಳು. ಧನಾಢ್ಯರ ಕನ್ನೆ. ಅತ್ಯಂತ ಸುಂದರಿ. ಒಳ್ಳೆಯ ವಾಚನಾಭಿರುಚಿಯುಳ್ಳ ವಳು, ಎಷ್ಟೋ ಪುಸ್ತಕಗಳನ್ನು ಓದಿಕೊಂಡವಳು ಎಂದು ಅವಳ ಮಾತು ಕತೆಯಿಂದ ಕಂಡುಬರುತ್ತಿತ್ತು. ಇಂಗ್ಲಂಡಿನ ಶ್ರಮಜೀವಿಗಳ ಏಳಿಗೆಗಾಗಿ ಈ ಯುವತಿ ಬಹಳ ಹಣ ಕೊಟ್ಟಿದ್ದಾಳೆಂತಲೂ ವಿಲಾಯತಿಯ ಸೋಶಾಲಿಸ್ಟ ಸಂಪ್ರದಾಯದಲ್ಲಿ ಇವಳಿಗೆ ಅತ್ಯಂತ ಸಹಾನುಭೂತಿಯೆಂತಲೂ—ಆ ಸಂಪ್ರ ದಾಯದಲ್ಲಿ ಸೇರಿದವಳೆಂದೂ ಕೂಡ— ವದಂತಿಯಿದ್ದಿತು. ಲಂಡನಿನ ಹೆಸ ರಾದ ಥೇಟರೊಂದರಲ್ಲಿ ಅವಳು ಅಭಿನೇತ್ರಿಯಾಗಿದ್ದಳು ಅವಳ ಮೊಗದಲ್ಲಿ ಕೊಂಚ ಫ್ರಾನ್ಸ್ ಸ್ತ್ರೀಯರ ಹೋಲಿಕೆಯಿತ್ತು.

ಆ ಆಂಗ್ಲಯುವಕ ಸರ್ ಜಿಲ್ಬರ್ಟ್ ಕೆರಿಂಗ್‌ಹಲ್, ಇಂಗ್ಲಿಶ್ ಸೈನ್ಯ ಪಡೆಯ ಒಬ್ಬ ಕರ್ನಲ್. ಆತ ಉಚ್ಚಸಮಾಜಕ್ಕೆ ಸುಪರಿಚಿತ. ಪ್ರಾಚೀನ ಶ್ರೀಮಂತಕುಟುಂಬಕ್ಕೆ ಸೇರಿದಾತ. ಅನೇಕ ಕ್ಲಬ್ಬುಗಳಲ್ಲಿ ಸದಸ್ಯನಾಗಿ ದ್ದಾನೆ. ನಿಪುಣ ಬೇಟೆಗಾರನೆಂದು ಹೆಸರುವಾಸಿ. ರಾಜಪರಿವಾರದೊಡ ನೆಯೂ ಆತನ ಘನಿಷ್ಠ ಸಂಬಂಧವಿತ್ತು. ಆತನಿನ್ನೂ ಮದುವೆ ಮಾಡಿ ಕೊಂಡಿಲ್ಲ, – ನಾರೀಜಾತಿಯ ಪಕ್ಷಪಾತಿಯಾಗಿರಲಿಲ್ಲ. ಆದರೆ ಈ ಯುವ ತಿಯ ರೂಪು ಮಾತ್ರ ಅವನನ್ನು ಸೆಳೆಯದೆ ಬಿಡಲಿಲ್ಲ.

ರಾತ್ರಿ ಹೆಚ್ಚಿತು. ಇದ್ದವರು ಎದ್ದು ಹೋದರು, ಹೊಸಬರು ಬಂದರು. ತುಸ ಹೊತ್ತಿನ ಮೇಲೆ ಒಬ್ಬ ಹೊಸ ಮನುಷ್ಯನ ಕಡೆ ಯುವತಿಯ ದೃಷ್ಟಿ ಹೋಯಿತು. " ಈಗ ಬಂದರಲ್ಲ, ಯಾರಿವರು ? " ಕೇರಿಂಗ್‌ಹಲ್ಲನ್ನು ಆಕೆ ಕೇಳಿದಳು.

ಬಂದ ಮನುಷ್ಯ ಒಂದು ಕುರ್ಚಿಯಲ್ಲಿ ಕುಳಿತು ಸಿಗಾರೇಟ್ ಸೇದುತ್ತ ಸುತ್ತಲೂ ನೋಡಿದ. ಹಠಾತ್ ಅವನ ನೋಟ ಯುವತಿಯ ನೋಟದೊ ಡನೆ ಬೆರೆಯಿತು. ಯುವತಿಯ ಮುಖ ಪರಿಚಿತವೆಂಬಂತೆ ತೋರಿತವ ನಿಗೆ. ಆದರೂ ಅವನು ಬಿಂದುಮಾತ್ರವೂ ಕೌತೂಹಲವನ್ನು ಪ್ರಕಟಿಸಲಿಲ್ಲ.

ಅವನ ಕಡೆ ನೋಡಿ ಸರ್ ಜಿಲ್ಬರ್ಟ್ ಯುವತಿಗೆ ಹೇಳಿದ : " ಯಾರೋ ಗುರುತಿಲ್ಲ. ಎಲ್ಲಿಯೋ ನೋಡಿದಂತೆ ಎನಿಸುತ್ತದೆ; ಎಲ್ಲೆಂಬುದು ನೆನಪಾಗುತ್ತಿಲ್ಲ. "

" ಈ ಮೋರೆ ನನಗೂ ಅಪರಿಚಿತವಲ್ಲ. ಇವರು ಯಾರೆಂಬುದನ್ನು ಅರಿತುಕೊಳ್ಳದೆ ಬಿಡುವಂತಿಲ್ಲ "

ಯುವತಿಯೊಡನೆ ಒಬ್ಬ ಪ್ರೌಢೆಯಿದ್ದಳು, ಅವಳ ಅಬಚಿ. ಅವಳೆಂದಳು: " ನಿನಗಂತೂ ಎಲ್ಲರನ್ನೂ ಅರಿತುಕೊಳ್ಳುವ ಹುಚ್ಚು. ಬೇಕಾದರೆ ಅವರನ್ನು ಕರೆದು ಮಾತಾಡಿಸು. ನಾನು ಬೇರೆ ಕೆಲಸಕ್ಕೆ ಹೋಗುತ್ತೇನೆ. "

" ಅವರ ಪರಿಚಯಕ್ಕಾಗಿ ನಿನಗೇಕಿಷ್ಟು ಆಗ್ರಹ ? " ನಕ್ಕು ಕೇಳಿದ ಕೇರಿಂಗ್‌ಹಲ್.

" ಕಾರಣವಿದೆ. " ಯುವತಿಯೂ ನಕ್ಕು ನುಡಿದಳು.

ಎಳೆಹರಯದ ಯುವಕರಿಬ್ಬರು ಒಬ್ಬರೊಬ್ಬರ ಹೆಗಲಮೇಲೆ ಕೈಹಾಕಿಕೊಂಡು ಕೋಣೆಯೊಳಗೆ ಬಂದರು. ಆ ಹೊಸಬನನ್ನು ಕಂಡ ಕೂಡಲೆ ಬೆಚ್ಚಿನಿಂತರು. ಅವರ ಮುಖಗಳಲ್ಲಿ ಭಯ ಒಡಮೂಡಿತು. ಆ ಮನುಷ್ಯನಿಗೆ ಗೌರವದಿಂದ ಅಭಿವಂದಿಸಿ ತ್ವರೆಯಿಂದ ಬೇರೆ ಕಡೆ ಹೊರಟುಹೋದರು.

ಯುವತಿ ಹೇಳಿದಳು: " ಸರ್ ಜಿಲ್ಬರ್ಟ್, ಈ ಇಬ್ಬರ ಗುರುತು ನಿಮಗೀರ ಬೇಕಲ್ಲವೆ? ಈ ಮನುಷ್ಯ ಯಾರೆಂದು ಅವರನ್ನು ಹೋಗಿ ಕೇಳಿ."

ಆಗಂತುಕನ ವಿಷಯವನ್ನು ಅರಿತುಕೊಳ್ಳಲು ಅವಳಂತೆ ಕೇರಿಂಗ್‌ಹಲ್ಲೂ ಉತ್ಸುಕನಾಗಿದ್ದ. ಅವನೆದ್ದು ಅವರಿಬ್ಬರನ್ನು ಹುಡುಕಿಕೊಂಡು ಹೊರಹೊರಟ. ಅವರಿಬ್ಬರೂ ಮೊಗಸಾಲೆಯ ಒಂದು ಮೂಲೆಯಲ್ಲಿ ನಿಂತುಕೊಂಡು ಮೆಲುದನಿಯಲ್ಲಿ ಏನೋ ಮಾತನಾಡುತ್ತಿದ್ದರು. ಕೇರಿಂಗ್‌ಹಲ್ ಅವರಲ್ಲಿ ಹಿರಿಯ ಹುಡುಗನಿಗೆಂದ: " ತಮ್ಮಾ, ನಿನಗೊಂದು ಶುಭಸಂದೇಶ ಹೇಳುತ್ತೇನೆ. ವಿಖ್ಯಾತ ಅಭಿನೇತ್ರಿ ಮಿಸ್ ಪೆನಿಸರ್ ನಿಮ್ಮನ್ನೊಮ್ಮೆ ಕಾಣಬೇಕೆಂದು ಬಲು ಹಾರಯಿಸುತ್ತಾಳೆ. "

ಅವನೆಂದ: " ಅವರಿಂದು ಇಲ್ಲಿ ಬಂದಿದ್ದಾರೆಯೇ ? ನಾವು ನೋಡಲಿಲ್ಲವಲ್ಲ ? ನಾವು ಹೋಟೆಲಿನ ಎಲ್ಲ ಕೋಣೆಗಳನ್ನೂ ಸುತ್ತಾಡಿ ಬಂದೆವು. "

" ಅವರು ನನ್ನ ಹತ್ತಿರವೇ ಕುಳಿದ್ದರು. ನೀವು ನಮ್ಮ ಹತ್ತಿರವೇ ಹಾಯ್ದುಹೋದಿರಿ; ಅವರನ್ನು ನೋಡಲಿಲ್ಲವೇ ? ನನ್ನೊಡನೆ ಬಾ, ಮಿಸ್ ಪೆನಿಸರಿಗೆ ನಿನ್ನೊಡನೇನೋ ಮಾತನಾಡುವುದಿದೆಯಂತೆ. "

ಒಂದು ದೊಡ್ಡ ಥೇಟರಿನ ಸರ್ವಶ್ರೇಷ್ಠ ನಟಿಯೊಬ್ಬಳು ತಮ್ಮನ್ನು ಕಾಣಬಯಸುತ್ತಾಳೆಂದರೆ, ಮೋಹಗೊಳ್ಳದ ಯುವಕರು ಏಸು ಜನ ?

ಆದರೆ ಆ ಯುವಕರಿಬ್ಬರೂ ಮೋಹವನ್ನು ನಿಗ್ರಹಿಸಿದರು. ಜ್ಯೇಷ್ಠ ಯುವಕನು ಗೋಣು ಹಾಕಿ ಉತ್ತರವಿತ್ತ: “ ಮಹಾಶಯರೆ, ತಮ್ಮ ಅನುಗ್ರಹಕ್ಕಾಗಿ ಧನ್ಯವಾದ. ಆದರೆ ಕ್ಷಮಿಸಿರಿ, ನಮಗೀಗ ಅವಕಾಶವಿಲ್ಲ. ನಾವೀಗಲೇ ಒಂದು ಕಡೆ ಹೋಗಬೇಕಾಗಿದೆ. ” ಎಂದು “ ಹೇಗೆ ಡೆಸ್‌ಮಂಡ್ ? ” ಎಂದು ತನ್ನ ಸಂಗಡಿಗನ ಕಡೆ ನೋಡಿದ.

ಡೆಸ್‌ಮಂಡ್ ಹೇಳಿದ: “ ಹೌದು, ನಾವೀಗಲೇ ಹೊರಡಬೇಕು.”

ಕೇರಿಜ್ಡ್‌ಲ್ ಎಂದ: “ಹಾಗಿದ್ದರೆ ನಾನು ನಿಮ್ಮನ್ನು ಅದಕ್ಕಾಗಿ ಆಗ್ರಹ ಪಡಿಸುವುದಿಲ್ಲ. ಮಿಸ್ ಪೆನಿಸರರನ್ನು ಕಾಣಲು ಸಾಧ್ಯವಿಲ್ಲದಿದ್ದರೆ, ನನ್ನ ಒಂದು ಪ್ರಶ್ನೆಗಾದರೂ ಉತ್ತರ ಕೊಡಲು ಆತಂಕವಿರಲಾರದೆಂದು ಭಾವಿ ಸುತ್ತೇನೆ. ನಾವು ಕುಳಿತಿದ್ದ ಕೋಣೆಯಲ್ಲಿ ಕುಳಿತಿದ್ದ ಸದ್ಗೃಹಸ್ಥರು— ನೀವು ನಮಸ್ಕರಿಸಿ ತತ್‌ಕ್ಷಣ ಹಿಂತಿರುಗಲಿಲ್ಲವೇ ? ಅವರು – ಯಾರು, ಹೇಳಬಹುದೆ ? ”

ಯುವಕನು ಗೋಣುಹಾಕಿ ಉತ್ತರವಿತ್ತ: “ ಇಲ್ಲ ಮಹಾಶಯ, ತಾವು ತಪ್ಪಾಗಿ ತಿಳಿದುಕೊಂಡಿದ್ದೀರಿ. ಹೋಟೆಲಿನಲ್ಲಿ ನಮ್ಮ ಯಾವ ಪರಿಚಿ ತರನ್ನೂ ಕಾಣಲಿಲ್ಲ. ಯಾರಿಗೆ ನಮಸ್ಕರಿಸಿದೆವು ? ”

ಕೇರಿಜ್ಡ್‌ಲ್ಲನಿಗೆ ಆಶ್ಚರ್ಯವಾಯಿತು. ಯುವಕನು ಏಕೆ ಹಾರಿಸಿ ಕೊಂಡು ಮಾತನಾಡುವನೆಂಬುದು ಅವನಿಗೆ ತಿಳಿಯದಾಯಿತು. ತನಗಾದ ಅಚ್ಚರಿಯನ್ನು ತೋರಗೊಡದೆ ಮಾತನಾಡಿದ, “ ನಾನು ನಿಚ್ಚಳವಾಗಿ ನೋಡಿದ್ದೇನೆ—ನೀನು, ನಿನ್ನ ಗೆಳೆಯ ಆ ಸದ್ಗೃಹಸ್ಥರಿಗೆ ನಮಸ್ಕರಿಸಿ ವ್ಯಸ್ತಭಾವದಿಂದ ಮರಳಿದಿರಿ. ”

“ ಮಹಾಶಯರೇ, ಓ ಅವರೇ, ಗೊತ್ತಾಗಲಿಲ್ಲ; ಪರಿಚಿತರೇನೋ ಎಂದು ಭ್ರಮಿಸಿ ಅವರಿಗೆ ನಮಸ್ಕಾರಮಾಡಿದೆವು. ಹಿಂದುಗಡೆ ಅಪರಿಚಿತ ರೆಂದು ಗೊತ್ತಾಗಲು ಹೊರಳಿಬಂದೆವು. ”

ಕೆಲಹೊತ್ತು ಕೇರಿಜ್ಡ್‌ಲ್ ನಿರ್ವಾಕ್ಕಾಗಿ ನಿಂತಿದ್ದ. ಇವರು ಸುಳ್ಳಾಡು ತ್ತಿದ್ದಾರೆಂದು ಅವನಿಗೆನಿಸಿತು. ಆದರೂ ಅವನು ಅವರನ್ನು ಹೆಚ್ಚು ಪೀಡಿಸ ಲಿಲ್ಲ. “ ನಿಮಗೆ ಸುಮ್ಮನೆ ತೊಂದರೆ ಕೊಟ್ಟಂತಾಯಿತು, ಮನಸಿಗೆ ಏನೂ ತಿಳಿದುಕೊಳ್ಳಬೇಡಿರಿ, ” ಎಂದ.

ಸರ್ ಜಿಲ್ಬರ್ಟ್ ಅಪ್ರಸನ್ನಚಿತ್ತದಿಂದ ತಿರುಗಿಹೋದ ಅವನು ಕುಳಿತಿದ್ದ ಕುರ್ಚಿಯ ಅಕ್ಕಪಕ್ಕದ ಕುರ್ಚಿಗಳಲ್ಲಿ ಮಿಸ್ ಪೆನಿಸರ್ ಮತ್ತು ಅವಳ ಅಬಚಿ ಕುಳಿದ್ದರು. ಅವನು ತಿರುಗಿ ಬಂದಾಗ ಬಿಟ್ಟು ಹೋದ ಕುರ್ಚಿ ತೆರವಿರಲಿಲ್ಲ; ಯಾವನೋ ಗಂಡಸು ಅದನ್ನು ಆಕ್ರಮಿಸಿದ್ದ. ಜಿಲ್ಬರ್ಟನು ಆಶ್ಚರ್ಯದಿಂದ, ಕಣ್ಣಿಗೆ ಕನ್ನಡಕವನ್ನು ಧರಿಸಿ ಯಾರೆಂದು ದಿಟ್ಟಿಸಿ ನೋಡಿದ. ತಾನು ಯಾರ ವಿಷಯವನ್ನು ತಿಳಿದುಕೊಳ್ಳುವುದಕ್ಕಾಗಿ ಹೋಗಿದ್ದನೋ ಆ ಸದ್ಗೃಸ್ಥನೇ ! ಹೆಂಗುಸರಿಬ್ಬರ ನಡುವೆ ಕುಳಿತು ಮೈಮರೆದು ಮಾತನಾಡುತ್ತಲಿದ್ದ.

೨

" ನಾನು ತಮ್ಮನ್ನು ಗುರುತಿಸದೆ ಹೋಗಿದ್ದರೆ ತಾವು ನನ್ನನ್ನು ಮಾತನಾಡಿಸದೆ ಹೋಗುತಿದ್ದಿರೇನೋ " ಎಂದಳು ಮಿಸ್ ಪೆನಿಸರ್.

" ನೀನು ನನ್ನನ್ನು ಗುರುತಿಸೀಯೆಂದು ನನಗೆನಿಸಿರಲಿಲ್ಲ. " ಆಗಂತುಕ ಯುವಕನೆಂದ.

" ಸೇಂಟ್ ಮರಿಜ್ನಲ್ಲಿ ತಾವು ನನಗೆಷ್ಟೋ ಅನುಗ್ರಹಿಸಿದ್ದೀರಿ, ಓಯಾಲ್ಜ್ ನೃತ್ಯವನ್ನು ಕಲಿಸಿದ್ದೀರಿ; ತಮ್ಮನ್ನು ಮರೆಯುವುದು ಅಷ್ಟು ಸಹಜವೇ ? ಅಂದಿನ ದಿನಗಳನ್ನು ಕೊಂಚ ನೆನೆದುಕೊಳ್ಳಿರಿ—ಎಷ್ಟು ಸೊಗಸಾಗಿದ್ದವು ! ಬೆಳಗೂ ಬೈಗೂ ಇಬ್ಬರೂ ಕೊಳದ ದಡದಲ್ಲಿ ಎಷ್ಟು ಆನಂದದಿಂದ ಹೊತ್ತುಗಳೆಯುತ್ತಿದ್ದೆವು ! ಅಂಥ ಸುಂದರಸ್ಥಾನವನ್ನು ಜೀವನದಲ್ಲಿ ಕಂಡುದೇ ವಿರಳ. "

" ಒಳ್ಳೇ ಚಮತ್ಕಾರವಾದ ಸ್ಥಾನ. ಈ ವರ್ಷ ಅಲ್ಲಿಗೆ ಹೋಗಿದ್ದೆಯಾ ? "

" ನಮ್ಮ ಅಬಚಿಗೆ ಅದು ಅಷ್ಟೊಂದುಸೇರಲಿಲ್ಲ. ಆದುದರಿಂದ ಬರ್ಡಿಮೋಯರಿಗೆ ಹೋಗಿದ್ದೆ. " ಎಂದು ನುಡಿದು ಮಿಸ್ ಪೆನಿಸರ್ ಅಬಚಿಯ ಕಡೆ ನೋಡಿ " ನಿನಗೆ ಪಿಟರ್ಸರ ಗುರುತು ಸಿಕ್ಕಲಿಲ್ಲವೆ ? ಎರಡು ವರುಷಗಳ ಹಿಂದೆ ಸೇಂಟ್ ಮರಿಜ್ನಲ್ಲಿದ್ದರು; ಆಗ ಯಾವಾಗಲೂ ಇವರ ಭೆಟ್ಟಿ ಆಗುತ್ತಿತ್ತು ನಮಗೆ. "

ಅಬಚಿ ನಕ್ಕು ನುಡಿದಳು: " ಹಾಂ ನೆನಪಿದೆ. ಬಹಳ ದಿನಗಳ ಮೇಲೆ ಮಿ. ಪಿಟರ್ಸರನ್ನು ಕಂಡದ್ದು ಸಂತೋಷ."

" ಅಬಚಿ ನಾಳೆಯೆ ಅಮೇರಿಕೆಗೆ ಹೋಗುತ್ತಾಳೆ. ನಾನಿಲ್ಲಿ ಒಬ್ಬಳೇ ಇರಬೇಕಾಗುವುದು. ಸೇಂಟ್ ಮರಿಜ್ನಲ್ಲಿ ಎಲ್ಲರೂ ತಮ್ಮನ್ನು ಒಳ್ಳೇ ಅದ್ಭುತ ಮನುಷ್ಯರೆಂದು ತಿಳಿದಿದ್ದಾರೆ '' ಮಿಸ್ ಪೆನಿಸರ್ ನುಡಿದಳು.

" ಏಕೆ ? " ಪಿಟರ್ಸ್ ಕೇಳಿದ.

" ತಾವು ಯಾರೊಡನೆಯೂ ಬೆರೆಯುತ್ತಿರಲಿಲ್ಲ; ನಾಲ್ಕು ಜನರ ಪಙ್ತಿ ಯಲ್ಲಿ ಉಣ್ಣುತ್ತಿರಲಿಲ್ಲ; ಬರೀ ಗುಡ್ಡ ಬೆಟ್ಟ ಅಲೆಯುತ್ತಿದ್ದಿರಿ; ಕೊನೆಗೊಂದು ದಿನ ಅಂತರ್ಧಾನ ಹೊಂದಿದಿರಿ; ಎಲ್ಲಿಗೆ ಹೋದಿರೋ ಯಾರಿಗೂ ತಿಳಿಯದು. ತಮ್ಮನ್ನು ಅದ್ಭುತ ಮನುಷ್ಯರೆಂದು ಏಕೆನ್ನಬಾರದು ? ''

" ಆಕಸ್ಮಾತ್ ಹೊರಡಬೇಕಾಯಿತು, ಹೊರಟೆ. ಮಂದಿಯೊಡನೆ ಸೇರುವುದು ನನಗೆ ಸೇರುವುದಿಲ್ಲ. ಅದಕ್ಕೇ ಬೇರೆ ಕೋಣೆಯಲ್ಲಿದ್ದೆ."

ಪೆನಿಸರ್ ನಕ್ಕು, " ತಾವು ಸಾಧಾರಣರಲ್ಲವೆಂದು ತೋರುತ್ತದೆ. ಅಲ್ಲಿಗೆ ಏತಕ್ಕಾಗಿ ಹೋಗಿದ್ದಿರಿ ? '' ಎಂದಳು.

" ಗಾಳಿಯ ಬದಲಾವಣೆಗಾಗಿ; ಕೊಂಚ ಕೆಲಸವೂ ಇತ್ತು."

'' ಆಮೇಲೂ ತಮ್ಮನ್ನೊಮ್ಮೆ ನೋಡಿದ್ದೇನೆ."

" ಎಲ್ಲಿ ? ''

" ಪ್ಯಾರಿಸ್ನಲ್ಲಿ ಫ್ರಾನ್ಸಿನ ಸಾಧಾರಣ ತಂತ್ರದ ಸಭಾಪತಿಯ ಆತಿಥ್ಯ ವನ್ನು ಸ್ವೀಕರಿಸಿ ಅರಮನೆಯಿಂದ ಹೊರಟಿದ್ದಿರಿ; ತಮ್ಮ ಬಂಡಿಯ ಹಿಂದೂ ಮುಂದೂ ಸಶಸ್ತ್ರ ಸೈನಿಕರಿದ್ದರು. ನೋಡಿ ನನಗೆ ಅತ್ಯಂತ ಆಶ್ಚರ್ಯ ವಾಯಿತು."

" ನನ್ನನ್ನು ಸೆರೆಹಿಡಿದು ಒಯ್ಯುತ್ತಿದ್ದಾರೆಂದು ಭಾವಿಸಿರಬಹುದಲ್ಲವೇ ನೀನು ?"

" ಇಲ್ಲ, ತಮ್ಮ ಗೌರವಕ್ಕಾಗಿ ಸೈನಿಕರ ಯೋಜನೆಯಾಗಿತ್ತೆಂದು ತಿಳಿದುಕೊಂಡೆ."

" ನೀನು ನೋಡಿದ್ದು ನನ್ನನ್ನಲ್ಲ. ಅದಿರಲಿ. ನೀನು ಇಲ್ಲಿಗೆ ಆಗಾಗ ಬರುತ್ತಿರುತ್ತಿಯಾ ?"

"ಇಲ್ಲ, ಇದೇ ಮೊದಲು ಬಂದದ್ದು. ನಮ್ಮಬಚಿಗೆ ಹೋಟೆಲಿಗೆ ಬರುವುದು ಸೇರುವುದಿಲ್ಲ. ಸರ್ ಜಿಲ್ಬರ್ಟ್ ಕೇರಿಜ್ಜಲ್ ನಮ್ಮ ಬಹುದಿನದ ಗೆಳೆಯರು; ಅವರು ಅಬಚಿಯನ್ನು ಬೀಳ್ಕೊಡಲು ಭೋಜನವನ್ನೇರ್ಪಡಿಸಿದ್ದರಿಂದ ಇಂದು ಬಂದಿದ್ದೆ."

"ಈಗೆರಡು ವರುಷ ಎಲ್ಲಿದ್ದೆ ?"

"ಕೆಲದಿನ ಅಮೆರಿಕೆಯಲ್ಲಿದ್ದೆ, ಬಳಿಕ ಈ ದೇಶಕ್ಕೆ ಬಂದು ಎಂಪ್ರೆಸ್ ಥೇಟರಿನಲ್ಲಿ ಅಭಿನೇತ್ರಿಯಾಗಿ ಸೇರಿದ್ದೇನೆ."

"ನೀನು ಮಾರ್ಕಿಣ್ ?"

ಅದಕ್ಕೆ ಪೆನಿಸರ್ ನಕ್ಕು ಉತ್ತರವಿತ್ತಳು: "ತಾವು ಆಂಗ್ಲರು ಹೇಗೋ ಹಾಗೆ ನಾನು ಮಾರ್ಕಿಣ್."

"ನಾನು ಆಂಗ್ಲನಲ್ಲವೆಂದು ಹೇಗೆ ಅರಿತೆ ?"

"ಎಲ್ಲ ರೀತಿಯಿಂದ."

"ನನ್ನ ತಾಯಿ ಆಂಗ್ಲಪುತ್ರಿ"

"ತಮ್ಮ ತಾಯಿ ಅಷ್ಟೆಯೆ ? ಹಾಗಿಂದಾರೆ ತಮ್ಮ ಹೆಸರು ಪಿಟರ್ಸ್ ಹೇಗೆ ?"

"ನನ್ನ ನಿಜವಾದ ಹೆಸರು ಪಿಟರ್ಸಲ್ಲ." ಪಿಟರ್ಸ್ ಕತ್ತೆತ್ತಿ ಹೇಳಿದ.

"ಸೇಂಟ್‌ಮರಿಜ್ನಲ್ಲಿ ಈ ಹೆಸರನ್ನೇ ಹೇಳಿದ್ದಿರಿ."

"ಹಾಗೆ ಹೇಳಬೇಕೆಂದೆನಿಸಿತ್ತು."

"ಈಗ ಹಾಗೆ ಎನಿಸುವುದಿಲ್ಲವೆ ?"

"ಎನಿಸುತ್ತದೆ. ಇಲ್ಲಿಯೂ ಪಿಟರ್ಸಾಗಿಯೆ ಇದ್ದೇನೆ."

"ತಮ್ಮ ಬಂಧುಬಾಂಧವರಲ್ಲಿ ?"

"ನನಗೆ ಬಂಧುಬಾಂಧವರು ಯಾರೂ ಇಲ್ಲ." ಪಿಟರ್ಸ್ ನಗೆಯೊಡನೆ ಹೇಳಿದ.

"ಪ್ರಯತ್ನಿಸಿದರೆ ಸಿಕ್ಕಲಾರರೆ ? ಇನ್ನೂ ಬೇಕಾಗಿಲ್ಲವೆ ?"

"ಇಲ್ಲ. ಯಾರ ಬಂಧುತ್ವವನ್ನಾದರೂ ಕಟ್ಟಿಕೊಂಡರೆ, ನಾನು ಯಾರೆಂಬುದು ತಿಳಿದೊಡನೆ ಎಲ್ಲರೂ ವಿಮುಖರಾಗಿ ಬಿಡುವರು; ಯಾರೂ ನನ್ನ ಬಂಧುತ್ವವನ್ನು ಒಪ್ಪಲಾರರು."

" ನಿಜವಾಗಿಯೂ ಹಾಗೆ ತಮ್ಮ ನಂಬುಗೆಯೆ ? " ಅಸ್ಫುಟಸ್ವರದಲ್ಲಿ ಪೆನಿಸರ್ ಕೇಳಿದಳು.

" ಹೌದು. "

" ಪ್ರಂಪಚದ ವ್ಯಾಪಾರವೇ ವಿಚಿತ್ರ. ಬದುಕಿರುವುದೇ ಒಮ್ಮೊಮ್ಮೆ ಕಷ್ಟಕರವೆಂದು ತೋರುತ್ತದೆ. ಆತ್ಮವಂಚನೆಗಿಂತ ದುಃಸಹವಾದ ಪಾಪ ಯಾವುದು ? ಜನರ ಗೆಳೆತನ ಗಳಿಸಿಕೊಂಡಿದ್ದರೆ ಅವರ ಸಹವಾಸದಲ್ಲಿ ಮನ ಸಿನ ಭಾರ ಎಷ್ಟೋ ಹಗುರಾಗುವುದು. ತಾವು ಒಬ್ಬಿಬ್ಬರೊಡನೆ ಗೆಳೆತನ ಮಾಡುವಿರಾ ? "

ಪೆನಿಸರಿಗೆ ಈ ವಿಷಯದಲ್ಲಿ ಇಷ್ಟೇಕೆ ಆಸಕ್ತಿ ? — ಪಿಟರ್ಸ್ ಈ ಪ್ರಶ್ನೆಯನ್ನೇನೂ ವಿಚಾರಿಸದೆ, ಹಠಾತ್ " ನಾನು ಯಾರೆಂದು ಬಲ್ಲೆಯಾ?" ಎಂದು ಕೇಳಿದ.

" ಇಲ್ಲ ಅದನ್ನು ನನಗೆ ತಿಳಿಸಬೇಕೆಂದು ಇಚ್ಛೆಯಿದ್ದರೆ ಒಂದಿ ಲ್ಲೊಂದು ದಿನ ತಾವು ಹೇಳಿಯೆ ಹೇಳುವಿರೆಂದು ನನ್ನ ಭರವಸೆ " ಎಂದಳು ಪೆನಿಸರ್.

ಅಷ್ಟೊತ್ತಿಗೆ ಜಿಲ್ಬರ್ಟ್ ಬಂದುದನ್ನು ಕಂಡು ಪೆನಿಸರ್ ನುಡಿದಳು: " ಸರ್ ಜಿಲ್ಬರ್ಟ್ ಕೇರಿಜ್ಬಲ್, ಇವರು ಮಿ. ಪಿಟರ್ಸ್. ಎರಡು ವರುಷಗಳ ಹಿಂದೆ ಸೇಂಟ್ ಮರಿಜ್ನಲ್ಲಿ ಇವರ ಪರಿಚಯವಾಗಿತ್ತು. ಇವರು ನನಗಾಗ ಓಯಾಲ್ಜ್ ನೃತ್ಯವನ್ನು ಕಲಿಸಿದ್ದರು. ನಾನು ಇವರನ್ನು ನೋಡಿದೊಡನೇ ತಮಗೆ ಹೇಳಿದ್ದೆನಲ್ಲ, ಇವರನ್ನೆಲ್ಲಿಯೋ ನೋಡಿದಂತಿದೆ ಎಂದು. "

ಸರ್ ಜಿಲ್ಬರ್ಟ್ " ಮಿ. ಪಿಟರ್ಸರ ಮುಖ ನನಗೂ ಅಪರಿಚಿತವೆಂದು ಕಾಣುತ್ತಿಲ್ಲ. ಮಹಾಶಯರೆ, ಈ ಮೊದಲೆಲ್ಲಿಯಾದರೂ ನಮ್ಮ ನಿಮ್ಮ ಭೆಟ್ಟಿ ಯಾಗಿತ್ತೆ ? " ಎಂದ.

ಪಿಟರ್ಸ್ ಹೇಳಿದ: " ನೆನಪಿಲ್ಲ ನಾನು ತಮ್ಮ ಕುರ್ಚಿಯನ್ನು ಆಕ್ರ ಮಿಸಿ ಕುಳಿತಿದ್ದೆ. ತಾವು ಕುಳಿತುಕೊಳ್ಳಿರಿ, ನಾನು ಹೊರಡುತ್ತೇನೆ. "

" ಬೇಡ ಬೇಡ ತಾವು ಏಳುವ ಅಗತ್ಯವಿಲ್ಲ. ಇನ್ನೊಂದು ಕುರ್ಚಿ ಯನ್ನು ತರಿಸುತ್ತೇನೆ. " ಎಂದ ಜಿಲ್ಬರ್ಟ್.

"ನಾನಿನ್ನು ನಿಲ್ಲುವಂತಿಲ್ಲ ಮಾತಾಡುತ್ತಾಡುತ್ತಾ ಬಹಳ ಹೊತ್ತಾಗಿ ಬಿಟ್ಟಿತು. ಒಂದು ಕಡೆ ಆಮಂತ್ರಣವಿದೆ. ಸ್ವಲ್ಪ ಹೊತ್ತಿನಲ್ಲಿ ಅಲ್ಲಿಗೆ ಹೋಗ ಬೇಕು. ಸರ್ ಜಿಲ್ಬರ್ಟ್, ತಮ್ಮ ಗುರುತಾದದ್ದು ನನಗೊಂದು ಸಂತೋಷ. ತಮ್ಮ ಹೆಸರನ್ನು ಬಹಳ ಕೇಳಿದ್ದೆ."

ಪಿಟರ್ಸ್ ಪೆನಿಸರಳಿಂದ ಬೀಳ್ಕೊಂಡು ಎದ್ದ. ಅವಳೆಂದಳು: "ನಮ್ಮ ಥೀಟರನ್ನು ನೋಡಲಿಕ್ಕೆ ಬನ್ನಿರಲ್ಲ ಒಮ್ಮೆ."

"ಬರುತ್ತೇನೆ" ಎಂದು ನುಡಿದು ಪಿಟರ್ಸ್ ಹೊರಟುಹೋದ

"ಏನಾದರೂ ಗೊತ್ತಾಯಿತೆ?" ಪಿಟರ್ಸ್ ಹೋದ ಬಳಿಕ ಪೆನಿಸರ್ ಜಿಲ್ಬರ್ಟನನ್ನು ಪ್ರಶ್ನಿಸಿದಳು.

"ಇಲ್ಲ ಅವರೇಕೋ ಸುಳ್ಳು ಹೇಳಿ ಹಾರಿಸಿಕೊಂಡು ಬಿಟ್ಟರು. ಬೇರೆ ಯಾರೋ ಗುರುತಿನವರೆಂಬ ಭ್ರಮೆಯಿಂದ ಅವರು ಈ ಗೃಹಸ್ಥರಿಗೆ ನಮಸ್ಕರಿ ದರಂತೆ, ವೃಥಸ್ಟೋ ಹೇಳಿದ. ತಿರುಗಿ ಬಂದು ನೋಡುತ್ತೇನೆ. —ಅವರು ನಿನ್ನ ಪರಿಚಿತರು. ನಾನು ಸುಮ್ಮನೆ ಶ್ರಮಪಟ್ಟೆ" ಎಂದು ಹೇಳಿದ ಜಿಲ್ಬರ್ಟ್.

ಪೆನಿಸರ್ ನಕ್ಕು ನುಡಿದಳು: "ಹಾಂ, ಪರಿಚಿತರು. ಅವರ ಹೆಸರು ಮಿ. ಪಿಟರ್ಸ್ ಎಂದಿಷ್ಟು ಬಲ್ಲೆ."

* * * * *

ಮೂರನೆಯ ಭೆಟ್ಟಿ ಥೀಟರಿನಲ್ಲಿ. ಭೆಟ್ಟಿಯ ಪ್ರಣಾಲಿಯೂ ಸ್ವಲ್ಪ ವಿಚಿತ್ರ ತೆರೆ ಏಳುವುದಕ್ಕೆ ಸ್ವಲ್ಪ ಸಮಯ ಮುಂಚೆ ಇಂಗ್ಲಂಡೇಶ್ವರನ ಬಕಿಂಗ್‌ಹ್ಯಾಮ್ ಅರಮನೆಯಿಂದ, ಈದಿನ ರಾಜಪರಿವಾರದ ಆಸನವನ್ನು ಉಪಯೋಗಿಸಲಾಗುವುದೆಂದು ಸೂಚನೆ ಬಂದಿತು. ಅಂದು ಒಂದು ಹೊಸ ನಾಟಕದ ಅಭಿನಯವಿತ್ತು. ಈ ಸುದ್ದಿಯನ್ನು ಕೇಳಿ ಮೊದಲ ದಿನದ ನಾಟ ಕವು ಸರಿಯಾಗುವುದೋ ಇಲ್ಲವೋ ಎಂದು ನಟನಟಿಯರು ಗಾಬರಿಯಾ ದರು ಪೆನಿಸರ್ ಮಾತ್ರ ಉದಾಸೀನೆಯಾಗಿದ್ದಳು.

ತೆರೆ ಎದ್ದಿತು; ಅಭಿನಯದ ಆರಂಭವಾಯಿತು. ಮೊದಲ ಅಂಕದ ಲ್ಲಿಯೆ ಪೆನಿಸರಳ ಪ್ರವೇಶವಿದ್ದಿತು. ಹೀರಕಾಲಂಕಾರಗಳ ದ್ಯುತಿಯಲ್ಲಿ

ಅವಳ ಪ್ರತಿಭಾದೀಪ್ತ ಮುಖವು:ತೊಳಗುತ್ತಿತ್ತು. ಪ್ರಥಮಾಂಕದ ಅಭಿನಯ ದಲ್ಲಿಯೇ ಪ್ರೇಕ್ಷಕರೆಲ್ಲ ಮುಗ್ಧರಾಗಿ ಬಿಟ್ಟರು. ಅಪ್ಸರೆಗೆ ಸಾಟಿಯಾದ ರೂಪವತಿಯೆಂದು ಮನದೊಳಗೆ ಕೊಂಡಾಡಿದರು.

ಪೆನಿಶರ್ ಯಾವ ಕಡೆಗೂ ನೋಡದೆ ತನ್ನ ಅಭಿನಯದಲ್ಲಿಯೇ ಮಗ್ನ ಳಾಗಿದ್ದಳು. ತೆರೆ ಬೀಳುವುದಕ್ಕೆ ಸ್ವಲ್ಪ ಪೂರ್ವದಲ್ಲಿ ಕುತೂಹಲದಿಂದ ರಾಜಾಸನದ ಕಡೆ ನೋಟವನ್ನು ಬೀರಿದಳು. ಅವಳಿಗೊಮ್ಮೆಲೆ ಬವಳಿ ಬಂದಂತಾಯಿತು. ಎದೆಯೊಳಗೆ ವೇದನೆಯಾಯಿತು ಕ್ಷಣಮಾತ್ರ ನೋಟ ವನ್ನು ತಗ್ಗಿಸಿ ಮತ್ತೊಮ್ಮೆ ಮೇಲೆತ್ತಿ ನೋಡಿದಳು. ರಾಜಾಸನದಲ್ಲಿ ಮಿ. ಪಿಟರ್ಸ್ !

ತೆರೆ ಬಿದ್ದಿತು ಮಿಸ್ ಪೆನಿಸರ್ ನಿಮಿಷವೂ ನಿಂದಿರದೆ ಒಂದುಸುರಿ ನಲ್ಲಿ ಆಡಳಿತಗಾರನ ಕೋಣೆಗೋಡಿದಳು. " ಮಿ ಕೇಲ್ಸಿ, ರಾಜಾಸನದಲ್ಲಿ ಕುಳಿತವರು ಯಾರವರು ? " ಎಂದು ಕೇಳಿದಳು

ಆಡಳಿತಗಾರನೆಂದ: " ಮಿಸ್ ಪೆನಿಸರ್, ಏನಾಯಿತು ? ಅವರ ಗುರುತಿಲ್ಲವೇ ? ಅವರು ಬಾರ್ಜಿಲಂಡಿನ ಯುವರಾಜರು. ಇಂದು ಬೆಳಗ್ಗೆ ಲಂಡನಿಗೆ ಬಂದಿದ್ದಾರೆ, ನಾಲ್ಕು ದಿನ ಇಲ್ಲಿ ಇರುತ್ತಾರಂತೆ. ಅತ್ಯಂತ ಸುಂದರರು ! "

" ಇಂದು ಬಂದಿದ್ದಾರೆಯೆ ? " ವಿಸ್ಮಯದಿಂದ ಕೇಳಿದಳು ಪೆನಿಸರ್.

"ಹೌದು, ಇಂದು ಮುಂಜಾನೆ ಬಂದಿದ್ದಾರೆ. ಪತ್ರಿಕೆಗಳಲ್ಲಿ ಓದಿಲ್ಲವೆ? ತುರುಕ ಕುದುರೆ ದಳದವರು ಅವರನ್ನು ಸನ್ಮಾನಿಸಿ ಬರಮಾಡಿಕೊಂಡರು. ಮಿಸ್ ಪೆನಿಸರ್, ನೀನೇ ಇಂದು ನಮ್ಮ ಥೇಟರಿನ ಮಾನ ಕಾಯ್ದೆ. ಉಳಿ ದವರೆಲ್ಲರೂ ಕಲ್ಲಾಗಿ ಬಿಟ್ಟಗು "

" ಒಂದು ತಾಲಿ ನೀರು ತರಲಿಕ್ಕೆ ಹೇಳಿರಿ. ಬಲು ದಾಹ. "

ಆಡಳಿತಗಾರರು ಹೊರಟು ಹೋಗಲು ಪೆನಿಸರ್ ತನ್ನ ವೇಷರಚನೆಯ ಕೋಣೆಗೆ ಹೋದಳು. ತಲೆಯಲ್ಲಿ ಅದೇ ವಿಚಾರದ ಗೊಣಗು— ಎಂತಹ ವಿಚಿತ್ರ ! ಬಾರ್ಜಿಲಂಡಿನ ಯುವರಾಜಗು ಸೋಮವಾರ ಬಂದಿದ್ದರೆ, ರವಿ-ವಾರ ರಾತ್ರಿ ಹೋಟಲಿನಲ್ಲಿ ಮಿ ಪಿಟರ್ಸರನ್ನು ನೋಡಿದುದು ಹೇಗೆ ? ಮಿ ಪಿಟರ್ಸ ಯಾರು ?

೩

ಎರಡು ದಿನಗಳ ತರುವಾಯದ ಸಂಗತಿ. ವೃತ್ತಪತ್ರಿಕೆ ಮಾರುವವನು ಮಿಸ್ ಪೆನಿಸರಿಗೆ ಒಂದು ಪತ್ರಿಕೆಯನ್ನು ಒತ್ತಾಯದಿಂದ ಮಾರಿ ಹೋಗಿದ್ದ. ಅವಳು ತನ್ನ ವೇಷರಚನೆಯ ಕೋಣೆಯಲ್ಲಿ ಕುಳಿತು ಬಿಡುವಿನ ಸಮಯದಲ್ಲಿ ಅದನ್ನು ತೆರೆದೋದತೊಡಗಿದಳು. ಮೊದಲು ಅವಳ ಕಣ್ಣಿಗೆ ಬಿದ್ದ ಸುದ್ದಿಯಲ್ಲಿಯೆ ನೋಟವು ಕೀಲಿಸಿಬಿಟ್ಟಿತು. ಬಾರ್ಜಿಲಂಡ್ ಯುವರಾಜರ ಇಜ್ಲಂಡ್ ತ್ಯಾಗದ ಬಗೆಗೆ ಏನೇನೋ ವಿಷಯಗಳು ಅದರಲ್ಲಿ ಚರ್ಚಿತವಾಗಿದ್ದವು

ಪೆನಿಸರ್ ಪತ್ರಿಕೆಯನ್ನು ಚೆಲ್ಲಿ, ಕುರ್ಚಿಯಲ್ಲಿ ಬಿದ್ದುಕೊಂಡು ಕಣ್ಣು ಮುಚ್ಚಿ ಯೋಚಿಸತೊಡಗಿದಳು. 'ಬಾರ್ಜಿಲಂಡಿನ ಯುವರಾಜರೂ ಮಿ. ಪಿಟರ್ಸರೂ ಒಂದೇ ವ್ಯಕ್ತಿಯೆ ?' ಅವಳಿಗೆ ಪೊಡವಿ ಶೂನ್ಯವೆಂದು ತೋರಿತು; ಥೇಟರಿನ ಅಭಿನಯವು ವಿಡಂಬನೆಯಿಂದ ತುಂಬಿದ ಹುಡುಗಾಟದಂತೆ ಕಂಡಿತು; ಇಡೀ ಜೀವನವು ಹೀಗೆಯೆ ವೈಚಿತ್ರ್ಯಹೀನವಾಗಿ ಕಳೆಯುವುದೇ ಎಂದೆನಿಸಿತು; ತನ್ನ ಉದ್ದೇಶಹೀನವಾದ ವ್ಯರ್ಥ ನಾರೀ ಜೀವನವನ್ನು ಧಿಕ್ಕರಿಸಿದಳು.

ತೊತ್ತು ಬಂದು ಒಂದು ಪತ್ರವನ್ನು ಅವಳ ಕೈಗಿತ್ತಳು. ಲಕ್ಕೋಟಿಯನ್ನೊಡೆದು ಪೆನಿಸರ್ ಓದಿದಳು. ಬರೆದವರ ವಿಳಾಸ ಹತ್ತಿರದ ಯಾವುದೋ ಹೊಟೆಲೆಂದು ಲಕೋಟೆಯ ಮೇಲ್ಗಡೆಯಲ್ಲಿತ್ತು. ಪತ್ರ ಅತಿ ಸಂಕ್ಷಿಪ್ತವಾಗಿತ್ತು; ಎಣಿಸಿ ಎರಡೇ ಸಾಲುಗಳು

"ನಾನು ಇಂಗ್ಲಂಡನ್ನು ಬಿಡುವ ಮೊದಲು ನಿನ್ನನ್ನು ಕಾಣಬೇಕೆನ್ನುವೆ ನನ್ನ ಬಯಕೆ ಈಡೇರೀತೆ ? — ಜಾನ್ ಪಿಟರ್ಸ್."

ಪೆನಿಸರ್ ಚಟ್ಟನೆದ್ದು ಉತ್ತರ ಬರೆದಳು "ಖಂಡಿತವಾಗಿ. ನಂ. ೨೦. ರೆಡಿಸ್‌ಮ್ಯಾನ್ಸನಿನಲ್ಲಿ ನನ್ನ ಮನೆ. ಇಂದು ರಾತ್ರಿ ಅಲ್ಲಿಗೆ ಬನ್ನಿರಿ. ರಾತ್ರಿ ಸುಮಾರು ಹನ್ನೊಂದುವರೆಗೆ ನಾನು ಮನೆಗೆ ಹೋಗುವುದು. ನಾನು ಬರುವುದರೊಳಗೇ ತಾವು ಬಂದರಿರಲೆಂದು ಕೀಲಿಕೈ ಕಳಿಸಿದ್ದೇನೆ. ತಾವು ಮೊದಲೇ ಬಂದರೆ ದಯವಿಟ್ಟು ಬಾಗಿಲು ತೆಗೆದು ಒಳಗೆ ಕುಳಿತುಕೊಂಡಿರಿ."

ಕಾಗದವನ್ನೂ ಕೀಲಿಕೈಯನ್ನೂ ಲಕ್ಕೋಟೆಯಲ್ಲಿರಿಸಿ, ಅದರ ಬಾಯನ್ನು ಮುಚ್ಚಿ ಅಂಟಿಸಿ, ವಿಳಾಸವನ್ನು ಬರೆದು, ಮೆರಿ ಎಂಬೊಬ್ಬ ಅಬಚಿಯನ್ನು ಕರೆದು, ಅವಳ ಕೈಯಲ್ಲಿ ಕೊಟ್ಟು ಪೆನಿಸರ್ ಹೇಳಿದಳು: " ಈ ಪತ್ರವನ್ನು ತೆಗೆದುಕೊಂಡು ಸಾವ್ಹಯ್ ಹೋಟಲಿಗೆ ಹೋಗು; ಯಾರ ಪತ್ರವೋ ಅವರ ಕೈಯಲ್ಲಿಯೇ ಕೊಡು ಅವರಿಲ್ಲದಿದ್ದರೆ ಬರುವವರೆಗೆ ಕಾದಿದ್ದು ಬಂದ ಮೇಲೆ ಅವರಿಗೇ ಮುಟ್ಟಿಸು ಅಗತ್ಯದ ಪತ್ರ, ಅಸಡ್ಡೆ ಯಿಂದ ಅನ್ಯರ ಕಡೆ ಕೊಟ್ಟು ಬರಬೇಡ "

ಲಕೋಟೆಯ ಮೇಲ್ವಿಳಾಸವನ್ನೋದಿ ಅಬಚಿ ವಿಸ್ಮಿತಳಾದಳು ಇವಳಿ ಗೆಂದೂ ಇಂತಹ ಅಭ್ಯಾಸವಿರಲಿಲ್ಲ, ಎಂದಿನಿಂದ ಈ ಪರಿವರ್ತನ ? ಎಂದು ಕೊಂಡಳು ಮನಸಿನೊಳಗೆ. ಆದರೆ ತನ್ನ ಮನೋಭಾವವನ್ನು ಅವಳು ಪ್ರಕಟಗೊಳಿಸಲಿಲ್ಲ. ಪೆನಿಸರಳಲ್ಲಿ ಯಥೇಷ್ಟ ಶ್ರದ್ಧೆ ಅವಳಿಗೆ, ಬೇರೆ ಯಾವ ಕಲ್ಪನೆಗೂ ಅವಳ ಮನಸು ಎಡೆಗೊಡಲಿಲ್ಲ.

ಯಥಾಸಮಯದಲ್ಲಿ ಜಾನ್ ಪಿಟರ್ಸನಿಗೆ ಈ ಕಾಗದ ಮುಟ್ಟಿತು. ಅದನ್ನೋದಿಕೊಂಡು ಅವನು ಚಿಂತಾಮಗ್ನನಾದ: ' ನನ್ನಿಂದ ತಪ್ಪಾಗಲಿಲ್ಲ ತಾನೆ ? ಪೆನಿಸರ್ ನನ್ನ ಮನೋಭಾವವನ್ನು ಅರಿತುಕೊಂಡಳೆ ? '

ಕೊಂಚ ಹೊತ್ತಿನಲ್ಲಿ ವ್ಹಸ್ಟೊ ಬಂದ. " ಎಲ್ಲಾ ನೆಟ್ಟಗೊ ? " ಎಂದು ಪಿಟರ್ಸ ಕೇಳಿದ.

" ಎಲ್ಲಾ ಸರಿ. ಇಷ್ಟೊತ್ತಿಗೆ ತಾವು ಪ್ಯಾರಿಸಿನ ಮಾರ್ಗದಲ್ಲಿ ಗಾಡಿಯಲ್ಲಿ ರುವಿರೆಂದು ಜನ ತಿಳಿದಿದ್ದಾರೆ. " ಎಂದ ವ್ಹಸ್ಟೊ.

" ನಾನು ಇನ್ನೂ ಒಂದು ವಾರ ಇಲ್ಲಿರುತ್ತೇನೆ "

" ಬಹಳ ತಡವಾಗುವುದು. "

" ಏನು ನಷ್ಟ ? "

" ಕ್ರಮಕ್ರಮವಾಗಿ ವಿಪತ್ತು ಘನೀಭೂತವಾಗುವುದು. ಮೊನ್ನೆಯ ರವಿವಾರ ತಮ್ಮನ್ನು ಹೋಟೆಲಿನಲ್ಲಿ ಕಂಡು ನಮ್ಮ ದಲದವರೆಲ್ಲರೂ ಬೆದರಿ ಬಿಟ್ಟಿದ್ದೆವು. "

" ನಿಮ್ಮ ಭಾವವನ್ನು ಕಂಡು ನನಗೊಳ್ಳೇ ಸೊಗಸೆನಿಸುತ್ತಿತ್ತು. ನನ್ನನ್ನು ಯಾರೂ ಗುರುತಿಸಲಿಲ್ಲ. "

" ಆದರೆ ಕೇರಿಂಗ್‌ಹಲ್ ತಮ್ಮ ಪರಿಚಯವನ್ನು ಕೇಳಿಕೊಳ್ಳಲು ಬಹಳ ಆತುರರಾಗಿದ್ದರು. ಅವರು ಅಷ್ಟು ಸಾಮಾನ್ಯರಲ್ಲ. ''

" ಕೇರಿಂಗ್‌ಹಲ್ಲರ ಉದ್ದೇಶ ಸಫಲವಾಗಲಿಲ್ಲ. ಅವರೊಂದಿಗೆ ಮಾತನಾಡುತ್ತ ಕುಳಿತಿದ್ದ ಯುವತಿ ಮಾತ್ರ ನನ್ನನ್ನು ಜಾನ್ ಪಿಟರ್ಸ ಎಂದು ಗುರುತಿಸಿದಳು. ಸೇಂಟ್ ಮರಿಜ್ನಲ್ಲಿ ಮೊದಲು ಅವಳ ಗುರುತಾಗಿತ್ತು. "

" ತಾವು ಹೇಳುವುದು ಅಭಿನೇತ್ರಿ ಗ್ರೇಸ್ ಪೆನಿಸರಳ ಬಗ್ಗೆ ತಾನೆ ? "

" ಹೌದು. ''

" ಸೋಮವಾರ ರಾತ್ರಿ ಅವರ ಥೇಟರಿಗೆ ತಾವು ಹೋಗಿದ್ದಿರಿ, ನೆನಪಿದೆಯೆ ? ''

" ಅಲ್ಲಿ ಗ್ರೇಸ್ ನನ್ನನ್ನು ಗುರುತಿಸಲಿಲ್ಲ "

" ಆದರೆ ತಾವು ಮಾಡಿದ್ದು ಸರಿಯಾಗಲಿಲ್ಲ. ತಾವು ಯಾರೆಂಬುದು ಪ್ರಕಟವಾದರೆ ಎಂತಹ ಕುತ್ತವುಂಟೆಂಬುದನ್ನು ಮರೆಯದಿರಿ ''

" ನಿಜ, ನಗೆಗೀಡಾಗುವ ಸಂಭವ ಹೆಚ್ಚಾಗಿದೆ; ಸಂಕಲ್ಪವೂ ವ್ಯರ್ಥವಾದೀತು. ಆದರೆ ಹಲವು ತಡೆ ತೊಂದರೆಗಳನ್ನು ದಾಟದೆ ಹೋದರೆ ಕಾರ್ಯಸಿದ್ಧಿಯ ಆಶೆಯೆ ಇಲ್ಲ. ಸಿದ್ಧಿಯ ಮಾರ್ಗವು ಅತ್ಯಂತ ದುರ್ಗಮ "

" ಅದೃಷ್ಟದಲ್ಲಿ ನಿಮ್ಮ ಭರವಸೆ ಬಹಳ. "

" ಅದನ್ನು ವಿಚಾರಮಾಡುತ್ತಾ ಕುಳಿತರೆ, ಯಾರಿಂದಲೂ ಯಾವ ಕಠಿನಕಾರ್ಯವೂ ಆಗುವುದು ಸಾಧ್ಯವಿಲ್ಲ. ಇಂದು ರಾತ್ರಿ ಅಗತ್ಯದ ಕೆಲಸವೇನಾದರೂ ಇದೆಯೆ ? " ಎಂದು ಪಿಟರ್ಸ್ ಕೇಳಿದ.

" ಇಲ್ಲ ಮಹಾಶಯ. " ಎಂದ ವ್ಲಸ್ಟೊ.

" ದೇಶದಿಂದ ಪತ್ರಗಿತ್ರ ಬಂದಿದೆಯೆ ? "

" ಇಲ್ಲ. ಪತ್ರಿಕೆಯಲ್ಲಿ ಓದಿದೆ, ನಿನ್ನೆ ವ್ಹೆರಿಯದಲ್ಲಿ ಗಲಭೆಯಾಗಿದೆ "

" ಸಾವು - ನೋವು ಬಹಳವಾಗಿದೆಯೆ ? "

'' ಆರುಜನ ಒಕ್ಕಲಿಗರಿಗೆ ಗುಂಡಿಕ್ಕಲಾಗಿದೆ ಎಂದು ಪತ್ರಿಕೆಯ ಸುದ್ದಿ. ಮುಂಜಾನೆ ಏನೆಂಬುದು ತಿಳಿಯುವುದು. "

"ಅತ್ಯಂತ ಲಜ್ಜಾಸ್ಪದ ಸಂಗತಿ ಆ ದುರ್ದೈವಿಗಳಿಗಾಗಿ ದುಃಖವಾಗುತ್ತದೆ."

ಪಿಟರ್ಸ್ ಅಗ್ನಿಕುಂಡದ ಕಡೆ ಶೂನ್ಯದೃಷ್ಟಿಯಿಂದ ನೋಡುತ್ತ ತಗ್ಗಿದ ಸ್ವರದಲ್ಲಿ ನುಡಿದ : "ಎಲ್ಲಿಡೆಯೂ ಸಮಾನವ್ಯವಸ್ಥೆ. ಅನಂತಕಾಲದಿಂದಲೂ ನಡೆದು ಬಂದ ಕಟಕವೃತ್ತಿಗೆ ವಿರಾಮವೇ ಇಲ್ಲ. ಸಕಲದೇಶದಲ್ಲಿಯೂ ಜನ ಸಾಧಾರಣರು, ಸ್ವಾತಂತ್ರ್ಯರಕ್ಷಣೆಗಾಗಿ ಜೀವನವನ್ನು ತೆತ್ತವರ ಆತ್ಮತ್ಯಾಗದ ಫಲವಾಗಿ ಸ್ವಾತಂತ್ರ್ಯದ ಅಮೃತರಸವನ್ನು ಸವಿಯುವರು."

"ಅಲ್ಲ, ಅವರು ಸ್ವೇಚ್ಛೆಯಿಂದಲೇ ಆತ್ಮೋತ್ಸರ್ಗ ಮಾಡುವರು, ಹೆರವರ ಹೇಳಿಕೆಯಿಂದ ತಲೆ ಕೊಡುವುದಿಲ್ಲ."

"ಹೌದು, ಸ್ವೇಚ್ಛೆಯಿಂದಲೇ. ಆದರೆ ಅವರು ಸಾಯುವುದಂತೂ ನಿಜ."

"ಸಾಯುವರು ನಿಜ ಆದರೆ ಯಾರೂ ತಮ್ಮ ವಿಪತ್ತಿನ ಧ್ವಜವನ್ನು ಹೆಗಲಮೇಲೆ ಧರಿಸಿಕೊಂಡೆ ದೇಶ ದೇಶ ತಿರುಗುವುದಿಲ್ಲ."

"ಈ ಮಾತು ಪೂರಾ ಸುಳ್ಳಲ್ಲ. ಆಗಾಗ ನಾನು ಅದಕ್ಕಾಗಿ ತೊಂದರೆಯಲ್ಲಿ ಬೀಳಬೇಕಾಗುತ್ತಿದೆ. ನನ್ನ ಹಗೆಗಳ ಸಂಖ್ಯೆ ದೊಡ್ಡದಿದ್ದಂತೆ ಕಾಣುತ್ತಿದೆ."

"ಇನ್ನೂ ಸಂದೇಹವೇನು ?"

"ಹನ್ನೆರಡು ಜನ ಶತ್ರುಗಳು ಮಸೆದ ಚೂರಿ ಹಿಡಿದು ನನ್ನನ್ನು ಇರಿದು ಕೊಲ್ಲಲು ಗುಪ್ತವಾಗಿ ನಾಲ್ಕೂ ಕಡೆ ತಿರುಗುತ್ತಿರುವರೆಂದೆನಿಸುತ್ತದೆ. ಹೀಗೆ ಜನರ ತಿರಸ್ಕಾರ-ಕ್ರೋಧಗಳಿಗೆ ಪಾತ್ರನಾಗುವುದು ಕೆಟ್ಟೇನು ? ವ್ಹಸ್ಕೋ, ನಿನ್ನ ಹೊಟ್ಟೆಯಲ್ಲಿ ಮಾತು ನಿಲ್ಲುವುದಷ್ಟೆ ? ಒಂದು ಗುಟ್ಟಿನ ಮಾತನ್ನು ಅಲ್ಲಿಟ್ಟುಕೊಳ್ಳುವೆ ತಾನೆ ?" ಎಂದು ಪಿಟರ್ಸ್ ಕೇಳಿದ.

"ಏಕೆ ಇಟ್ಟುಕೊಳ್ಳಲಾರೆ ? ಏನು ಹೇಳಿರಿ." ಎಂದ ವ್ಹಸ್ಕೊ.

"ನಾನೊಬ್ಬ ಸ್ತ್ರೀಯ ಭೆಟ್ಟಿಗೆ ಹೋಗುವೆ"

"ಈಪೊತ್ತು ರಾತ್ರಿಯೇ ಏನು ?" ವ್ಹಸ್ಕೋ ಆಶ್ಚರ್ಯದಿಂದ ಕೇಳಿದ.

"ಹೌದು, ಈಗಲೇ ಹೋಗಬೇಕು. ಇದನ್ನು ನಿನಗೆ ಹೇಳಲು ಕಾರಣವೆಂದರೆ, ನಾನು ಎಲ್ಲಿಗೆ ಹೋಗಿರುವೆನೆಂಬುದು ಕೊನೆಯ ಪಕ್ಷ ಒಬ್ಬನಿಗಾ

ದರೂ ತಿಳಿಯುವುದು ಉಚಿತ ನಂ ೨೦, ರೇಡಿಸ್ ಮೂನ್ಸನ್ನಿಗೆ ಹೋಗು ತ್ತಿದ್ದೇನೆ "

ಒಮ್ಮೆಲೆ ಕಾವಳದಂತಾಯಿತು ವ್ಯಾಸ್ಟೋನ ಮೋರೆ. ಗಂಭೀರಸ್ವರದಲ್ಲಿ ಅವನೆಂದ: " ಬೇಡ, ತಾವು ಹೋಗುವುದು ಬೇಡ. "

" ಭಯವೇನು ? ನಾನು ಪ್ಯಾರಿಸಿಗೆ ಹೋಗಿರುವೆನೆಂದು ತಿಳಿದು, ನನ್ನ ಶತ್ರು ಹರ್ಜ್‌ಮನ್ ಮತ್ತು ಅವನ ಸಂಗಡಿಗರು ಅಲ್ಲಿಯೆ ನನ್ನನ್ನು ಅನು ಸರಿಸುವರೆಂದು ನಿಃಸಂದೇಹವಾಗಿ ಹೇಳಬಲ್ಲೆ. "

" ಅಷ್ಟು ನಂಬಬೇಡಿರಿ ಹರ್ಜ್ಮನ್ ಬಲು ಚತುರ. ತಮ್ಮ ಪ್ಯಾರಿಸ ಗಮನದ ವಾರ್ತೆಯನ್ನು ಅವನು ನಂಬಲಿಕ್ಕೂ ಇಲ್ಲ. "

" ವ್ಯಾಸ್ಟೋ, ಎಲ್ಲಕ್ಕೂ ಇಷ್ಟು ಅಂಜಿಕೊಂಡರೆ ಹೇಗೆ ? ಅದೃಷ್ಟದಲ್ಲಿ ನಂಬಿಗೆಯಿರಬೇಕು; ಹಣೆಯಲ್ಲಿ ಬರೆದೇ ಇದ್ದರೆ, ಇಂದು ರಾತ್ರಿ ನಾನು ಹೊರಗೆ ಹೋಗಿ ಸಂಕಟದಲ್ಲಿ ಬೀಳುವವನೆ; ಅದನ್ನು ತಪ್ಪಿಸುವುದು ಯಾರಿಗೂ ಸಾಧ್ಯವಿಲ್ಲ. "

ಪ್ರಭುಭಕ್ತನಾದ ಸೇವಕನಿಗೆ ಇದನ್ನು ಕೇಳಿ ವ್ಯಥೆಯಾಯಿತು. ಅವ ನೆಂದ: " ಹಾಗಾದರೆ ತಾವು ಬರುವವರೆಗೂ ನಾನಿಲ್ಲಿ ಕಾಯ್ದುಕೊಂಡು ಕುಳಿತಿರಲೆ ? ರಾಜದೂತ ಭವನದಲ್ಲಿ ನನ್ನದೇನೂ ಕೆಲಸವಿಲ್ಲ ಈಗ. "

" ಹೆಚ್ಚು ತಡವೇನೂ ಆಗುವುದಿಲ್ಲ. ಆದರೆ ಏನಾದರೂ ತೊಂದರೆ ಘಟಿಸಿದರೆ ಬೇಗನೆ ಬರುವೆನೆಂದಾದರೂ ಹೇಗೆ ಹೇಳಲಿ ? ಮುಂದೇನೋ ಹೇಳಲು ಬರುವುದಿಲ್ಲ. "

ಪಿಟರ್ಸ್ ಎದ್ದು ಒಂದು ಚುರೂಟನ್ನು ಹೊತ್ತಿಸಿದ. ಅಕಸ್ಮಾತ್ ವ್ಯಾಸ್ಟೋನ ಕಡೆ ದೃಷ್ಟಿ ಹರಿಯಿತು. ಅವನ ಮುಖವು ಅತ್ಯಂತ ಮಲಿನವಾ ಗಿತ್ತು; ಕಣ್ಣುಗಳು ಒದ್ದೆಯಾಗಿದ್ದವು. ಸ್ನೇಹದ ಸ್ವರದಲ್ಲಿ ಪಿಟರ್ಸ್ ಎಂದ: " ಏನಾಯಿತು ವ್ಯಾಸ್ಟೋ ? ಏಕೆ ಅಂಜುವೆ ? ನಾನು ಭೆಟ್ಟಿಗೆ ಹೋಗುವ ಯುವತಿ ನಮ್ಮ ಪೈಕಿಯೇ ಒಬ್ಬಳು. ಯಾವುದೋ ಹೀನ ಷಡ್ಯಂತ್ರದಲ್ಲಿ ಸಹಕರಿಸಲು ಹೋಗುತ್ತಿದ್ದೇನೆಂದು ಭಾವಿಸಬೇಡ. "

" ತಮ್ಮ ಮಾತಿನಲ್ಲಿ ನನಗೆ ಅವಿಶ್ವಾಸವಿಲ್ಲ. ಸ್ತ್ರೀಜಾತಿಯೆಂದರೆ ನನಗೆ ಸೇರಿಕೆಯಿಲ್ಲ ಅಷ್ಟೇ. ಅನೇಕ ಮಹಾಪುರುಷರ ಅಧಃಪತನಕ್ಕೆ ಸ್ತ್ರೀಯರೇ ಕಾರಣರಾಗಿರುವರು. " ಎಂದ ವ್ಯಾಸ್ಟೋ.

ಜಾನ್ ಪಿಟರ್ಸ್ ಆಕಡೆ ಕಿವಿಗೊಡದೆ ಕೋಣೆಯಿಂದ ಹೊರಬಿದ್ದ.

## ೪

ಗ್ರೇಸ್ ಪೆನಿಸರಳ ಮನೆಯ ಬಾಗಿಲಿಗೆ ಬೀಗ ಹಾಕಿತ್ತು. ಪಿಟರ್ಸ್ ಕೀಲಿಯನ್ನು ತೆಗೆದು ಬಾಗಿಲನ್ನು ತೆರೆದು ಒಳಗೆ ಹೋದ. ನಾಲ್ಕೂ ಕಡೆ ನೋಡಿದ. ಯಾರೂ ಕಾಣಲಿಲ್ಲ. ಆ ಮನೆಯಲ್ಲಿ ಕುಳಿತುಕೊಳ್ಳುವ ಕೋಣೆಗಳು ಎರಡಿದ್ದವು. ಎರಡರ ನಡುವೆ ಒಂದು ಮರದ ಹಲಗೆ ಮಾತ್ರ. ಕೋಣೆಯ ಒಂದು ಕಡೆಯಲ್ಲಿ ಊಟದ ಮೇಜು. ಇನ್ನೊಂದು ಕೋಣೆಯಲ್ಲಿ ಒಂದು ಪಿಯಾನೋ, ಕೆಲವು ಆರಾಮಾಸನಗಳು, ಒಂದು ಚಿಕ್ಕ ಮೇಜು; ಅದರ ಮೇಲೆ ಒಂದು ಪುಷ್ಪಪಾತ್ರೆ, ಒಂದು ರಾಶಿ ವೃತಪತ್ರ-ಮಾಸಪತ್ರಗಳು. ಮೇಜಿನ ಸನಿಯದಲ್ಲಿ ಹೊತ್ತಿದ ಅಗ್ಗಿಷ್ಟಿಗೆ. ಸೆಲ್ಫೊಂದರಲ್ಲಿ ಎಷ್ಟೊ ಭಾವಚಿತ್ರಗಳು, ಅವುಗಳಲ್ಲಿ ಹೆಚ್ಚು ಹೆಂಗುಸರವೆ; ಕಾವ್ಯ-ಕಾದಂಬರಿ-ಚರಿತ್ರ ಇತ್ಯಾದಿ ಪುಸ್ತಕಗಳೂ ಹಲವು ಹೊಂದಿಸಿಟ್ಟಿದ್ದವು

ಮೇಜಿನ ಮೇಲೆ ಒಂದು ಪತ್ರಿಕೆ ತೆರೆದಿರಿಸಿತ್ತು. ಅದರಲ್ಲಿ ಒಂದು ಲೇಖನದಲ್ಲಿ ಸೀಸಕಡ್ಡಿಯಿಂದ ಗುರುತು ಮಾಡಿತ್ತು. ಅದು ಪಿಟರ್ಸನ ನೋಟವನ್ನೆಳೆಯಿತು. ಅವನು ಪತ್ರಿಕೆಯನ್ನೆತ್ತಿಕೊಂಡು ನೋಡಿದ. 'ಯುರೋಪದಲ್ಲಿ ಎಲ್ಲಕ್ಕಿಂತ ಅಧೋಗತಿಗಿಳಿದ ರಾಜ್ಯ,' ಎಂದಿತ್ತು ತಲೆಬರೆಹ. ಲೇಖನವನ್ನೋದದೆಯೇ ತನ್ನ ಸ್ವದೇಶ ಬರ್ಜಿಲಂಡೇ ಆ ದೇಶವೆಂದು ಅವನು ತಿಳಿದ. ಏಕೆಂದರೆ ಹಿಂದಕ್ಕೆಷ್ಟೊ ಪತ್ರಿಕೆಗಳಲ್ಲಿ ಈ ತರದ ಲೇಖನಗಳನ್ನು ಅವನು ಓದಿದ್ದ.

ಪಿಟರ್ಸ್ ಆ ಬರೆಹದ ಗುರುತಿಸಿದ ಭಾಗವನ್ನು ಓದಿದ. ಬರ್ಜಿಲಂಡಿನ ರಾಜಯುವರಾಜರ ಆಚರಣೆಯನ್ನು ಕುರಿತು ಅದರಲ್ಲಿ ಕಟುವಾದ ಚರ್ಚೆಯಿತ್ತು. —ರಾಜಯುವರಾಜರಿಬ್ಬರ ಚರಿತ್ರಗಳೂ ಅತ್ಯಂತ ದೂಷಿತವಾಗಿವೆ; ಇಂದ್ರಿಯಲೋಲುಪತೆಯಿಂದಾಗಿ ಇಬ್ಬರೂ ರಾಜಪುರುಷರ ಮತ್ತು ಪ್ರಜಾಸಾಮಾನ್ಯರ ಅಪ್ರೀತಿಗೆ ಗುರಿಯಾಗಿದ್ದಾರೆ; ವೃದ್ಧರಾಜನ ಇಂದ್ರಿಯ ಪರಾಯಣತೆಯನ್ನು ಎಲ್ಲರೂ ಅಕ್ಷಮ್ಯ ಅಪರಾಧವೆಂದು ಬಗೆಯುತ್ತಾರೆ; ಸುಸಭ್ಯ ಯುರೋಪಿಗೆ ಬರ್ಜಿಲಂಡ್ ಕಲಂಕಪ್ರಾಯವಾಗಿದೆ; ಅಲ್ಲಿ ಶಾಸನಸಮ್ಮತವಲ್ಲದ ಉಪಾಯದಿಂದ ತೆರಿಗೆಯನ್ನು ಎತ್ತಲಾಗುತ್ತದೆ; ಮಂತ್ರಿ

ಮಂಡಲ ಪೀಡಕವಾಗಿದೆ; ಪ್ರಜೆಗಳು ವಿದ್ರೋಹದ ಹಾದಿಯಲ್ಲಿದ್ದಾರೆ;.... ಇತ್ಯಾದಿಯಾಗಿ ಅದರಲ್ಲಿ ಬರೆದಿತ್ತು.

ಬರೆಹವನ್ನು ಮನಗೊಟ್ಟು ಓದಿ ಪಿಟರ್ಸ್ ಪತ್ರಿಕೆಯನ್ನು ಕೆಳಗಿಟ್ಟ. ಅಷ್ಟರಲ್ಲಿ ಮಿಸ್ ಪೆನಿಸರ್ ದಾಸಿಯೊಬ್ಬಳೊಂದಿಗೆ ಬಂದಳು. ದಾಸಿ ಬೇರೆ ಕೋಣೆಗೆ ಹೊರಟು ಹೋಗಲು ಪೆನಿಸರ್ ಕೇಳಿದಳು : "ಪತ್ರಿಕೆಯಲ್ಲಿ ಏನು ಓದುತ್ತಿದ್ದಿರಿ ?"

ಪಿಟರ್ಸ್ ಪತ್ರಿಕೆಯನ್ನು ಕೆಳಗೆಸೆದು ಅವಳ ಮುಖದ ಕಡೆ ನೋಡಿದ. ಏನೊಂದೂ ಉತ್ತರವೀಯಲಿಲ್ಲ.

"ನಮ್ಮ ಥೇಟರಿನಲ್ಲಿ ಅಂದು ತಮ್ಮನ್ನು ನೋಡಿದೆ." ಎಂದಳು ಪೆನಿಸರ್.

ಕುರ್ಚಿಯನ್ನು ಅಗ್ಗಿಷ್ಟಿಗೆಯ ಹತ್ತಿರಕ್ಕೆಳೆದು ಪಿಟರ್ಸ್ ಮಾತನಾಡಿದ: "ನನ್ನನ್ನು ನೋಡಿದೆಯಾ ? ಅಲ್ಲ, ನಿನ್ನ ಭ್ರಮೆಯಿರಬೇಕು."

"ನನ್ನ ಕಣ್ಣ ದೋಷವೆಂದು ತಾವು ತಿಳಿಯುತ್ತಿದ್ದರೆ, ನನ್ನ ಮಾತೇ ಮುಗಿಯಿತು. ಏನೇ ಇರಲಿ, ತಾವು ದಯವಿಟ್ಟು ಬಂದುದು ನನಗೆ ಸಂತೋಷದ ವಿಷಯ."

ಪಿಟರ್ಸ್ ಮತ್ತೆ ಅವಳ ಮುಖವನ್ನು ನೋಡಿದ. ಪೆನಿಸರ್ ಬಲು ಚೆಲುವೆ, ಇಂತಹ ಚೆಲುವೆಯನ್ನು ಎಲ್ಲಿಯೂ ನೋಡಲಿಲ್ಲ ಎಂದೆನಿಸಿತವನಿಗೆ. ಪೆನಿಸರ್ ನಕ್ಕು ನುಡಿದಳು : "ಏನು ನೋಡುತ್ತಿರುವಿರಿ ? ನನ್ನಲ್ಲಿ ನೋಡುವಂಥವೇನಿದೆ ? ನಾವು ಚಿಕ್ಕವರಲ್ಲ, ಆ ಅವಸ್ಥೆ ಎಷ್ಟೋ ಹಿಂದಾಗಿದೆ. ನಮಗೀಗ ಒಳ್ಳೆಯದು ಕೆಟ್ಟುದು ತಿಳಿಯುತ್ತದೆ."

ಪಿಟರ್ಸ್ ಪತ್ರಿಕೆಯನ್ನೆತ್ತಿ ಆ ಲೇಖನವನ್ನು ಅವಳಿಗೆ ತೋರಿಸಿದ. "ನೀನು ಇದನ್ನು ಓದಿದಂತಿದೆ ಥೇಟರಿನಲ್ಲಿ ನನ್ನನ್ನು ಗುರುತಿಸಿದೆನೆಂದೂ ಹೇಳುತ್ತೀ. ನಾನು ಅತಿ ಪಾಪಿಷ್ಠನೆಂದು ನಿನ್ನ ಭಾವನೆಯಿದ್ದರೂ, ಈಗ ನನ್ನನ್ನು ಕಾಣಲು ಏಕೆ ಒಪ್ಪಿದೆ ?" ಎಂದು ಕೇಳಿದ.

"ತಮ್ಮ ಬಗ್ಗೆ ನನಗೆ ಶ್ರದ್ಧೆಯಿದೆ ತಾವು ನಿಜವಾಗಿಯೂ ಪಾಪಿಷ್ಠರಾಗಿದ್ದರೆ ಅದರ ವಿಷಯದಲ್ಲಿ ಎಳ್ಳಷ್ಟೂ ನನ್ನ ಸಹಾನುಭೂತಿಯಿಲ್ಲ. ನಾನು ಪಾಪವನ್ನು ತಿರಸ್ಕರಿಸುತ್ತೇನೆ, ತಮ್ಮನ್ನು ತಿರಸ್ಕರಿಸುವುದಿಲ್ಲ."

" ಇದೆಂಥ ಮಾತು ? ಪಾಪಿಷ್ಠನ ಪಾಪವನ್ನು ಬದಿಗಿರಿಸಿ ಅವನನ್ನು ಆದರಿಸಲಾಗುವುದೆ ? ಮನುಷ್ಯ ಗುಣದೋಷಗಳ ಸಮಷ್ಟಿ ಮಾತ್ರ, ಅವೆರಡನ್ನೂ ತೆಗೆದರೆ ಉಳಿಯುವುದೇನು ? "

ಪೆನಿಸರ್ ಸಹಾಸ್ಯವಾಗಿ ಉತ್ತರವಿತ್ತಳು : " ಇದೆಲ್ಲ ತತ್ತ್ವಜ್ಞಾನ ನನಗಿಲ್ಲ, ತಿಳಿದುಕೊಳ್ಳುವ ಆಗ್ರಹವೂ ಇಲ್ಲ. ಅನೇಕ ಸಜ್ಜನರೂ ಅತ್ಯಂತ ನಿಂದ್ಯ ಕಾರ್ಯಗಳನ್ನು ಮಾಡುವುದನ್ನು ನೋಡಿದ್ದೇನೆ. ಆದರೆ ಅಂಥವರೊಡನೆ ಮಾತುಕತೆ ಮೊದಲಾದವನ್ನು ನಿಲ್ಲಿಸಲಿಕ್ಕಾಗುವುದಿಲ್ಲ. ಮನುಷ್ಯನ ಪಾಪಪುಣ್ಯಗಳನ್ನು ತೂಗಿ ನೋಡಿ ಅವನೊಡನೆ ಸಂಬಂಧವಿಡಬೇಕೆಂದು ಸಿದ್ಧಾಂತ ಮಾಡಿಕೊಂಡರೆ,ಪ್ರಪಂಚದಲ್ಲಿರುವುದೇ ಕಠಿನ;ಮನಸಿನ ಸುಖ-ಶಾಂತಿಗಳೂ ಉಳಿಯಲಾರವು. ಅದೆಲ್ಲ ಚರ್ಚೆ ಈಗ ಬೇಡ; ರಾತ್ರಿ ಬಹಳವಾಗಿದೆ; ಇನ್ನೂ ನನ್ನ ಊಟವಾಗಿಲ್ಲ. ಅದರ ಏರ್ಪಾಡು ಮಾಡಬೇಕಾಗಿದೆ. ತಾವು ಅನ್ಯಥಾ ಭಾವಿಸಬೇಡಿರಿ. "

ದಾಸಿಯನ್ನು ಕರೆದು ಊಟವನ್ನೂ ಮದ್ಯವನ್ನೂ ತರಲು ಹೇಳಿ, ಪಿಟರ್ಸನಿಗೆ ಸಿಗಾರೇಟ್ ಕೊಟ್ಟು ಪೆನಿಸರ್ ಉಡಿಗೆ ಬದಲಿಸಲು ಹೋದಳು. ಅವಳು ತಿರುಗಿ ಬರುವ ಹೊತ್ತಿಗೆ ಊಟ ಬಂದಿತ್ತು. ಅವಳು ಪಿಟರ್ಸನಿಗೆಂದಳು : " ನನ್ನ ಜೊತೆಯಲ್ಲಿ ಉಣ್ಣಲು ತಮಗೆ ಅಡ್ಡಿಯಿಲ್ಲವಷ್ಟೆ ? ತಮಗೆ ಅವಸರವೇನೂ ಇಲ್ಲವೆಂದು ತಿಳಿದಿದ್ದೇನೆ. ನಾನೀಗ ಸಂಪೂರ್ಣ ಸ್ವತಂತ್ರಳು; ಇಡೀ ದಿನ ಅಭಿನಯದಲ್ಲಿ ಅಥವಾ ಅದರ ವಿಚಾರದಲ್ಲಿ ತೊಡಗಿರಬೇಕಾಗುತ್ತದೆ, ಕ್ಷಣವೂ ಬಿಡುವಿರುವುದಿಲ್ಲ. ಈಗ ಅದಾವುದರ ಜೊಂಜಾಟವೂ ಇಲ್ಲ. " ಕಿಡಿಕಿಯ ಹತ್ತಿರ ಹೋಗಿ ಕುಳಿತುಕೊಳ್ಳುತ್ತ ಹೊರಗೆ ನೋಡಿ ಮತ್ತೆ ಅವಳೆಂದಳು : " ರಾತ್ರಿಯ ಅಂಧಕಾರಾಚ್ಛನ್ನ ದೃಶ್ಯವು ನನಗೆ ಬಹಳ ಸೇರುತ್ತದೆ; ನಮ್ಮ ಮನೆ ಎತ್ತರದಲ್ಲಿದೆ; ಇದರಿಂದ ಅನುಕೂಲವೂ ಉಂಟು, ಪ್ರತಿಕೂಲವೂ ಉಂಟು; ಇಲ್ಲಿಂದ ನಾಲ್ಕೂ ಕಡೆಯ ಮುಕ್ತ ಪ್ರಕೃತಿ ಕಾಣುವುದು. "

" ನೀನೊಳ್ಳೇ ಭಾವುಕಳು. "

" ಜಗತ್ತಿನಲ್ಲಿ ಎಲ್ಲರೂ ಅಲ್ಪಾಧಿಕ ಪರಿಮಾಣದಲ್ಲಿ ಭಾವುಕರೇ. ಸೇಂಟ್ ಮರಿಜ್ಞನಲ್ಲಿ ತಾವು ಎಷ್ಟು ಸೊಗಸಾಗಿ ಮಾತುಕತೆಯಾಡುತ್ತಿದ್ದಿರಿ ನನ್ನೊಡನೆ! ಅಂತಹ ಮಾತುಕತೆ ಕೇಳುವ ಇಚ್ಛೆಯಾಗಿದೆ. "

" ಅದೆಲ್ಲವನ್ನೂ ನೀನಿನ್ನೂ ಮರೆತಿಲ್ಲವೆ ? "

" ಇಲ್ಲ, ಶಕ್ಯವಿಲ್ಲ. ಅಲ್ಲಿ ತಾವು ಅವೆಷ್ಟು ಕತೆಗಳನ್ನು ಹೇಳಿದಿರಿ, — ತಮ್ಮ ಕಥನಶಕ್ತಿ ಅಸಾಧಾರಣ ತಾವು ಇತರರಂತಲ್ಲ, ತಮ್ಮ ಆ ಸ್ವಭಾವ ಬದಲಾಗಿದೆಯೇ ? "

ಪತ್ರಿಕೆಯನ್ನು ತೋರಿಸಿ ಪಿಟರ್ಸ್ " ಇದನ್ನೋದಿ ನಿನಗೇನೆನಿಸಿತು?" ಎಂದ.

" ಹಾಗಾದರೆ ಅದು ನಿಜವೆ ? ತಾವು — "

ಅರ್ಧದಲ್ಲಿಯೇ ಪಿಟರ್ಸ್ ಉತ್ತರವಿತ್ತ : "ನಿನ್ನೆದುರು ನಾನು ಯಾವು ದನ್ನೂ ಮುಚ್ಚಿಡುವುದಿಲ್ಲ. ನಾನು ಬರ್ಜಿಲಂಡಿನ ಯುವರಾಜರ ಜಾನ್ ವ್ಹಾಲೆಂಟೈನ್. "

" ಪತ್ರಿಕೆಯಲ್ಲಿ ಅದೆಷ್ಟೋ ಮಾತುಗಳು ಪ್ರಕಟವಾಗಿವೆ. ಅವೆಲ್ಲ ನಿಂದ್ಯ ಸಂಗತಿಗಳು ಸತ್ಯವೆ ? "

" ಸತ್ಯವಿರಲಿ ಬಿಡಲಿ; ಕಥೆ. ಹೀಗೆ ನಡುನಡುವೆ ಕಥೆಗಳನ್ನು ಪ್ರಕಟಿ ಸಿದರೆ ಓದುಗರ ಬಳಗ ಹೆಚ್ಚುತ್ತದೆ. "

" ತಾವು ಓದಿರುವಿರಾ ? "

" ಹೌದು. ಸಾದ್ಯಂತವಾಗಿ. ಇದೊಂದನ್ನೇ ಅಲ್ಲ, ಬೇರೆ ಬೇರೆ ಎಲ್ಲ ಪತ್ರಿಕೆಗಳಲ್ಲಿಯ ಎಲ್ಲ ಬಯ್ಗುಳನ್ನೂ ಓದಿದ್ದೇನೆ. ಕೆಲಕೆಲವರು ಇದಕ್ಕೂ ಹೆಚ್ಚು ಬಯ್ದಿದ್ದಾರೆ. ಅವೆಲ್ಲವನ್ನೂ ಜತನದಿಂದ ಕಲೆಹಾಕಿಟ್ಟಿದ್ದೇನೆ. "

ಪೆನಿಸರ್ ಮೌನವಾಗಿ ಮುಗಿಲನ್ನು ನೋಡುತ್ತಲಿದ್ದಳು.

" ಈ ಕತೆಗಳನ್ನೆಲ್ಲಾ ನೀನು ನಂಬುತ್ತೀಯಾ ? " ಪಿಟರ್ಸ್ ಕೇಳಿದ.

" ನಾನು ತಮ್ಮನ್ನು ನಂಬುತ್ತೇನೆ. ಇದೆಲ್ಲ ಸುಳ್ಳೆಂದು ತಾವು ಹೇಳಿ ದರೆ, ಸುಳ್ಳೆಂದೇ ತಿಳಿಯುತ್ತೇನೆ. "

" ಸತ್ಯವೋ ಮಿಥ್ಯವೋ ಎಂಬುದನ್ನು ನಾನು ಹೇಳದಿದ್ದರೆ ? "

" ಅದನ್ನು ತಿಳಿಯಲು ನನ್ನ ಆಗ್ರಹವಿಲ್ಲ. "

" ಈ ಕತೆಗಳು ಯಾರನ್ನು ಕುರಿತು ಇವೆಯೋ ಅವರು ನಿಜವಾ ಗಿಯೂ ಅಂಥವರೇ. "

" ಹಾಗಾದರೆ ತಾವು ಬರ್ಜಿಲಂಡಿನ ಯುವರಾಜರಲ್ಲವೆ ? "

"ನಾನೇ ಬರ್ಜಿಲಂಡಿನ ಯುವರಾಜ."

ಈ ಉತ್ತರದಿಂದ ಪೆನಿಸರಳ ಮುಖ ಮಲಿನವಾಯಿತು; ಹೃದಯ ದಲ್ಲಿ ವ್ಯಥೆಯಾಯಿತು. ಅವಳ ಮನೋಭಾವವನ್ನರಿತು ಪಿಟರ್ಸ್ ಹೇಳಿದ: "ನನ್ನ ವಿಷಯವನ್ನು ಚಿಂತಿಸಿ ನೀನು ಕೊರಗಬೇಡ. ನಮ್ಮ ವಿಷಯ ನಿನಗೆ ಯೋಚಿಸಲು ತಕ್ಕುದಲ್ಲ; ನಮ್ಮ ರಾಜಪರಿವಾರ ನಿಜಕ್ಕೂ ಬಹು ದುರಾ ಚಾರಿಯಾಗಿದೆ. ಇದಕ್ಕಿಂತ ಹೆಚ್ಚಿಗೆ ನಾನು ಹೇಳಲಾರೆ. ನನ್ನನ್ನು ಪಾಪಿಷ್ಠ ನೆಂದು ತಿಳಿದೂ ನಂಬಬೇಕೆಂದೆನಿಸಿದರೆ ನಂಬಿಕೋ."

"ನಾನು ಬಲ್ಲ ಬರ್ಜಿಲಂಡಿನ ಯುವರಾಜರ ಚರಿತ್ರ ಹೀಗಿಲ್ಲ." ಎಂದಳು ಪೆನಿಸರ್.

"ನಿನ್ನ ಮಾತಿನಿಂದ ನಾನು ಧನ್ಯವಾದೆ. ನಿನ್ನೀ ಸದ್ಭಾವವನ್ನು ನಾನೆಂದೂ ಮರೆಯಲಾರೆ. ಇರಲಿ. ನನ್ನಂತಹ ಅಯೋಗ್ಯನ ಬಗ್ಗೆ ಸಾಕಷ್ಟು ವಿವೇಚನೆ ಆದ ಹಾಗಾಯಿತು; ಇನ್ನು ನಿನ್ನ ವಿಷಯವನ್ನೊಂದಿಟ್ಟು ಹೇಳು. ಇಲ್ಲಿ ನೀನೊಬ್ಬಳೇ ಹೇಗೆ ಹೊತ್ತುಗಳೆಯುವೆ ? ಥೇಟರಿನಲ್ಲಿ ಏಕೆ ಸೇರಿದೆ ? ಸೇಂಟ್ ಮರಿಜ್ನಲ್ಲಿದ್ದ ಹಾಗೆ ಇಲ್ಲಿ ಇದ್ದಂತೆ ಕಾಣುವುದಿಲ್ಲ ನನಗೆ. ನಿನ್ನ ಲ್ಲಿಯ ಈ ವ್ಯತ್ಯಾಸಕ್ಕೆ ಕಾರಣವೇನು ?" ಎಂದು ಕೇಳಿದ ಪಿಟರ್ಸ್.

"ಯಾವ ವ್ಯತ್ಯಾಸವನ್ನು ಕಂಡಿರಿ ನನ್ನಲ್ಲಿ ?" ಪ್ರಶ್ನಿಸಿದಳು ಪೆನಿ ಸರ್.

"ಮೊದಲು ನೀನು ಬಂಧು ಬಳಗದೊಡನೆ ಕೂಡಿರುತ್ತಿದ್ದಿ; ಅವರ ವ್ಯೂಹವನ್ನು ಭೇದಿಸಿಕೊಂಡು ನಿನ್ನ ಹತ್ತಿರ ಬರುವುದೇ ಕಠಿನವಿತ್ತು. ಆ ದುರ್ಭೇದ್ಯ ವ್ಯೂಹದಿಂದ ಬಿಡುಗಡೆ ಹೊಂದಿ ಹೊರಜಗತ್ತಿಗೆ ನೀನು ಹೇಗೆ ಬಂದೆಯೋ ತಿಳಿಯಲೊಲ್ಲದು."

ಪೆನಿಸರ್ ಮೆಲುನಗೆ ನಕ್ಕಳು. "ನಿಜವಾಗಿಯೂ ನಾನು ಆ ಬಂಧನ ಗಳನ್ನೆಲ್ಲ ಹರಿದೊಗೆದು ಈಗ ತಿರುಗುಳಿಯಾಗಿದ್ದೇನೆ. ನನ್ನ ಇಂದಿನ ಬಾಳನ್ನು ಬಾಳುವುದು ಎಲ್ಲ ಹೆಂಗುಸರಿಗೂ ಸಾಧ್ಯವಾದ ಮಾತಲ್ಲ. ಸಂಕೋ ಲೆಗಳನ್ನು ನಾನು ಕಿತ್ತೊಗೆದದ್ದು ಅನಿವಾರ್ಯವಾಗಿಯೆ. ನಾಟ್ಯಮಂದಿರದ ಅಭಿನೇತ್ರಿಯಾಗಬೇಕೆಂದು ನನಗೆ ಹುಚ್ಚೇ ಇದ್ದಿತು; ಥೇಟರೇ ನನ್ನ ಜೀವ ನದ ಏಕಮಾತ್ರ ಲಕ್ಷ್ಯವಾಗಿತ್ತು. ಆದರೀಗ ಆ ಹಟ ಉಳಿದಿಲ್ಲ. ಆರಂಭ

ದಲ್ಲಿ ನನಗಿದ್ದ ಮೋಹ ಹರಿದಿದೆ. ಸ್ವತಂತ್ರವಾಗಿ ಕಾಲ ಕಳೆಯಬೇಕಾದರೆ ಏನೊಂದು ದುಡಿಮೆ ಬೇಕಲ್ಲ, ಎಂತಲೇ ಇನ್ನೂ ಥೇಟರನ್ನು ಬಿಟ್ಟಿಲ್ಲ. ನಟಿಯಾದದ್ದು ಉಚಿತವೋ ಅನುಚಿತವೋ ಎಂದು ವಿಚಾರ ಮಾಡುವುದು ವ್ಯರ್ಥ್ಯ. ಮನಸಿನ ಪ್ರತಿಕೂಲತೆಯೊಡನೆ ಹೋರಾಡಿ ನಾನು ಜರ್ಜರಿತಳಾಗಿರುವುದು ಮಾತ್ರ ಸತ್ಯ. ”

“ಶ್ರೇಷ್ಠ ಅಭಿನೇತ್ರಿಯೆಂದು ನೀನು ಹೆಸರಾಗಿದ್ದೀ.” ಎಂದ ಪಿಟರ್ಸ್.

“ ತಾವು ತಿಳಿದುಕೊಂಡಷ್ಟೇನೂ ನಾನದರಲ್ಲಿ ಯಶ ಗಳಿಸಿಲ್ಲ. ನನ್ನಲ್ಲಿ ಅಂತಹ ಅಭಿನಯ ಪಟುತ್ವವಿಲ್ಲ; ಅದಕ್ಕಾಗಿ ಮನಸುಗೊಟ್ಟು ಶ್ರಮಿಸುತ್ತಿದ್ದೇನೆ ಮಾತ್ರ.— ಜನರಿಂದ ಬಯಿಸಿಕೊಳ್ಳಬಾರದೆಂಬ ಕಡೆ ನನ್ನ ಲಕ್ಷ್ಯವಾದರೂ ಇರುತ್ತದೆ. ”

“ ನಟೀಜೀವನ ಸೊಗಸಾಗಿದೆಯೆ ? ಈಗಿದ್ದ ಸ್ಥಿತಿಯಲ್ಲಿ ತೃಪ್ತಿ ಇದೆಯೆ ? ”

“ ತೃಪ್ತಿ ಅತೃಪ್ತಿಯ ವಿಷಯವನ್ನು ಕೇಳಬೇಡಿರಿ. ದಾಸ್ಯದಲ್ಲಿ ಸಂತೋಷವೆಂಬುದೇ ಇಲ್ಲ. ವಿಶೇಷವಾಗಿ ಅನಿರ್ವಾಹವೆಂದು ಕೈಕೊಂಡ ಕೆಲಸದಲ್ಲಿ ಹೆಚ್ಚು ಕಾಲ ಅನುರಾಗ ಉಳಿಯುವುದೇ ಇಲ್ಲ; ಇದ್ದುದರಲ್ಲಿಯೇ ಸುಖವೆಂದರೆ, ನನಗೆ ಎಷ್ಟೋ ಮಟ್ಟಿಗೆ ಸ್ವಾತಂತ್ರ್ಯವಿದೆ. ಎಂತಲೇ ಹೇಗೋ ಈ ವ್ಯವಸಾಯಕ್ಕೆ ಅಂಟಿಕೊಂಡಿದ್ದೇನೆ ”

“ ನಾಳೆ ನಿನ್ನ ಹೆಸರು ಇಡೀ ಯುರೋಪದಲ್ಲಿಯೆ ಹಬ್ಬಬಹುದು; ಪ್ರತಿಭಾಶಾಲಿನಿಯರಾದ ನಟಿಯರೊಡನೆ ನೀನು ಅಗ್ರಾಸನವನ್ನೂ ಪಡೆಯಬಲ್ಲೆ. ಇಂತಹ ಉಚ್ಚಾಕಾಂಕ್ಷೆ ನಿನಗಿಲ್ಲವೆ ? ”

“ ಅಂತಹ ಮಹತ್ವಾಕಾಂಕ್ಷೆ ಇಟ್ಟುಕೊಂಡು ರಂಗಭೂಮಿಗೆ ಹೋಗಲಿಲ್ಲ; ಆ ಆಕಾಂಕ್ಷೆ ನನ್ನ ಮನಸಿನಲ್ಲೇ ಎಂದೂ ಉದಿಸಲಿಲ್ಲ. ಉದಿಸಿದ್ದರೇ ಚೆನ್ನಾಗಿತ್ತೇನೋ. ಏನಾದರೂ ಜೀವನೋಪಾಯ ಬೇಕೆಂದೇ ಥೇಟರನ್ನು ಸೇರಿದ್ದು ನಾನು ನನಗೆ ನನ್ನ ಕುಂದುಕೊರತೆ ಗೊತ್ತಿದೆ; ಶ್ರೇಷ್ಠ ಅಭಿನೇತ್ರಿಯಾಗಲು ಆವಶ್ಯಕವಾದ ಅನೇಕ ಗುಣಗಳು ನನ್ನಲ್ಲಿಲ್ಲ.”

" ಆದರೆ ನೀನು ಅಲ್ಪಸಂತೋಷಿಯೆಂದು ನನಗೇನೂ ಎನಿಸುವುದಿಲ್ಲ ನಟೀವರ್ಗದಲ್ಲಿ ಉಚ್ಚಸ್ಥಾನವನ್ನು ಪಡೆಯುವುದು ಅಸಾಧ್ಯವಿದ್ದರೆ, ನೀನು ಥೇಟರನ್ನು ಬಿಡುವುದೇ ಲೇಸು." ಎಂದ ಪಿಟರ್ಸ್.

ಪೆನಿಸರ್ ನಸುನಕ್ಕು ಮಾತನಾಡಿದಳು: "ಅದೇನೂ ಅಗತ್ಯವಿಲ್ಲ. ಉಚ್ಚಾಭಿಲಾಷೆಯಿಲ್ಲದವರಿಗೆ ಹತಾಶೆಯೆಂಬುದಿಲ್ಲ. ನನ್ನ ಅದೃಷ್ಟದಲ್ಲಿದ್ದಂತೆ ಆಗುವುದು; ರಂಗಮಂಡಲದಲ್ಲಿದ್ದರೂ ಸರಿ, ಬಿಟ್ಟರೂ ಸರಿ. ಆದರೆ, ತಾವು ಗುರುತರ ರಾಜ್ಯಕಾರ್ಯವನ್ನು ತೊರೆದು ಹೀಗೇಕೆ ದೇಶ ದೇಶ ತಿರುಗುವಿರಿ? ಪ್ರಯತ್ನಿಸಿದರೆ ತಾವು ಮುಂದೆ ಮಾದರಿಯ ದೊರೆಯಾಗಬಲ್ಲಿರಿ. ಅದರಲ್ಲಿ ತಮಗೇಕೆ ತಾತ್ಸಾರ?"

" ನನ್ನ ವಿಷಯವನ್ನೆಲ್ಲ ಪತ್ರಿಕೆಗಳಲ್ಲಿ ಓದಿದ್ದೀ; ಆದರೂ ಹೀಗೆ ಮಾತನಾಡುತ್ತೀಯಲ್ಲ? ನಾನು ಮಾದರಿಯ ದೊರೆಯಾದೇನೇ?"

" ಗುಲಾಬಿಹೂ ಬಲು ಚೆಂದ. ಆದರೆ ಅದರಲ್ಲಿಯೂ ಮುಳ್ಳುಗಳಿರುತ್ತವೆ. ಯತ್ನಿಸಿದರೆ ತಾವು ಅರಸುಗಳಿಗೆ ಮಾದರಿಯಾಗುವಿರಿ; ನನಗೆ ರವಷ್ಟೂ ಸಂದೇಹವಿಲ್ಲ."

" ನಮ್ಮ ದೇಶದ ಇಂದಿನ ಪರಿಸ್ಥಿತಿ ನಿನಗೆ ಗೊತ್ತಿದೆಯೆ?"

" ತುಸ ತುಸ ಗೊತ್ತಿದೆ."

" ದೊರೆಯ ದುಷ್ಕರ್ಮಗಳಿಂದ ಪ್ರಜೆಗಳು ವಿಚಲಿತರಾಗಿದ್ದಾರೆ; ತಮ್ಮ ಹೃದಯಸಿಂಹಾಸನದಿಂದ ಅವನನ್ನು ತಳ್ಳಿಬಿಟ್ಟಿದ್ದಾರೆ ಜೀವನವೇ ಕಲಂಕಿತವಾಗಿರುವವರು ಮುಂದೆ ಆದರ್ಶರಾಜರಾಗುವರೆಂಬುದು ದುರಾಶೆಯೇ ಸೈ."

" ಪ್ರಯತ್ನಕ್ಕೆ ಅಸಾಧ್ಯವಾದುದು ಯಾವುದೂ ಇಲ್ಲ ಆದರ್ಶರಾಜರಾಗುವುದನ್ನೇ ತಾವು ಜೀವನದ ವ್ರತವನ್ನಾಗಿ ಹಿಡಿಯಿರಿ"

ಇಬ್ಬರೂ ಮನಗೊಟ್ಟು ಮಾತನಾಡುತ್ತಿದ್ದರು. ಒಮ್ಮೆಲೆ ಇಕ್ಕಿದ ಬಾಗಿಲ ಹೊರಗಡೆಯಲ್ಲಿ ಮಿದುವಾದ ಹೆಜ್ಜೆಯ ಸದ್ದಾಯಿತು

" ಯಾರದೋ ಹೆಜ್ಜೆಯ ಸದ್ದು ಕೇಳಲಿಲ್ಲವೆ?" ಎಂದಳು ಪೆನಿಸರ್.

" ನನಗೂ ಕೇಳಿತು. ಯಾರೋ ಮುಂಗಾಲಿಂದ ನಡೆದು ಬನ್ದವಂತಿದೆ."

"

" ಇಷ್ಟು ರಾತ್ರಿಯಲ್ಲಿ ಯಾರು ಬಂದಿರಬಹುದು ? "

" ರಾತ್ರಿ ಬಹಳವಾಯಿತು, ನಾನಿನ್ನು ಹೊರಡುತ್ತೇನೆ." ಎಂದ ಪಿಟರ್ಸ್.

" ಆದರೆ ನಮ್ಮ ಎಲ್ಲ ಮಾತುಗಳೂ ತೀರಲಿಲ್ಲ." ಎಂದಳು ಪೆನಿಸರ್.

" ಇಂದು ಸಾಕು. ನಾಳೆ ಬಾ ಎಂದರೆ ಮತ್ತೆ ಬರುತ್ತೇನೆ." ಗಡಿಯಾಳವನ್ನು ನೋಡಿ ಪಿಟರ್ಸ್ ಎಂದ.

" ಖಂಡಿತ ಬರ್ರಿ; ನಮ್ಮ ಮಾತುಗಳನ್ನು ಗೌಪ್ಯವಾಗಿ ಕೇಳಲು ಯಾರೋ ಹೊಂಚುಹಾಕುತ್ತಿರುವಂತೆ ತೋರುತ್ತದೆ. ಅದರಿಂದ ನನ್ನೆದೆಯೊಳಗೆ ಭಯ ತುಂಬಿದೆ."

" ಅಕಾರಣವಾಗಿ ಅಂಜಬೇಡ."

ಬಾಯಿಂದ ಹೀಗಾಡಿದರೂ ಪಿಟರ್ಸ್ ಉತ್ಕಂಠಿತನಾಗದಿರಲಿಲ್ಲ. ತನ್ನನ್ನು ಕೊಲ್ಲಲು ಹಗೆಗಳು ಹವಣಿಸುತ್ತಿರುವರೆಂದು, ತನ್ನ ತಲೆಯ ಬೆಲೆಯನ್ನೂ ಗೊತ್ತುಪಡಿಸಿರುವರೆಂದು ಕೂಡ, ಅವನಿಗೆ ತಿಳಿದಿತ್ತು. ಪೆನಿಸರ್ ಮಾತ್ರ ಇದಾವುದನ್ನೂ ಅರಿಯಳು. ತನ್ನನ್ನು ಹೊಡೆಯುವುದಕ್ಕಾಗಿ ಯಾರೋ ಗುಟ್ಟಾಗಿ ಹಿಂಬಾಲಿಸಿರಬೇಕೆಂದು ಪಿಟರ್ಸನಿಗೆನಿಸಿತು. ಅವನು ತನ್ನ ಓವ್ಹರ್‌ಕೋಟಿನ ಜೇಬಿನಲ್ಲಿ ಕೈಯಿಟ್ಟು ಪಿಸ್ತೂಲಿದೆಯೊ ಎಂದು ನೋಡಿಕೊಂಡು, ಪೆನಿಸರಳ ಕೈಕುಲುಕಿಬೀಳ್ಕೊಂಡು ಹೊರಹೊರಟ.

" ವಿದ್ಯುತ್ತಿನ ತೊಟ್ಟಿಲು ಚಪ್ಪರದ ಆ ಮೂಲೆಯಲ್ಲಿದೆ," ಎಂದು ಪೆನಿಸರ್ ಸೂಚಿಸಿ " ತಾವು ನಾಳೆ ರಾತ್ರಿ ಅವಶ್ಯವಾಗಿ ಬರಬೇಕು,–ತಾವು ಕೆಳಗೆ ಹೋದ ಬಳಿಕ ನಾನು ಬಾಗಿಲಿಕ್ಕಿಕೊಳ್ಳುವೆ." ಎಂದಳು.

ನಾಲ್ಕೂ ಕಡೆ ತೀಕ್ಷ್ಣದೃಷ್ಟಿಯಿಂದ ನೋಡುತ್ತ ಪಿಟರ್ಸ್ ವಿದ್ಯುತ್ತಿನ ತೊಟ್ಟಿಲಕಡೆಗೆ ಸಾಗಿದ. ಯಾರೂ ಎಲ್ಲಿಯೂ ಕಾಣಲಿಲ್ಲ.

೫

ಮರುದಿನ ಸಂಜೆ ಕಳೆದ ಬಳಿಕ ಪೆನಿಸರ್ ತನ್ನ ಮನೆಯ ಬಾಗಿಲಲ್ಲಿ ನಿಂತಿದ್ದಳು. ಆಗ ' ವಾಣಿಜ್ಯ ಸಮ್ರಾಟ್ ' ಎನಿಸಿದ, ಸ್ಥೂಲಕಾಯದ ಸರ್ ವಿಲಿಯಮ್ ವಿಲ್ಸನ್ ಅವಳ ಕುಳ್ಳಿರುವ ಕೋಣೆಯನ್ನು ಪ್ರವೇಶಿಸಿ, ವಿರಾ

ಮಾಸಪದಲ್ಲಿ ಕುಳಿತು ಮಾತನಾಡಿದನು: " ಮಿಸ್ ಪೆನಿಸರ್, ನನ್ನನ್ನು ಕಂಡು "ಗಾಬರಿಯಾಗಬೇಡ. ನಿನ್ನ ಸಮಯವನ್ನು ಹಾಳುಮಾಡಲು ನಾನು ಬಂದಿಲ್ಲ;„ ಅಲ್ಲದ ಒಲ್ಲದ ಮಾತನ್ನೂ ಆಡುವುದಿಲ್ಲ. ನನಗೆ ನಿನ್ನೊಡನೆ ಹೆಚ್ಚಿನ ಸಂಬಂಧವಿಲ್ಲ. ನಾನು ಅಧ್ಯಕ್ಷನಾಗಿರುವ ಸಮಿತಿಗೆ ನೀನೊಬ್ಬ ಸಾಮಾನ್ಯ ಸದಸ್ಯಳು ಮಾತ್ರ. ಕಾರ್ಯಸಮಿತಿಯ ಸದಸ್ಯಳಾಗಿಲ್ಲ; ನಿನ್ನ ಮೇಲೆ ನನ್ನ ಒತ್ತಾಯವೇನೂ ನಡೆಯುವುದಿಲ್ಲ ನಿಜ. ಆದರೂ ಚಿಕ್ಕ ಪುಟ್ಟ ಕೆಲಸಗಳಲ್ಲಿ ನಿನ್ನ ನೆರವನ್ನು ಕೇಳಿಕೊಳ್ಳಲು ನನಗೆ ಹಕ್ಕಿದೆ. ನೀನು ನನ್ನನ್ನು ಅಶಿಷ್ಟ ನೆಂದು ಭಾವಿಸಬೇಡ; ನಾನು ಸ್ವಾರ್ಥಕ್ಕಾಗಿ ಇಲ್ಲಿಗೆ ಬರಲಿಲ್ಲ, ಸಾಧಾರಣರ ಹಿತಕ್ಕಾಗಿ ಬಂದಿದ್ದೇನೆ. ನನ್ನೊಂದು ಮಾತಿಗೆ ಉತ್ತರ ಕೊಡು.–

" ಏನು?"

" ನಿನ್ನನ್ನು ಕಾಣಲು ಸದ್ಗೃಹಸ್ಥರೊಬ್ಬರು ಬಂದಿದ್ದರೇ ? "

ಕೇಳಿ ಪೆನಿಸರ್ ಕೊಂಚ ಚಂಚಲಳಾದಳು. ವಿಲಿಯಮ್ನ ಮಾತಿನ ಅಭಿಪ್ರಾಯ ಗೊತ್ತಾಗದೆ ಅವನ ಮುಖವನ್ನು ನೋಡುತ್ತ ಅವಳೆಂದಳು:–ಹೌದು, ಒಬ್ಬರು ಬಂದಿದ್ದರು; ಅವರ ಹೆಸರು ಮಿ. ಜಾನ್ ಪಿಟರ್ಸ್. "

" ಇದು ಅವರ ಛದ್ಮನಾಮವೆಂಬುದು ನಿನಗೆ ಗೊತ್ತಿಲ್ಲವೆ? ಅವರ ನಿಜವಾದ ಹೆಸರು ಜಾನ್ ವ್ಯಾಲೆಂಟಾಯಿನ್ ಪಿಟರ್ಸ್; ಅವರು ಬರ಼್ಲಂಡಿನ ಯುವರಾಜರು! ''

" ಎರಡು ವರ್ಷಗಳ ಹಿಂದೆ ಸೇಂಟ್ ಮರಿಜ್ನದಲ್ಲಿ ಮೊದಲು ಅವರ ಗುರುತು ನನಗಾಯಿತು. ಆಗವರು ಜಾನ್ ಪಿಟರ್ಸ್ ಎಂದು ತಮ್ಮ ಪರಿಚಯ ಹೇಳಿದ್ದರು. ಅವರೊಬ್ಬ ಸಾಮಾನ್ಯಮನುಷ್ಯರೆಂದೇ ನಾನು ತಿಳಿದಿದ್ದೆ. ಬರ್ಜಲಂಡಿನ ಯುವರಾಜರ ವಿರುದ್ಧವಾಗಿ ಕೇಳಿದ ದೋಷಾರೋಪಗಳ ಬಗೆಗೆ ಜಾನ್ ಪಿಟರ್ಸ್‌ರೊಡನೆ ನಾನು ಮಾತನಾಡಿದ್ದೇನೆ; ಆ ಆರೋಪಗಳೆಲ್ಲ ಸತ್ಯವೆಂದೆನಿಸಲಿಲ್ಲ, ಅಲ್ಲದೆ ಇಬ್ಬರೂ ಒಂದೇ ಎಂಬ ಬಗ್ಗೆಯೂ ಸಂದೇಹ ಹುಟ್ಟುತ್ತದೆ."

" ಸಂದೇಹಕ್ಕೆ ಕಾರಣವೇ ಇಲ್ಲ. ಜಾನ್ ಪಿಟರ್ಸ್ ಮತ್ತು ಯುವರಾಜ ಜಾನ್ ವ್ಯಾಲೆಂಟಾಯಿನ್ ಪಿಟರ್ಸ್ ನಿಶ್ಚಯವಾಗಿ ಒಬ್ಬರೆ. ಯುರೋ

ಪಿನಲ್ಲಿ ಇಂತಹ ಸಮಾಜದ್ರೋಹಿಗಳು ಎಷ್ಟು ಜನರಿರುವರೋ ಯಾರಿಗೆ ಗೊತ್ತು. ನಮ್ಮ ಸಮಿತಿಯಲ್ಲಿ ಜನತಾಶತ್ರುಗಳ ಒಂದು ಪಟ್ಟಿಯಿದೆ; ಅದರಲ್ಲಿ ಇವರ ಹೆಸರು ಅಗ್ರಸ್ಥಾನದಲ್ಲಿದೆ. ಆ ಪುಸ್ತಕದಲ್ಲಿ ಹೆಸರಿದ್ದವರ ಜೀವನವು ಸಿರಾಪದವಾಗಿರುವುದೆಂದು ತಿಳಿಯಬೇಡ."

"ನನಗೆ ಇವನ್ನೆಲ್ಲ ಏಕೆ ಹೇಳುತ್ತಿರುವಿರಿ?" ಅಪ್ರಸನ್ನಭಾವದಿಂದ ಪೆನಿಸರ್ ಪ್ರಶ್ನಿಸಿದಳು.

"ಅವರ ಚಲನವಲನವನ್ನು ನಾನು ಲಕ್ಷಿಸುತ್ತಿದೇನೆ. ಅವರು ಈದಿನ ರಾತ್ರಿ ಇಲ್ಲಿಗೆ ಬರುವರೋ ಹೇಗೆ ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ." ಎಂದ ವಿಲಿಯಮ್ಸ್.

"ಹಾಂ, ಬರುವುದಾಗಿ ಹೇಳಿದ್ದಾರೆ."

"ಹಾಗಾದರೆ ಒಂದು ಕೆಲಸ ಮಾಡು. ಅವರು ಬಂದರೆ, ಉಪಾಯದಿಂದ ರಾತ್ರಿ ಒಂದೂವರೆಯ ವರೆಗೆ ನಿಲ್ಲಿಸಿಕೊಳ್ಳಬೇಕು; ಆಮೇಲೆ ಕಳಿಸಬಹುದು."

ಪೆನಿಸರಳಿಗೆ ವಿಸ್ಮಯವು ಅನಿವಾರ್ಯವಾಯಿತು. ಉಸಿರುಗಟ್ಟಿದಂತೆ ಅವಳು ಕೇಳಿದಳು: "ಏಕೆ?"

"ಕೆಲವರು ಅವರನ್ನು ಕಾಣಬಯಸುತ್ತಾರೆ"

"ಕೇವಲ ಅಷ್ಟರ ಸಲುವಾಗಿಯೇ?"

"ನೀನಿಷ್ಟೇ ತಿಳಿದುಕೋ. ಹೆಚ್ಚಿನದನ್ನು ಅರಿಯಲು ಆತುರಳಾಗಬೇಡ."

* * * * *

ಅಗ್ಗಿಷ್ಟಿಗೆಯ ಹತ್ತಿರ ಕುಳಿತು ಪೆನಿಸರ್ ನ್ಯೂಯಾರ್ಕ್ ಹೆರಾಲ್ಡ್ ಓದುತ್ತಿದ್ದಳು. ಹಠಾತ್ ಜಾನ್ ಪಿಟರ್ಸ್ ಒಳಗೆ ಬಂದುದನ್ನು ಕಂಡು ಬೆಚ್ಚಿದಳು.

"ನನ್ನ ಹಾದಿ ಕಾಯುತ್ತಿದ್ದೆಯಾ ಮಿಸ್ ಪೆನಿಸರ್? ನಾನು ಬರುವೆನೆಂಬುದನ್ನು ಮರೆತಿಲ್ಲವೆಂದು ಕಾಣುತ್ತದೆ." ಪ್ರವೇಶಿಸುತ್ತ ಪಿಟರ್ಸ್ ಕೇಳಿದ.

“ ಇಲ್ಲ, ಮರೆತಿಲ್ಲ. ಆದರೆ ತಾವು ಬಂದುದಕ್ಕೆ ನನಗೇನು ಸಂತೋಷ ಷವಾಗಲಿಲ್ಲ. ಬರದಿದ್ದರೇ ಒಳಿತಾಗುತಿತ್ತು.” ಎಂದಳು ಪೆನಿಸರ್.

ಕುರ್ಚಿಯೊಂದನ್ನೆಳೆದುಕೊಂಡು ಕುಳಿತು ಪಿಟರ್ಸ್ ನುಡಿದ: “ ಹಾಗೆಂದರೆ ನಿನ್ನ ಮಾತಿನ ಅರ್ಥ ತಿಳಿಯಲಿಲ್ಲ; ತಿಳಿಸಿ ಹೇಳು. ಇಂದೂ ನೀನು ವೃತ್ತ ಪತ್ರಿಕೆಯಲ್ಲಿ ನನ್ನ ದುರಾಚರಣೆಯ ಸಂಗತಿಯನ್ನೇ ಓದುತ್ತಿದ್ದಯೇನೋ! ಇಷ್ಟು ಆಗ್ರಹಕ್ಕೆ ಕಾರಣವೇನು ? ”

“ ನನ್ನ ಮಿತ್ರ ಜಾನ್ ಪಿಟರ್ಸ್ ಮತ್ತು ಬರ್ಜಿಲಂಡಿನ ಯುವರಾಜ ಜಾನ್ ವ್ಹಲಂಟಾಯಿನ್ ಇವರಿಬ್ಬರಲ್ಲಿ ಸಾಮ್ಯವೆಲ್ಲಿದೆಯೆಂಬುದನ್ನು ಯೋಚಿಸುತ್ತಿದ್ದೆ. ಪತ್ರಿಕೆಯಲ್ಲಿ ವರ್ಣಿಸಿದ ಯುವರಾಜರ ಚಿತ್ರವನ್ನು ನೋಡುತ್ತಿದ್ದಾಗ, ಇಂತಹ ಅಧಮನೊಡನೆ ಇಂತಹ ರಾತ್ರಿಯಲ್ಲಿ ನಾನು ಏಕಾಕಿನಿಯಾಗಿ ಭೆಟ್ಟಿಯಾಗಲು ಯಾವ ಸಾಹಸದಿಂದ ಉದ್ಯುಕ್ತಳಾದೆನೋ ಎಂದೆನಿಸುತ್ತಿತ್ತು.” ಎಂದಳು ಪೆನಿಸರ್.

“ ನಿನಗೆ ನನ್ನಲ್ಲಿ ನಂಬುಗೆಯಿತ್ತೆಂದೇ ಬರಲಿಕ್ಕೆ ಹೇಳಿದೆಯಷ್ಟೆ? ” ಎಂದ ಪಿಟರ್ಸ್.

“ ಅಂದರೆ ನಾನು ನಂಬಬಾರದವರನ್ನು ನಂಬಿದ್ದೇನು; ಇಲ್ಲವೆ ತಾವು ಯುವರಾಜರಾಗಿರಲಿಕ್ಕಿಲ್ಲ; ಅಥವಾ ಪತ್ರಿಕೆಗಳಲ್ಲಿಯ ತಮ್ಮ ದುಷ್ಕೀರ್ತಿಯ ಸುದ್ದಿ ಸುಳ್ಳಿರಬೇಕು.” ಎಂದಳು ಪೆನಿಸರ್.

“ ನೀನು ಅಪಾತ್ರನನ್ನು ನಂಬಿಲ್ಲವೆಂದು ಮಾತ್ರ ನಾನು ಹೇಳಬಲ್ಲೆ.” ಎಂದ ಪಿಟರ್ಸ್.

“ ನಿನ್ನೆ ರಾತ್ರಿ ತಾವು ನನ್ನೊಡನೆ ಸುರಾಪಾನ ಮಾಡಿದಿರಿ. ಪತ್ರಿಕೆಗಳಲ್ಲಿ ನೋಡಿದರೆ ತಾವೊಬ್ಬ ನರ್ತಕಿಯ ಬೂಟಿನಲ್ಲಿ ಸ್ಯಾಂಪೆನ್ ಸುರಿದು ಕುಡಿದಿರೆಂದು ಪ್ರಕಟವಾಗಿದೆ; ಇದೇನು ಸತ್ಯವೆ ? ”

“ ನನಗಂತೂ ಇದು ನೆನಸಿಲ್ಲ. ನೀನಿದನ್ನು ಲೇಖಕನ ಕಲ್ಪನಾವೈಖರಿಯೆಂದು ತಿಳಿದುಕೊಳ್ಳಬಹುದು.”

“ ಇಡೀ ವರ್ಣನೆಯೆ ಅತಿರಂಜಿತವೆಂದು ತೋರುತ್ತದೆ.”

“ ಹಾಗೆ ಖಂಡಿತವಾಗಿ ಹೇಳಲು ಬಾರದು. ಇದರಲ್ಲಿ ಸ್ವಲ್ಪ ಸತ್ಯವಿರಲೂ ಬಹುದು.”

" ಅದಿರಲಿ. ಈಗ ನೀವು ಏನಾದರೂ ತೆಗೆದುಕೊಳ್ಳುವಿರಾ ? " ಎಂದು ಪೆನಿಸರ್ ಕೇಳಿದಳು.

" ತೆಗೆದುಕೊಳ್ಳದಿದ್ದರೆ ? " ನಗುತ್ತ ಪಿಟರ್ಸ್ ಕೇಳಿದ.

" ತಮಗೀಗಲೇ ಅಪ್ಪಣೆಕೊಟ್ಟುಬಿಡುವೆ."

" ಇಷ್ಟು ಕ್ಷಿಪ್ರದಲ್ಲಿ ತಿರುಗಿ ಹೋಗಲು ಬಂದಿಲ್ಲ ನಾನು. ನನ್ನ ಮೇಲೆ ನಿನಗೇಕಿಷ್ಟು ನಿರ್ದಯ ? "

" ತಮ್ಮನ್ನು ಬೇಗನೆ ಕಳಿಸುವುದು ನಿರ್ದಯದ ಕೆಲಸವೋ ಅಲ್ಲವೋ ಎಂಬುದನ್ನು ನಾಳೆ ಅರಿಯುವಿರಿ ಈಗ ಕತೆ ಹೇಳಿರಿ. ತಾವು ಅನೇಕದೇಶಗಳನ್ನು ತಿರುಗಿರುವಿರಿ, ಹಲವು ಕುತ್ತುಗಳಲ್ಲಿ ಬಿದ್ದು ಎದ್ದಿರುವಿರಿ, ಆ ಕತೆಗಳನ್ನೆಲ್ಲ ಕೇಳಬೇಕೆಂಬ ಇಚ್ಛೆಯಾಗಿದೆ. ನಾನಾ ಕಡೆಯ ಹಲವು ತರದ ವಿಲಕ್ಷಣ ಜನರನ್ನು ತಾವು ನೋಡಿರುವಿರಿ."

" ಹಲವು ಕಡೆ ಹಲವು ಬಗೆಯ ಜನರನ್ನು ನಾನು ಕಂಡುದೇನೋ ನಿಜ. ಆದರೆ ಅವರೊಡನೆ ಬೆರೆತು ಮಾತುಕತೆಯಾಡುವುದರಲ್ಲಿ ನನಗಷ್ಟು ಸೊಗಸಿರಲಿಲ್ಲ. ಆದ್ದರಿಂದ ನನಗೆ ಯಾರ ವಿಶೇಷ ಪರಿಚಯವೂ ಇಲ್ಲ. ಮತ್ತೆ ಸೇಂಟ್ ಮುಂಜ್ಗೆ ಹೋಗಿ ನಿನ್ನೊಡನೆ ಮಾತುಕತೆಯಾಡಬೇಕೆಂದು ನನಗೆ ಆಶೆಯಾಗುತ್ತಿದೆ."

" ಆ ದಿನಗಳು ಮರಳಿ ಬರಲಾರವು; ಆ ವಿಷಯವನ್ನು ನೆನಸುವ ಇಚ್ಛೆಯೂ ಆಗುವುದಿಲ್ಲ " ಎಂದು ನುಡಿದಳು ಪೆನಿಸರ್.

" ಆ ಸುಖದ ದಿನಗಳು ಮತ್ತೆ ಬರಬಲ್ಲವು."

" ಇಲ್ಲ, ಬರುವುದಿಲ್ಲ. ಅಲ್ಲಿ ನಿಮ್ಮ ಜಾನ್ ಪಿಟರ್ಸ್‌ರೊಡನೆ ಆಮೋದ ಪ್ರಮೋದಗಳು ನಡೆಯುತ್ತಿದ್ದವು. ಈಗ ಮೂರನೆಯ ವ್ಯಕ್ತಿ ಬಂದೆರಗಿದೆ."

" ಮೂರನೆಯವರು ಯಾರು ಮತ್ತೆ ? "

" ಬರ್ಜಿಲಂಡಿನ ಯುವರಾಜ ಜಾನ್ ವ್ಹಲಂಟಾಯಿನ್."

ಈ ಮಾತುಕತೆಗಳು ಇಲ್ಲಿಗೆ ನಿಂತವು ಇಬ್ಬರೂ ಮೌನವಾಗಿ ಪಾನಾಹಾರಗಳನ್ನು ಮುಗಿಸಿದರು. ಬಳಿಕ ಪಿಟರ್ಸ್ ಮೇಜಿನಮೇಲೆ ಮೊಣಕೈಯೂರಿ

ಕುಳಿತುಹೇಳಿದ: “ ನಾನು ಜಾನ್ ಪಿಟರ್ಸ್ ಎಂಬುದು ಸತ್ಯ, ಅದರಂತೆ ಯುವರಾಜ ಜಾನ್ ವ್ಹಲಿಂಟ್ಯಾನ್ ಎಂಬುದೂ ಸತ್ಯ. ಈ ಮಾತನ್ನು ನಿನ್ನೊಬ್ಬಳಿದುರಿಗೆ ಮಾತ್ರವೇ ಹೇಳಿದ್ದು, ಬೇರೆ ಯಾರಿಗೂ ಎಂದೂ ಹೇಳಿಲ್ಲ. ಹೆರವರ ಹುಳುಕುಗಳನ್ನು ಹುಡುಕುವ ಕಲಹಪ್ರಿಯರಾದ ಲೇಖಕರು ಪ್ರಪಂಚದಲ್ಲಿ ನೂರಾರು ಜನರಿದ್ದಾರೆ. ಮಂದಿಯ ಮೈಗೆ ರಾಡಿಯನ್ನೆರಚಿ ಅವರು ಆನಂದಪಡುತ್ತಾರೆ. ಆದರೆ ಅದೇ ರಾಡಿ ಎಷ್ಟೋ ಸಲ ಅವರ ಮೋರೆಗೇ ಸಿಡಿಯುತ್ತದೆ. ನನ್ನ ವಿಷಯ ನಿನಗೆ ಯಾವುದನ್ನೂ ಹೇಳಬಾರದೆಂದುಕೊಂಡಿದ್ದೆ. ಆದರೆ ನಿನ್ನ ಮನಸಿನಲ್ಲಿಯ ಸಂದೇಹವನ್ನು ತೆಗೆದುಹಾಕದಿರುವುದು ಉಚಿತವಲ್ಲವೆಂದು ತೋರುತ್ತಿದೆ. ನಾನೆಂದೂ ಯಾವ ನರ್ತಕಿಯ ಪಾದರಕ್ಷೆಯಲ್ಲಿಯೂ ಮದ್ಯವನ್ನು ಕುಡಿದಿಲ್ಲ ಬಹುಜನ ನರ್ತಕಿಯರ ವಿಷಯದಲ್ಲಿ ನನಗೆ ಬಿಂದುಮಾತ್ರವೂ ಅನುರಾಗವಿಲ್ಲ. ನಾನೊಮ್ಮೆಯೂ ಕುಡಿದು ಎಚ್ಚರುದಪ್ಪಿಲ್ಲ. ಸೇಂಟ್ ಮರಿಜನ್ನಲ್ಲಿ ನಿನ್ನೊಂದಿಗಿದ್ದಾಗ ಪಡೆದ ಆನಂದವೇ ಆನಂದ. ಅಂತಹ ಆನಂದವನ್ನು ಜೀವನದಲ್ಲಿ ಮತ್ತೆಂದೂ ನಾನು ಪಡೆದಿಲ್ಲ; ಮುಂದೆಂದೂ ಪಡೆಯುವುದಿಲ್ಲವೆಂದೇ ಎನಿಸುತ್ತದೆ ಬಾಳಿನ ಆವೆರಡು ಸಪ್ತಾಹಗಳ ಕಾಲ ಮಾತ್ರ ನನ್ನಿಂದಿನ ಮರುಭೂಮಿಯಲ್ಲಿ ತಂಪುನೆಳಲಿನ ಲತಾಕುಂಜ.”

“ ಹಾಯ್ ! ತಮ್ಮ ಮಾತನ್ನು ನಂಬುವುದು ಸಾಧ್ಯವಾಗಿದ್ದರೆ ! ” ಅಸ್ಫುಟವಾಗಿ ಪೆನಿಸರ್ ಉದ್ಗಾರತೆಗೆದಳು.

“ ನಂಬುವುದೇನೂ ಕಠಿಣವಲ್ಲ, ಸತ್ಯಕಥನವು ಗುಪ್ತವಾಗಿ ಉಳಿಯುವುದಿಲ್ಲ ” ಎಂದ ಪಿಟರ್ಸ್.

ಪೆನಿಸರ್ ನಿಟ್ಟುಸಿರನ್ನು ಕರೆದ.

ಗಡಿಯಾಳವನ್ನುನೋಡಿದಳು. ಒಂದು ಗಂಟೆಯಾಗಿತ್ತು. ಎರಡು ಕೈಗಳನ್ನೂ ಮೇಲೆತ್ತಿ ಅವಳೆಂದಳು: “ನಾನು ತಮ್ಮ ಮಾತಿನ ಬಗೆಗೆ ಅವಿಶ್ವಾಸಪಡುವುದಿಲ್ಲ. ಎಂತಲೇ ತಮ್ಮನ್ನೀಗಲೇ ಬೀಳ್ಕೊಡಬೇಕೆಂದು ಇಚ್ಛಿಸುತ್ತೇನೆ. ಅದೇಕೆಂದು ಕೇಳಬೇಡಿರಿ ಮಾತ್ರ. ಈ ವಿಷಯವಾಗಿ ವಾದವಿವಾದ ಬೆಳಸದೆ, ಇಗೊಳ್ಳಿ, ಈ ಚುರೂಟನ್ನು ತೆಗೆದುಕೊಳ್ಳಿರಿ, ಸೇದುತ್ತ ಸೇದುತ್ತಾ ಒಳ್ಳೆಯ ಮನುಷ್ಯರ ಹಾಗೆ ಮನೆಗೆ ಹೋಗಿರಿ! ” ಎಂದು ಪಿಟರ್ಸನಿಗೆ ಅವಳೊಂದು ಚುರೂಟನ್ನು ಕೊಟ್ಟಳು.

“ ಅರ್ಧಚಂದ್ರಪ್ರಯೋಗ ಬಹಳ ಶೀಘ್ರವೇ ಆಯಿತು! ” ಪಿಟರ್ಸ್ ಹತಾಶಭಾವದಿಂದ ನುಡಿದ.

“ ಆಗಲಿ. ಈ ಅರ್ಧಚಂದ್ರ ತಮ್ಮ ಮಂಗಲಕ್ಕಾಗಿಯೆ. ಇಷ್ಟು ಅವಸರದಿಂದ ತಮ್ಮನ್ನು ಹೊರಹೊರಡಿಸಲು ನಾನೇಕೆ ವ್ಯಗ್ರಳಾಗಿದ್ದೇನೆಂಬುದು ಹಿಂದುಗಡೆ ತಮಗೆ ತಿಳಿಯಬಹುದು.”

“ ಇಲ್ಲಿಗೆ ಬರಲು ನನಗಿನ್ನು ಆಸ್ಪದವಿಲ್ಲವೆ ?” ವಿಷಾದದಿಂದ ಪಿಟರ್ಸ್ ಕೇಳಿದ.

“ ನಿಶ್ಚಯವಾಗಿ ಇದೆ. ಮತ್ತೊಮ್ಮೆ ಬನ್ನಿರಿ; ನಾನು ಬರಲು ತಿಳಿಸುತ್ತೇನೆ. ಈಗ ಮಾತ್ರ ತಡಮಾಡದೆ ಹೊರಟುಹೋಗಬೇಕು.”

ಅವಳ ಆಕುಲತೆಯ ಕಾರಣವನ್ನು ತಿಳಿಯಲಾರದೆ ಪಿಟರ್ಸ್ ಅತ್ಯಂತ ವಿಸ್ಮಿತನಾದ. ಆದರೆ ವಿರಕ್ತನಾಗಲಿಲ್ಲ. ಅವಳ ಪ್ರತಿಯೊಂದು ಮಾತಿನಲ್ಲಿ ಪ್ರತಿಯೊಂದು ಇಂಗಿತದಲ್ಲಿ ಅವನ ಬಗೆಗೆ ಸಮವೇದನೆಯ ಭಾವ ಒಡೆದು ಕಾಣುತ್ತಿದ್ದಿತು. ತನ್ನ ವಿಷಯದಲ್ಲಿ ಪೆನಿಸರಳಿಗೆ ವಿರಕ್ತಿಯಾಗಲಿ ಅಸಂತುಷ್ಟಿಯಾಗಲಿ ಇಲ್ಲವೆಂದರಿತು ಪಿಟರ್ಸ್‌ನಿಗೆ ಆನಂದವೆನಿಸಿತು; ಅಶಾಂತಿಯಲ್ಲಿಯೂ ಶಾಂತಿಲಭಿಸಿತು ಅವನು ಸಂದೇಹದಿಂದ ಪೆನಿಸರಳ ಮುಖವನ್ನು ನೋಡಿ ಕೋಣೆಯಿಂದ ಹೊರಬಿದ್ದು ದೀರ್ಘವಾದ ಮೊಗಸಾಲೆಯಲ್ಲಿ ಸಾಗಿದ. ಅಲ್ಲಿ ಪ್ರಕಾಶ ಮಂದವಾಗಿ ಹರಡಿತ್ತು.

ಪೆನಿಸರ್ ಬಾಗಿಲನ್ನಿಕ್ಕಿ ಅಲ್ಲಿಯೇ ನಿಂತುಕೊಂಡಳು. ಬಲಗೈಯಿಂದ ಎದೆಯನ್ನು ಮುಟ್ಟಿಕೊಂಡು ನೋಡಿ ಕಾತರಭಾರದಿಂದ ಕಿಡಿಕಿಯಬಳಿ ಸಾರಿದಳು. ಮಂದಮಾರುತ ಅವಳ ಮುಂಗುರುಳುಗಳನ್ನು ಮೆಲ್ಲನೆ ತೀಡಿತು. ತಂಪುತಗಲಿ ಅವಳಿಗೆ ನವಜೀವನ ಬಂದಂತಾಯಿತು. ಹತ್ತಿರದಲ್ಲಿ ಟೈಂಪೀಸು ಟಿಕ್ ಟಿಕ್ ಎನ್ನುತ್ತಿತ್ತು. ಟಂಬ್ ಎಂದು ಒಮ್ಮೆ ಬಾರಿಸಿ ಅರ್ಧ ಗಂಟೆಯಾದುದನ್ನು ಸೂಚಿಸಿತು; ಒಂದೂವರೆಯಾಯಿತು. ಎದೆಯೊಳಗೆ ಬಡಿದಂತಾಗಿ ಪೆನಿಸರಳ ಮೈಗೂದಲು ನೆಟ್ಟಗಾದವು. ಸರಕ್ಕನೆ ಬಂಗಾರದ ಜೇಬಿನ ಗಡಿಯಾಳವನ್ನು ತೆಗೆದು ನೋಡಿದಳು; ಒಂದಕ್ಕೆ ಅದು ನಿಂತು

ಹೋಗಿತ್ತು. ಸರ್ ವಿಲಿಯಂ ಹೇಳಿದಂತೆ ಸರಿಯಾದ ಸಮಯಕ್ಕೆ ಯಂತ್ರದ ದೋಷದಿಂದಾಗಿ ಗೊತ್ತಾಗದಂತೆಯೆ ಪೆನಿಸರ್ ಪಿಟರ್ಸನನ್ನು ಬೀಳ್ಕೊಟ್ಟಿದ್ದಳು !

೬

ಜಾನ್ ಪಿಟರ್ಸನಂತಹ ಸಾಹಸಿಗಳು ಮತ್ತೊಬ್ಬರು ಇಡೀ ಯುರೋಪ ಖಂಡದಲ್ಲಿಯಾದರೂ ಇದ್ದರೋ ಇಲ್ಲವೋ ಸಂದೇಹ. ಅಂತಹನ ಎದೆಯೂ ಪೆನಿಸರಳ ಮನೆಯ ಹೊರಚಪ್ಪರದಲ್ಲಿ ನಡೆದಾಗ ಆಗಾಗ ಹಾರುತ್ತಲಿತ್ತು. ಅವನು ಅಟ್ಟವನ್ನು ಏರುವ ಇಳಿಯುವ ವಿದ್ಯುತ್ತಿನ ತೊಟ್ಟಿಲನ್ನು ಸಮೀಪಿಸಿರಬಹುದು ಬಲಗಡೆಯಲ್ಲಿ ಯಾರದೋ ಉಸಿರಾಟ ಕೇಳಿತು ; ಹೆಜ್ಜೆಗಳ ಮೃದುಶಬ್ದವೂ ಕೇಳಿದಂತಾಯಿತು. ಪಿಟರ್ಸ್ ತತ್‌ಕ್ಷಣ ತಿರುಗಿನಿಂತ. ಕೃಶಶರೀರದ ಮನುಷ್ಯನೊಬ್ಬನು ಒಮ್ಮೆಲೆ ಎದುರಿಗೆ ಬಂದು ತೀಕ್ಷ್ಣಧಾರೆಯ ಖಡ್ಗವನ್ನು ಅವನ ತಲೆಗೆ ಬೀಸಲುಜ್ಜುಗಿಸಿದ. ಆದರೆ ಪಿಟರ್ಸ್ ವಿದ್ಯುದ್ವೇಗದಿಂದ ಅವನ ಮೇಲೆರಗಿ, ಹೊಡೆಯಲುದ್ಯುಕ್ತವಾದ ಕೈಗೆ ಬಲವಾಗಿ ಹೊಡೆದ; ಕತ್ತಿ ಅವನ ಹಿಡಿಯಿಂದ ಕಳಚಿಹೋಗಿ ದೂರದಲ್ಲಿ ಬಿದ್ದಿತು.

ಪಿಟರ್ಸನ ಆ ಹಗೆ ದಾಳಿಯಿಡುವ ಕ್ಷಣದಲ್ಲೇ ವಿದ್ಯುದ್ದೀಪಗಳನ್ನು ಆರಿಸಿಬಿಟ್ಟಿದ್ದ. ಪಿಟರ್ಸ್ ವೈರಿಯ ಕತ್ತನ್ನು ಒಂದು ಕೈಯಿಂದ ಒತ್ತಿ ಹಿಡಿದು, ಒಂದು ಕೈಯಿಂದ ಪುನಃ ದೀಪ ಹಚ್ಚಿದ. ಅವನ ಕಸುವಿನ ಹಿಡಿತದಿಂದ ಮೇಲಿನ ಉಸಿರು ಮೇಲೆ ಕೆಳಗಿನ ಉಸಿರು ಕೆಳಗೆ ಆದಂತಾಗಿ ಶತ್ರು ಕಸಪಿಸಿಯಿಂದ ಚೀರಿದ. “ ಸತ್ತೆ ಸತ್ತೆ ! ದಮ್ಮಯ್ಯ, ನನ್ನನ್ನು ಕೊಲ್ಲಬೇಡ ; ಕುತ್ತಿಗೆಯನ್ನು ಅಷ್ಟು ಹಿಸುಕಬೇಡ, ಸ್ವಲ್ಪ ಸಡಿಲು ಬಿಡು ; ಇಲ್ಲದಿದ್ದರೆ ಸತ್ತೇ ಹೋಗುತ್ತೇನೆ.” ಎಂದು ಕೂಗಿಕೊಂಡ.

ಹಿಡಿತವನ್ನು ಕೊಂಚ ಸಡಿಲಿಸಿ, ಪಿಟರ್ಸ್ ಅವನನ್ನು ಸ್ವಲ್ಪದೂರ ಎಳೆದುಕೊಂಡು ಹೋಗಿ ನುಡಿದ: “ ಇಗೋ ಜೋಕೆ, ನೀನು ಓಡಿ ಹೋಗಲು ಪ್ರಯತ್ನಿಸಬೇಡ ; ನಿನ್ನ ಉದ್ಧಾರಕ್ಕಾಗಿ ಯಾರನ್ನಾದರೂ ಕೂಗಿಗೀಗೀ; ಕೊಂದೇ ಬಿಡುತ್ತೇನೆ. ಓಡಿ ಹೋಗಲು ಯತ್ನಿಸದೆ ನಾನು ಹೇಳಿ

ದಂತೆ ಕೇಳಿದರೆ ನಿನ್ನ ಜೀವ ಉಳಿದೀತು. ನೀಟಾಗಿ ನಿಂತು ನಾನು ಹೇಳುವು ದನ್ನು ಕೇಳು."

ಪಿಟರ್ಸ್ ಹಗೆಯ ಗಂಟಲನ್ನು ಬಿಟ್ಟು, ಮುಷ್ಟಿಗೆ ಮಾಡಿದ ಬಲಗೈ ಯನ್ನು ಅವನ ಹೆಗಲಮೇಲಿರಿಸಿ, ಅಂತರ್ಭೇದೀ ದೃಷ್ಟಿಯಿಂದ ಅವನ ಮುಖ ವನ್ನು ನೋಡುತ್ತ ಮಾತನಾಡಿದ: "ನೀನು ಸಾಯಬೇಕೆನ್ನುವಿಯೋ ಬದುಕಬೇಕೆನ್ನುವೆಯೊ ಮೊದಲು ನಿರ್ಧರಿಸಿಕೋ. ನನ್ನ ಉಕ್ಕಿನಂತಹ ಮೈಯನ್ನು ನೋಡಿದೆಯಷ್ಟೆ? ಮನಸುಮಾಡಿದರೆ ನಿನ್ನನ್ನು ಹುಳದಂತೆ ಒರೆದುಕೊಂಡೇನು."

"ನೀನು ನನ್ನನ್ನು ಕೊಲ್ಲಲು ಸಮರ್ಥನೇನೋ ನಿಜ. ಆದರೆ ಆ ಸಾಹಸ ನಿನಗೆ ಬರಲಾರದು." ಶತ್ರು ಪಿಟರ್ಸನ ಮೊಗ ನೋಡುತ್ತ ನುಡಿದ.

ಪಿಟರ್ಸ್ ನಕ್ಕ. "ಏಕೆ? ಆತ್ಮರಕ್ಷಣೆಗಾಗಿ ನಿನ್ನನ್ನು ಕೊಲ್ಲಲು ನನಗೆ ಅಧಿಕಾರವಿದೆ. ನನ್ನನ್ನು ಕೊಲ್ಲಲು ನನಗೆ ಹೆಚ್ಚಿನ ಸಾಧನ ಬೇಕಾಗಿಲ್ಲ. ಅರೆನಿಮಿ ಷದಲ್ಲಿ ಕತ್ತು ಹಿಸುಕಿ ನಿನ್ನನ್ನು ಕೊನೆಗಾಣಿಸುವೆ ಹೆಚ್ಚು ಮಾತನಾಡುವ ಅಗತ್ಯವಿಲ್ಲ ಹೇಳು, ಸಾಯಬೇಕೆನ್ನುತ್ತೀಯೋ ಬದುಕಬೇಕೆನ್ನುತ್ತೀಯೋ?"

"ಬಯಸಿ ಸಾಯಬೇಕೆನ್ನುವವರುಂಟೇ ಯಾರಾದರೂ?"

"ತಿಳಿಯಿತು, ನೀನು ಹೇಡಿ. ಸಾವಿಗೆ ಅಂಜುತ್ತೀ. ನಾನು ನಿನ್ನನ್ನು ಬಿಟ್ಟು ಬಿಡುತ್ತೇನೆ; ಆದರೆ ನೀನೊಂದು ಮಾತನ್ನು ಕೇಳಬೇಕು. ನನ್ನ ವಧೆಗಾಗಿ ನಿನ್ನನ್ನು ಯಾರು ಕಳಿಸಿದ್ದರೋ ಅವರ ಹತ್ತಿರ ನನ್ನನ್ನು ಕರೆದು ಕೊಂಡು ಹೋಗಬೇಕು. ಒಪ್ಪಿಗೆಯೆ?" ಎಂದ ಪಿಟರ್ಸ್.

"ನಿನ್ನನ್ನು ಅವರ ಹತ್ತಿರ ಕರೆದುಕೊಂಡು ಹೋಗಬೇಕೆ?" ವಿಸ್ಮಯ ದಿಂದ ಕೇಳಿದ ಆ ಮನುಷ್ಯ.

"ಹೌದು. ನೀನಿದನ್ನು ಒಪ್ಪಿವಿಯೋ ಇಲ್ಲವೋ ಬೇಗ ಹೇಳು. ನಾನು ಅವರನ್ನು ಕಾಣದೆ ಮನೆಗೆ ಹೋಗುವುದಿಲ್ಲ."

"ನೀನೊಬ್ಬನೇ ಹೋಗುವೆಯಾ ಅಲ್ಲಿಗೆ?"

"ಹೂಂ"

"ನಡೆ ಹಾಗಾದರೆ ಕರೆದುಕೊಂಡು ಹೋಗುವೆ."

"ಆದರೆ ನೋಡು, ಓಡಿಹೋಗಲು ಯತ್ನಿಸಿದರೆ ಪೋಲೀಸರಿಗೆ ಒಪ್ಪಿಸುತ್ತೇನೆ."

"ಸಮೀಪದಲ್ಲಿ ಚೌಕಿಯಿಲ್ಲ, ನನಗೆ ಓಡಿಹೋಗುವ ಇಚ್ಛೆಯೂ ಇಲ್ಲ. ನನ್ನನ್ನು ಈ ಕೆಲಸಕ್ಕೆ ಹಚ್ಚಿದವರು ಸಮೀಪದಲ್ಲಿಯೇ ಇದ್ದಾರೆ." ಎಂದು ಆ ಮನುಷ್ಯ ನುಡಿದ.

"ಅವರು ಈ ಮನೆಯಲ್ಲಿಯೆ ಇರುವರೆ?" ಎಂದು ಪಿಟರ್ಸ ಕೇಳಿದ.

"ಹೌದು; ಈ ಮನೆಯಲ್ಲಿಯೆ. ನಡೆ ಹೋಗುವ."

"ನನ್ನ ಕೊಲೆಗೆ ನಿನ್ನಂಥ ಜೇರೆಯುವನನ್ನು ಅವರೇಕೆ ನೇಮಿಸಿದರು? ಅವರಿಗೆ ತಮ್ಮ ಇಚ್ಛೆಗೆ ವಿಪರೀತ ಫಲ ದೊರೆಯುವುದೆಂಬುದು ಶೀಘ್ರವೇ ಗೊತ್ತಾಗುವುದು."

"ಸಮಿತಿಯ ನಿಯಮದಂತೆ ಈ ಕಠಿನ ಕಾರ್ಯದ ಭಾರ ನನ್ನಮೇಲೆ ಬಿತ್ತು; ಬೇರೆ ಯಾರ ಮೇಲಾದರೂ ಬಿದ್ದಿದ್ದರೆ ನೆಟ್ಟಗಿತ್ತು. ನನ್ನ ಗಂಟಲು ಬಾತುಹೋಗಿದೆ, ಉಗುಳು ನುಂಗಲು ಕೂಡ ಕಷ್ಟವಾಗುತ್ತಿದೆ; ನಿನ್ನ ಕೈ ಉಕ್ಕಿನದೋ?...."

ಪಿಟರ್ಸ್ ಯಾವ ಕಡೆಯಿಂದ ಬಂದಿದ್ದನೋ ಅದೇ ಕಡೆಗೆ ಆ ಮನುಷ್ಯ ಸಾಗಿದ. ಪಿಟರ್ಸ್ ಅವನನ್ನು ಬೆಂಬತ್ತಿ ನಡೆದ

"ಇನ್ನೂ ಎಷ್ಟು ದೂರ? ಎಷ್ಟನೆಯ ಮನೆಗೆ ಹೋಗಬೇಕು?" ಹೋಗುಹೋಗುತ್ತ ಪಿಟರ್ಸ್ ಕುತೂಹಲದಿಂದ ಆ ಮನುಷ್ಯನನ್ನು ಕೇಳಿದ.

"ಇನ್ನೇನು ಮುಂದೆ ಹೋಗಬೇಕಾಗಿಲ್ಲ; ಈಗ ನಾವು ನಿರ್ದಿಷ್ಟ ಸ್ಥಳಕ್ಕೆ ಬಂದಿದ್ದೇವೆ" ಎಂದು ಆ ಮನುಷ್ಯ ಹೇಳಿದ.

ಆಗ ಪಿಟರ್ಸ್ ಬಂದುದು ಪೆನಿಸರಳನ್ನು ಸಂದರ್ಶಿಸಿದ ಮನೆಯ ಬಳಿ. ಅವನ ಮನಸಿನಲ್ಲಿ ಹಲವಾರು ಯೋಚನೆಗಳೆದ್ದವು. 'ನನ್ನನ್ನು ಪೆನಿಸರಳ ಮನೆಯೊಳಗೇ ಕರೆದೊಯ್ಯುವನೆ? ಆ ಮನೆಯ ಇನ್ನೊಂದು ಕಡೆಯಲ್ಲಿ ಬೇರೆ ಯಾವ ಕೋಣೆಯೂ ಇಲ್ಲ, ಎಂದಮೇಲೆ ನಾನು ಹೋಗಬೇಕಾದುದು ಅಲ್ಲಿಗೇ ಇರಬೇಕು. ಆದರೆ ಇದೇನು ಸಮಾಚಾರ! ಪೆನಿಸರಳೂ ಈ ಸ.ಚಿ ನಲ್ಲಿದ್ದಾಳೆಯೆ? ಇಷ್ಟು ದಿನವೂ ನಾನವಳನ್ನು ಗುರುತಿಸದೆ ಹೋದೆನೆ?'

"ಮನೆಯ ನಂಬರೆಷ್ಟು?" ಪಿಟರ್ಸ್ ಆ ಮನುಷ್ಯನನ್ನು ಕೇಳಿದ

" ಇದೇ ಎದುರಿನದೇ, ೨೦ ನೆಯ ನಂಬರಿನದು. ನೀವು ಮುಂದೆ ಹೋಗುವಿರೇನು ? "

ಅವನ ಈ ಪ್ರಶ್ನೆಗೆ ಪಿಟರ್ಸ್ ಉತ್ತರವೀಯಲಿಲ್ಲ. ಆರೆನಿಮಿಷ ಅವನ ಸರ್ವಾಂಗ ಕಂಪಿಸಿತು. ತನ್ನ ಜೀವನದ ದೀಪ ನಂದಿದಂತೆ, ಸುಖಸ್ವಪ್ನವು ಒಮ್ಮೆಲೆ ಹರಿದಂತೆ ಅವನಿಗೆನಿಸಿತು. ಅವನು ಒಂದು ಕ್ಷಣಹೊತ್ತು ವಿಹ್ವಲನಾದ. ತನ್ನ ಪ್ರೀತಿಗೆ, ಸಂಪೂರ್ಣ ವಿಶ್ವಾಸಕ್ಕೆ ಪಾತ್ರಳಾದ ಹೆಂಗುಸಿನ ಕೆಲಸವೆ ಇದು? ಅವಳು ತನ್ನನ್ನು ಸಹಜವಾಗಿಯೆ ಮೃತ್ಯುವಿನ ದವಡೆಗೆ ನೂಕುತ್ತಿದ್ದಾಳೆ, ತನ್ನನ್ನು ಕೊಲ್ಲಲು ಸಂಚುಹೂಡಿ ಹತ್ತಿರವೇ ನೋಡುತ್ತಿದ್ದಾಳೆ; ಇದೆಲ್ಲ ಗೊತ್ತಿದ್ದರೂ ಅವಳು ತನ್ನನ್ನು ನಗುಮೊಗದ ಸರಸಸಲ್ಲಾಪದಿಂದ ಬೀಳ್ಕೊಟ್ಟಳು !

ಆ ಮನುಷ್ಯ ೨೦ನೆಯ ಮನೆಯೆದುರು ಬಂದು ನಿಂತ. ಪಿಟರ್ಸ್ ಅತಿಪ್ರಯತ್ನದಿಂದ ತನ್ನ ವಿಚಾರ ಪ್ರಪಂಚದಿಂದ ಈಚೆಗೆ ಬಂದ. ಅವನ ಹೃದಯ ಆತ್ಮಶಕ್ತಿಯಿಂದ ತುಂಬಿಕೊಂಡಿತು. ಬಾಗಿಲ ಹತ್ತಿರ ನಿಂತು ತನ್ನ ಶತ್ರುವಿನ ಮೊಗದ ಕಡೆಗೆ ನೋಡಿದ.

"ಅವರು ಈ ಮನೆಯೊಳಗೇ ಇದ್ದಾರೆ. "ಎಂದು ಹೇಳಿದ ಆ ಮನುಷ್ಯ.

" ನೀನು ಮುಂದೆ ನಡೆ, ನಾನು ನಿನ್ನ ಹಿಂದೆ ಬರುತ್ತೇನೆ. ನೀನು ಯಾರಿಗೇನನ್ನೂ ಹೇಳಬೇಡ ; ಹೇಳುವುದನ್ನೆಲ್ಲ ನಾನು ಹೇಳುತ್ತೇನೆ. " ಎಂದು ಪಿಟರ್ಸ್ ಎಂದ.

೭

ಪಿಟರ್ಸ್ ಜೇಬಿನಲ್ಲಿ ಕೈಹಾಕಿ ಪಿಸ್ತೂಲನ್ನು ಹಿಡಿದು ಒಳ್ಳೇ ಜಾಗರೂಕತೆಯಿಂದ ಕೆಸಿಸರಳ ಕೋಣೆಯನ್ನು ಪ್ರವೇಶಿಸಿ ಕೂಡಲೆ ಬಾಗಿಲಿಕ್ಕಿ ಅದಕ್ಕೆ ಬೆನ್ನಾನಿಸಿ ನಿಂತ. ಅಲ್ಲಿ ಇಬ್ಬರು ಸದ್ಗೃಹಸ್ಥರಿದ್ದರು. ಪಿಟರ್ಸ್ ಅವರ ಕಡೆ ಪಿಸ್ತೂಲನ್ನು ಗುರಿಯಿಟ್ಟು ಹೇಳಿದ : " ಮಹಾಶಯರೇ, ನಾನು ಒಳಗೆ ಬಂದದ್ದು ತಮಗೆ ಅನಪೇಕ್ಷಿತವಾಗಿದ್ದರೂ ಇರಬಹುದು. ಹಾಗಿದ್ದರೆ ನನ್ನೀ ಆಗಂತುಕ ಪ್ರವೇಶಕ್ಕಾಗಿ ಕ್ಷಮಿಸಿರಿ ತಮ್ಮ ಜೇಬುಗಳಲ್ಲಿ ಪಿಸ್ತೂಲುಗಳುಂಟೆಂದು ನಾನು ಬಲ್ಲೆ. ಆದರೆ ನೋಡಿ, ನೀವು ಯಾರಾದರೂ ಜೇಬಿನ ಕಡೆ ಕೈಯೊಯ್ದಿರೆಂದರೆ, ತತ್‌ಕ್ಷಣ ಅವರಿಗೆ ಗುಂಡಿಕ್ಕಿಬಿಡುವೆ. ನಾನು

ಸುಳ್ಳುಸುಳ್ಳೇ ಹೆದರಿಸುತ್ತಿಲ್ಲ; ನನಗೆ ಒಣಜಂಬಕೊಚ್ಚಿಕೊಳ್ಳುವ ರೂಢಿಯೂ ಇಲ್ಲ ; ಆದರೂ ತಮಗೆ ಜ್ಞಾಪಕವಿರಲಿ ; ನನ್ನ ಗುರಿ ಎಂದೂ ಹುಸಿಹೋಗದ ಗುರಿ ; ನನ್ನಂಥ ಗುರಿಕಾರರು ಇಡೀ ಯುರೋಪದಲ್ಲಿಯೆ ಬಹುಶಃ ಯಾರೂ ಇಲ್ಲ.''

ಜಾನ್ ಪಿಟರ್ಸ್ ಆ ಇಬ್ಬರು ಸದ್ಗೃಹಸ್ಥರ ಕಡೆಗೂ ಪೆನಿಸರಳ ಕಡೆಗೂ ಎವೆಯಿಕ್ಕದೆ ನೋಡತೊಡಗಿದ. ಇಬ್ಬರಲ್ಲೊಬ್ಬ ವಿಕರಾಳಮೂರ್ತಿ, ವರ್ಣ ಈಷತ್ ಮಲಿನ, ಅವನ ಚಿಕ್ಕ ಕಣ್ಣುಗಳು ಚಂಚಲ, ಗಡ್ಡಮೀಸೆ ಕಪ್ಪು ; ಇನ್ನೊಬ್ಬ ಸ್ವಲ್ಪ ವಯಸ್ಸಾದವ, ನೋಡುವುದಕ್ಕೆ ಅಷ್ಟು ಕುರೂಪಿಯಲ್ಲ, ಕಣ್ಣುಗಳು ಉಜ್ಜ್ವಲ. ಇಬ್ಬರೂ ಒಳ್ಳೆಯ ಉಡುಪಿನವರು. ಪಿಟರ್ಸನ ಆಕಸ್ಮಿಕ ಆವಿರ್ಭಾವದಿಂದಾಗಲಿ ಭಯಸೂಚನೆಯ ಮಾತಿನಿಂದಾಗಲಿ ಅವರು ಕೊಂಚವೂ ವಿಚಲಿತರಾಗಲಿಲ್ಲ. ಪೆನಿಸರಳ ಮುಖವು ಮಾತ್ರ ಕಂದದಿರಲಿಲ್ಲ. ಅವಳ ಮೈಯಲ್ಲಿ ನಡುಕ ಹುಟ್ಟಿತು. ನೋಟ ಕೆಳಗೆ ಹಾಕಿಕೊಂಡು ಅವಳು ಕುಳಿತುಬಿಟ್ಟಳು

ಪಿಟರ್ಸ್ ಹೇಳಿದ : ''ತಮ್ಮೊಡನೆ ಸ್ವಲ್ಪ ಮಾತನಾಡಬೇಕಾಗಿದೆ ; ಅದಕ್ಕೇ ಬಂದೆ ; ಅದಕ್ಕಾಗಿ ತಾವು ಬೇಜಾರುಪಟ್ಟುಕೊಳ್ಳುವುದಿಲ್ಲವೆಂದು ಆಶಿಸುವೆ. ನನ್ನೀಗಿನ, ನಡತೆ ತಮಗೆ ಕೊಂಚ ಒರಟಾಗಿ ಕಾಣಬಹುದು, ಆದರೆ ಉಪಾಯವಿಲ್ಲ. ಏನೇ ಇರಲಿ ; ನನ್ನೊಡನೆ ನಾಲ್ಕು ಮಾತನಾಡಲು ತಮ್ಮಡ್ಡಿಯಿಲ್ಲವಷ್ಟೇ ? ''

'' ತಮ್ಮ ಅಪೇಕ್ಷೆಯಂತೆ ಆಗಬಹುದು. ಹೇಳುವುದನ್ನು ಹೇಳಿರಿ. '' ಎಂದ ವಯಸ್ಸಾದ ಮನುಷ್ಯ.

'' ತಮ್ಮ ಜೊತೆಗಾತಿಯಾದ ಈ ಮಹಿಳೆ, ಸ್ವಲ್ಪ ದೂರ ಬೇರೊಂದು ಕುರ್ಚಿಯಲ್ಲಿ ಕುಳಿತುಕೊಳ್ಳಲಿ. '' ಎಂದ ಪಿಟರ್ಸ್.

ಪೆನಿಸರ್ ಎದ್ದು ಬೇರೆ ಕಡೆ ಕುಳಿತಳು. ವಯಸ್ಸಾದ ಮನುಷ್ಯ ಸಿಗಾರೇಟ್ ಪ್ಯಾಕನ್ನು ಪಿಟರ್ಸನ ಮುಂದೆ ಚಾಚುತ್ತ '' ತೆಗೆದುಕೊಳ್ಳಿರಿ, ಸಿಗಾರೇಟ್ ಸೇದಿರಿ. ಒಳ್ಳೆಯ ಸೊಗಸಾದ ಸಿಗಾರೇಟ್. ''

'' ಸಿಗಾರೇಟ್ ಸೊಗಸಾದುದೇನೊ ಹೌದು ; ಆದರೆ ನನಗಿದರ ಅಭ್ಯಾಸವಿಲ್ಲ. ತಾವು ಬೇಕಾದರೆ ಸೇದಿಕೊಳ್ಳಬಹುದು. ಅದನ್ನು ಸೇದುತ್ತಲೇ

ನನ್ನೊಂದಿಗೆ ಮಾತನಾಡಲು ತಮ್ಮ ಆಕ್ಷೇಪಣೆಯಿಲ್ಲವೆಂದು ಭಾವಿಸುತ್ತೇನೆ" ಎಂದ ಪಿಟರ್ಸ್.

"ಖಂಡಿತ ಅಡ್ಡಿಯಿಲ್ಲ. ಆದರೆ ನಿಮ್ಮ ಪ್ರಶ್ನೆಗಳಿಗೆಲ್ಲಾ ಉತ್ತರ ಕೊಡುವುದು ಬಿಡುವುದು ನಮ್ಮಿಚ್ಛೆ."

"ತಮ್ಮೊಡನೆ ಎದುರುವಾದ ಹೂಡಬೇಕೆಂದು ನನಗೆ ಮನಸಿಲ್ಲ;—ತಮ್ಮ ಹೆಸರು ಗೊತ್ತಿಲ್ಲ; ಏನೆಂದು ಸಂಬೋಧಿಸಬೇಕೆಂಬುದು ಮೊದಲನೆಯ ಪ್ರಶ್ನೆ."

"ಮಿಸ್ ಪೆನಿಸರಳ ಗುರುತಂತೂ ತಮಗೆ ಮೊದಲೇ ಇದೆ. ತಮ್ಮನ್ನಿಲ್ಲಿಗೆ ಕರೆತಂದವರ ಹೆಸರು ಮಿ ಡೇಕರ್ಜ್, ನನ್ನ ಎಡಕ್ಕೆ ಕುಳಿತವರು ಮಿ. ಸೇಂಟ್ ಡಾಲ್ಮಾ, ನಾನು ಸರ್ ವಿಲಿಯಮ್ ವಿಲ್ಸನ್. ತಮ್ಮ ಹೆಸರು. ಜಾನ್ ಪಿಟರ್ಸೆಂದು ತೋರುತ್ತದೆ ಅಲ್ಲವೆ?" ಎಂದ ವಯಸ್ಸಾದ ಮನುಷ್ಯ

"ಹೌದು, ನಾನು ಜನಸಾಮಾನ್ಯರಲ್ಲಿ ಈ ಹೆಸರಿನಿಂದಲೇ ಪರಿಚಿತ; ಆದರೆ ಕೆಲವರು ನನ್ನನ್ನು ಬರ್ಜಲಂಡಿನ ಯುವರಾಜನೆಂದೂ ತಿಳಿದಿರುವರು. ಈಗ ಹೇಳಿ ಸರ್ ವಿಲಿಯಮ್, ತಾವೂ ಈ ರಮಣಿಯೂ ಕೂಡಿ ನನ್ನನ್ನು ಈ ಲೋಕದಿಂದ ಹೊರಗಟ್ಟಲು ಹವಣಿಸುವುದಕ್ಕೆ ನಾನು ಮಾಡಿದ ಅಪರಾಧವೇನು? ಯಾವ ಕಾರಣದಿಂದಲಾದರೂ ನಾನು ತಮಗೆ ಅಪ್ರಿಯನಾಗಿಯೇ ಇದ್ದರೆ, ಅದು ಇಷ್ಟು ವಿಕೋಪಕ್ಕೆ ಹೋಗುವುದು ಉಚಿತವೆ?"

"ಯುವರಾಜ,— ಪಿಟರ್ಸ್ ಎಂಬುದೇ ತಮಗೆ ಸೇರುತ್ತಿದ್ದರೆ ಹಾಗೆಯೇ ಕರೆಯುತ್ತೇನೆ.—ಮಿ. ಪಿಟರ್ಸ್, ತಾವು ನಮ್ಮ ಬಗ್ಗೆ ತಪ್ಪುತಿಳಿದುಕೊಂಡಿದ್ದೀರಿ. ನಾನು ತಮ್ಮನ್ನು ಮೊದಲೆಂದೂ ನೋಡಿಲ್ಲ, ತಮ್ಮ ಬಗ್ಗೆ ನನ್ನ ವ್ಯಕ್ತಿಗತ ವಿರೋಧವೇನೂ ಇಲ್ಲ. ತಮ್ಮ ವಿಷಯದಲ್ಲಿ ನಮ್ಮ ದಳದ ಯಾವನ ದ್ವೇಷವೂ ಇಲ್ಲ. ಬಹುಜನರ ಕಲ್ಯಾಣಕ್ಕಾಗಿ ಬರ್ಜಲಂಡಿನ ಯುವರಾಜರನ್ನು ಲೋಕಾಂತರಕ್ಕೆ ಸಾಗಿಸಬೇಕೆಂದು ಸಂಕಲ್ಪಿಸಿದ್ದೇವೆ."

"ಆ ಯುವರಾಜನು ತಮಗೆ ಅಷ್ಟು ಅಸಹ್ಯನಾಗಿದ್ದಾನೆಯೆ?"

"ಭಯಂಕರ ಅಸಹ್ಯ! ನಿಜ ಹೇಳಬೇಕೆಂದರೆ, ತಾವು ಮುಂದೆ ಬರ್ಜ

ಲಂಡಿನ ಗದ್ದುಗೆಯೇರುವಿರೆಂಬುದನ್ನು ನೆನೆದರೆ ನಮ್ಮ ಮೈಯುರಿಯುತ್ತದೆ.'' ಎಂದ ವಿಲಿಯಮ್.

ಜಾನ್ ಪಿಟರ್ಸ್ ಸಹಾನುಭೂತಿಪೂರ್ವಕವಾಗಿಯೇ ಉತ್ತರವಿತ್ತ: "ಆಹಾ, ತಮ್ಮ ಸ್ಥಿತಿ ಎಷ್ಟು ಕರುಣಾಜನಕ! ಸಿಂಹಾಸನವನ್ನೇರಿದರೆ ನಾನು ರಾಜಮರ್ಯಾದೆಯನ್ನು ಕಾಯ್ದುಕೊಳ್ಳಲಾರೆನೆಂದು ನನಗೂ ಎನಿಸುತ್ತದೆ. ಆದರೆ ಆ ಬಗ್ಗೆ ತಮಗೇಕೆ ಇಷ್ಟು ತಲೆ ನೋವು? ಇಂದಿನ ಪ್ರಯತ್ನವೇ ಮೊದಲನೆಯದಲ್ಲ; ಹಿಂದೆಯೂ ನನ್ನನ್ನು ಕೊಲ್ಲಲು ಕೆಲವು ಪ್ರಯತ್ನಗಳಾಗಿವೆ. ಯಾರು ಯಾರ ಅಭಿಪ್ರಾಯದಿಂದ ಆ ಕೆಲಸಕ್ಕೆ ತೊಡಗಿದರೆಂಬುದನ್ನೂ ನಾನು ಶೋಧಿಸಿದ್ದೇನೆ. ಆದರೆ ತಾವು ನನ್ನ ಕೊಲೆಗಾಗಿ ಇಷ್ಟೊಂದು ಉತ್ಸುಕರಾಗಿರುವುದೇಕೆಂಬುದು ಮಾತ್ರ ಗೊತ್ತಾಗಲಿಲ್ಲ. ಏಕೆಂದರೆ, ತಮ್ಮ ನಾಲ್ವರಲ್ಲಿ ಒಬ್ಬರು ಆಂಗ್ಲರು, ಒಬ್ಬರು ಫ್ರೆಂಚರು, ಒಬ್ಬರು ನನ್ನ ದೇಶದವರು, ಈ ಹೆಣ್ಮಗಳು ಮಾರ್ಕಿಣ್. ಬೇರೆ ಬೇರೆ ದೇಶಗಳ ತಾವು ನನ್ನನ್ನು ಕೊಲ್ಲಲು ಗುಂಪುಕಟ್ಟಿಕೊಂಡಿರುವುದೇಕೆ? ನಾನು ಅರಸಾದರೆ ನಮ್ಮ ರಾಜ್ಯ ರಾಮರಾಜ್ಯವಾಗಲಿ ಇಲ್ಲವೆ ರಸಾತಕ್ಕೇ ಹೋಗಲಿ, ಆದರಿಂದ ತಮಗೆ ಆಗುವುದೇನು, ಹೋಗುವುದೇನು?"

ವಿಲಿಯಮ್ ಮತ್ತೊಂದು ಸಿಗಾರೇಟನ್ನು ಹೊತ್ತಿಸಿ ಮಾತನಾಡಿದ: "ಮಹಾಶಯರೆ ನಾವು ಅಖಿಲ ಮಾನವ ಸಮಾಜದ ಹಿತಾಪೇಕ್ಷಿಗಳು; ನಮಗೆ ಆ ದೇಶ ಈ ದೇಶ ಎಂಬ ವಿಚಾರವಿಲ್ಲ. ತೋಟಿಗನು ಕೈಯೊಳಗೆ ಕತ್ತರಿಯನ್ನು ಹಿಡಿದು ತೋಟದೊಳಗೆಲ್ಲ ತಿರುಗಾಡಿ, ತೋಟದ ಸೊಬಗನ್ನು ಹೆಚ್ಚಿಸುವುದಕ್ಕಾಗಿ ಕೆಲವು ಗಿಡಗಳ ಟೊಂಗೆಗಳನ್ನು, ಕೆಲವು ಗಿಡಗಳ ಎಲೆಗಳನ್ನು ಕತ್ತರಿಸುತ್ತಾನೆ. ಹಾಗೆ ನಾವು ವಿಶ್ವದ ಉದ್ಯಾನದ ಸೌಂದರ್ಯವೃದ್ಧಿಗಾಗಿ—"

ಜಾನ್ ಪಿಟರ್ಸ್ ನಡುವೆಯೆ ಮಾತನಾಡಿದ: "ಯಾರ ಕೊರಳನ್ನು ಕೊಯ್ಯುವಿರಿ, ಯಾರ ತಲೆಯನ್ನು ಹೊಡೆಯುವಿರಿ,— ಸರಿ, ತಮ್ಮ ಉದ್ದೇಶ ಉಚ್ಚವಾದದ್ದು. ಆದರೆ ತಮಗೆ ಬೇಕಾದ್ದೇನೆಂಬುದೇ ಸರಿಯಾಗಿ ಅರ್ಥ

ವಾಗಲೊಲ್ಲದು. ಯಾರೊಡನೆಯೂ ನನ್ನ ವಿರೋಧವಿಲ್ಲ, ಯಾರಿಗೂ ನಾನು ಕೆಡುಕು ಬಗೆಯುವುದಿಲ್ಲ. ನಾನಿನ್ನೂ ದೊರೆತನವನ್ನು ಪಡೆದಿಲ್ಲ ನನ್ನ ಆಳಿಕೆಗೆ ಒಳಪಟ್ಟವರು ಯಾರೂ ಇಲ್ಲ. ಸದ್ಯ ನಮ್ಮ ಕಕ್ಕ ಜರ್ಜಿಲಂಡಿನ ಅರಸು; ಆತ ಅತಿ ಕೆಟ್ಟ ಮನುಷ್ಯ ಎಂಬುದನ್ನು ಒಪ್ಪಿಕೊಂಡೆ. ಇಂತಹ ಸ್ವೇಚ್ಛಾಚಾರೀ ರಾಜನು ಯುರೋಪಿನಲ್ಲಿಯೇ ಮತ್ತೊಬ್ಬನಿರಲಿಕ್ಕಿಲ್ಲ. ಆತನು ಮಾಡಲು ನಾಚುವಂತಹ ಪಾಪವೇ ಇಲ್ಲ. ಪರಿಪರಿಯಿಂದ ಪ್ರಜೆಗಳ ನೆತ್ತರನ್ನು ಹೀರುತ್ತಾನೆ. ಪ್ರಜೆಗಳ ಹಿತದ ಕಡೆಗೆ ಆತನ ಲಕ್ಷ್ಯ ಎಳ್ಳಷ್ಟೂ ಇಲ್ಲ; ಅನ್ಯಾಯವಾಗಿ ಸಂಚಯಿಸಿದ ಆತನ ಧನವು ಆತನ ಉಚ್ಛೃಂಖಲ ವೃತ್ತಿಯಲ್ಲಿಯೆ ಹಾಳಾಗುತ್ತದೆ. ಆತನು ಇಡೀ ಯುರೋಪಕ್ಕೇ ಒಂದು ಕಲಂಕ. ಅವನನ್ನು ಬಿಟ್ಟು ನನ್ನನ್ನು ಕೊಲ್ಲಬೇಕೆಂಬ ಹಟವೇಕೆ, ಹೇಳಬಹುದೆ?"

"ತಾವು ಈ ವಿಷಯವನ್ನು ಪ್ರಶ್ನಿಸಬಹುದು ಆದರೆ ಮರೆಯಬೇಡಿರಿ: ಈ ವಿದ್ಯೆಯಲ್ಲಿ ನಾವು ಅಭ್ಯಾಸಿಗಳು ಮಾತ್ರ; ಮೂಲದಿಂದ ಕಾರ್ಯಾರಂಭ ಮಾಡದೆ ಅಗ್ರದಿಂದ ಆರಂಭಿಸಿದ್ದೇವೆ. ವಿಶೇಷವಾಗಿ, ತಮ್ಮನ್ನು ಛದ್ಮವೇಷದಲ್ಲಿ ವಿದೇಶದಲ್ಲಿ ಸಿಕ್ಕಾಗ ಕೊಲ್ಲಲಿಕ್ಕೆ ಅನುಕೂಲ ಹೆಚ್ಚು. ರಾಜನನ್ನು ಕೊಲ್ಲಲು ಈ ಅನುಕೂಲ್ಯವಿಲ್ಲ" ಎಂದ ವಿಲಿಯಮ್.

ಪಿಟರ್ಸ್ ಪೆನಿಸರಳ ಕಡೆ ನೋಡಿ: "ಬೇಟೆಯಾಡುವುದಕ್ಕೆ ಈ ಯುವತಿ ಬಲೆಯೆಂದು ತೋರುತ್ತದೆ. ಇವರೂ ತರಬೇತಿ ಹೊಂದಿದವರಲ್ಲವೆ?" ಎಂದು ನುಡಿದ.

ಪೆನಿಸರ್ ಚಂಚಲದೃಷ್ಟಿಯಿಂದ ಪಿಟರ್ಸನ ಮೊಗವನ್ನು ನೋಡಿದಳು. ಅವಳ ಮುಖ ಕೆಂಪಾಗಿತ್ತು. ಯಾರೋ ಎದೆಗೆ ಅಲಗಿಸಿಂದಿರಿದಂತೆ ಅವಳಿಗೆನಿಸಿತು.

"ಹೌದು, ಇವರು ಈ ವಿದ್ಯೆಯಲ್ಲಿ ಪೂರಾ ಅಶಿಕ್ಷಿತರು." ವಿಲಿಯಮ್ ಹೇಳಿದ.

"ಆದರೆ ಅಭಿನಯದಲ್ಲಿ ಈ ಶ್ರೀಮತಿ ಒಳ್ಳೇ ನಿಪುಣೆ. ಅದೆಲ್ಲ ಹೋಗಲಿ. ತಾವು ಹೇಳಿರುವುದನ್ನೆಲ್ಲ ಕೇಳಿದೆ; ಇನ್ನು ನಾನು ಹೇಳುವುದನ್ನಷ್ಟು ಕೇಳಿರಿ. ಇಂದು ತಮ್ಮ ಪ್ರಯತ್ನ ಕೈಗೂಡಿದ್ದರೆ, ನಾನು ಈ ಲೋಕದಿಂದ

ಹೊರಟುಹೋಗಿದ್ದರೆ, ಬರ್ಜಿಲಂಡಿನ ಉತ್ತರಾಧಿಕಾರಿ ನಮ್ಮ ಕಕ್ಕನ ತರು-ವಾಯ ಯಾರಾಗುತ್ತಿದ್ದರೆಂಬುದನ್ನು ಬಲ್ಲಿರಾ ?"

ಈಗ ಸೇಂಟ್ ಡಾಲ್ಮ್ ಮಾತನಾಡಿದ: "ಗೊತ್ತಿದೆ; ಕೌಂಟ್ ಎವಿಲ್, ಇಲ್ಲದೆಹೋದರೆ ಡ್ಯೂಕ್ ಲಾಟೋರಿಯಾ."

ಪಿಟರ್ಸ್ ಹೇಳಿದ : "ನಿಜ. ಈ ಇಬ್ಬರು ಸೋದರರನ್ನೂ ನಾನು ಚೆನ್ನಾಗಿ ಬಲ್ಲೆ. ನನಗಿಂತಲೂ ಅವರು ಜಾಣರು; ಎಂತಲೇ ಅವರು ತಮ್ಮ ದುಷ್ಕರ್ಮಗಳನ್ನು ಬಚ್ಚಿಡಬಲ್ಲರು. ಅವರ ಚರಿತ್ರವೇನೂ ನನ್ನ ಚರಿತ್ರಕ್ಕಿಂತ ಉತ್ತಮವಾದುದಲ್ಲ. ನಿಜವೆಂದರೆ, ನನಗಿಂತ ಅವರೇ ಹೆಚ್ಚು ಅಧಮರು."

ಡಾಲ್ಮ್ ನುಡಿದ : "ಇದ್ದರೂ ಇದ್ದೀತು. ಅವರು ಮಹಾ ಪಾಪಿಗಳಾಗಿದ್ದರೂ ತಮ್ಮಂತೆ ನಿರ್ಲಜ್ಜರಲ್ಲ; ಅವರ ದುಷ್ಕೀರ್ತಿ ಸಮಗ್ರ ಯುರೋಪವನ್ನು ದಂಗುಬಡಿಸಿಲ್ಲ."

"ಅವಕ್ಕೇ ಜನರು ಅವರನ್ನು ಸಾಧುಗಳೆಂದು ಭಾವಿಸಿವಂತಿವೆ. ಆದರೆ ಅತ್ಯಾಚಾರದಲ್ಲಿ ನನಗಿಂತ ಅವರು ಕಡಮೆಯಲ್ಲ. ಹೀಗಿದ್ದೂ ತಾವು ನನ್ನನ್ನು ಕೊಲ್ಲಲು ಪ್ರಯತ್ನಿಸುವುದು ಸುವಿಚಾರದ ಚಿಹ್ನವಲ್ಲ. ನಾನಿಲ್ಲದಾದಮೇಲೂ ಬರ್ಜಿಲಂಡಿನ ಪ್ರಜೆಗಳ ಕಷ್ಟತಾಪಗಳು ಹಿಂಗಲಾರವೆಂದು ಖಂಡಿತ ಹೇಳಬಲ್ಲೆ."

ವಿಲಿಯಮ್ ಉತ್ತರವಿತ್ತ : "ತಮ್ಮ ಕೊಲೆಯಾದರೆ ತಮ್ಮ ಸೋದರರು ಮುಂದೆ ಎಚ್ಚರಾಗುವರು. ಅವರ ಚೆಲ್ಲಾಟ ಕಡಿಮೆಯಾಗುವುದು."

ಪಿಟರ್ಸ್ ಗೋಣುಹಾಕುತ್ತ ಹೇಳಿದ : "ನಮ್ಮ ರಾಜವಂಶ ಅದೆಷ್ಟು ಅಧಃಪತನ ಹೊಂದಿದೆಯೆಂಬುದು ತಮಗೆ ಗೊತ್ತಿಲ್ಲ; ಎಂತಲೇ ಹೀಗೆನ್ನುವಿರಿ. ನಮ್ಮ ದೇಶದ ಹಿತವನ್ನು ಸಾಧಿಸುವುದೇ ತಮ್ಮ ಧ್ಯೇಯವಾಗಿದ್ದರೆ, ಸರಿಯಾದ ಹಾದಿಯನ್ನು ಬಿಟ್ಟು ಅಡ್ಡದಾರಿಯನ್ನು ಏಕೆ ತುಳಿಯುತ್ತಿರುವಿರೋ ನಾನರಿಯೆ."

ಪಿಟರ್ಸನ ಕೊಲೆಗೆ ಉಜ್ಜುಗಿಸಿದ ತರುಣನು ಇದುವರೆಗೂ ಮೌನದಿಂದಿದ್ದ. ಈಗ ಅವನೆಂದ: "ಸರಿಯಾದ ದಾರಿ ಯಾವುದು ?"

"ಹಿಂದಿನ ಇತಿಹಾಸವನ್ನು ನೋಡಿದರೆ ಗೊತ್ತಾಗುತ್ತದೆ. ಸಾಹಸಿಗಳೂ ವೀರರೂ ಆತ್ಮರಕ್ಷಣೆಯಲ್ಲಿ ದಕ್ಷರೂ ಆದ ಪ್ರಜೆಗಳು ತಮ್ಮ ದೇಶದ ರಾಜವಂಶ ಅನಾಚಾರಿಯಾದಾಗ ಅಧಃಪತಿತವಾದಾಗ ಏನು ಮಾಡುವರು?"

"ಕ್ರಾಂತಿಯನ್ನೆಬ್ಬಿಸುವರು." ತರುಣನೆಂದ.

"ನೀವೂ ನಮ್ಮ ವಿರುದ್ಧ ಪ್ರಜೆಗಳನ್ನು ವಿಪ್ಲವಕ್ಕೆ ಹುರಿಗೊಳಿಸಿ ಎತ್ತಿ ಕಟ್ಟಬಾರದೇಕೆ ?"

"ಹಾಗೆ ಮಾಡಿದರೆ ಜರ್ಮನಿ ಇದರಲ್ಲಿ ಕೈಹಾಕದೆ ಬಿಡದು. ಜರ್ಮನಿಯ ಸಮ್ರಾಟ್ ತನ್ನ ರಾಜ್ಯದ ನೆರೆಹೊರೆಯಲ್ಲಿ ಪ್ರಜಾತಂತ್ರವನ್ನು ತಲೆಯೆತ್ತಗೊಡುವುದಿಲ್ಲ" ತರುಣನು ಉತ್ತರವಿತ್ತ.

"ನಾನು ಬರ್ಜಿಲಂಡಿನ ಯುವರಾಜನಾಗಿರದಿದ್ದರೆ, ರಾಜವಿಪ್ಲವದ ಗುಟ್ಟುಗಳನ್ನು ನಿಮಗೆ ತಿಳಿಸಿಕೊಡುತ್ತಿದ್ದೆ."

ವಿಲಿಯಂ ಹೇಳಿದ : "ತಮ್ಮ ಮಾತುಗಳನ್ನು ಕೇಳಿ, ತಮ್ಮ ಬಗ್ಗೆ ನಾವು ಮಾಡಿಕೊಂಡ ಕಲ್ಪನೆ ಭ್ರಾಮಕವೆಂದೆನಿಸುತ್ತದೆ."

"ತಮ್ಮ ಮಾತಿನ ಇಂಗಿತ ನಿಂದೆಯೋ ಪ್ರಶಂಸೆಯೋ ನಾನರಿಯೆ. ಆದರೂ ನಾನು ಮೊದಲು ಭಾವಿಸಿಕೊಂಡಂತೆ ತಾವು ನರರಕ್ತ ಪಿಪಾಸು ರಾಕ್ಷಸರಲ್ಲವೆಂದು ತಮ್ಮ ಮಾತುಗಳನ್ನು ಕೇಳಿ ಎನಿಸುತ್ತದೆ. ಹಾಗೆಯೇ ತಾವು ಸಾಮಾನ್ಯ ಮನುಷ್ಯರಲ್ಲವೆಂದೂ ಎನಿಸುವುದಿಲ್ಲ. ತಮ್ಮ ಉದ್ದೇಶವೇನೆಂದು ನನಗಿನ್ನೂ ತಿಳಿಯಲಿಲ್ಲ."

"ನಾವಂತೂ ನಮ್ಮ ಮನದ ಮಾತನ್ನು ಸರಳವಾಗಿ ಹೇಳಿಬಿಟ್ಟಿ-ದ್ದೇವೆ" ವಿಲಿಯಮ್ ನುಡಿದ.

"ಅದು ಕೆಲಮಟ್ಟಿಗೆ ಸತ್ಯ ; ನಾನೊಪ್ಪಿದೆ. ಆದರೆ ತಾವು ಯಾರು? ತಮ್ಮ ಇಚ್ಛೆ ಏನು ? ತಾವು ಯಾವುದೊಂದು ಗುಪ್ತಸಮಿತಿಯ ಸದಸ್ಯರೋ ಇಲ್ಲ ಹುಚ್ಚರೋ ?" ಎಂದು ಕೇಳಿದ ಪಿಟರ್ಸ್.

ಕ್ಷಣಹೊತ್ತು ನೀರವವಾಗಿದ್ದು ವಿಲಿಯಮ್ ಮಾತನಾಡಿದ : "ಯುವರಾಜ, ನಾವು ತಿಳಿದುಕೊಂಡಂತಹ ಮನುಷ್ಯರು ತಾವು ಖಂಡಿತ ಅಲ್ಲ. ತಾವೊಕ್ಕೆ ಬುದ್ಧಿಶಾಲಿಗಳೂ ವಿನೋದ ಪ್ರಿಯರೂ ಆಗಿದ್ದೀರಿ. ಅತ್ಯಂತ ಭಯಾನಕ ವಿಷಯವನ್ನು ಅನಾಯಾಸವಾಗಿ ರಹಸ್ಯಮಯ ಪ್ರಹಸನವಾಗಿ ಮಾರ್ಪಡಿಸುವ ಜಾಣ್ಮೆ ತಮ್ಮಲ್ಲಿದೆ. ಆದರೆ ಈಗ ವಿನೋದಕ್ಕೆ ಅವಕಾಶವಿಲ್ಲ. ತಾವು ನಮ್ಮನ್ನು ಏತಕ್ಕಾಗಿ ಕಾಣಲು ಬಂದಿರಿ ? ತಮ್ಮ ಕೊಲೆಯಾಗುವುದೆಂದೇ ನಾವು ತಿಳಿದಿದ್ದೆವು. ತಮ್ಮ ಅದೃಷ್ಟ ಚೆನ್ನಾಗಿತ್ತೆಂದೇ

ನಮ್ಮ ಪ್ರಥಮ ಪ್ರಯತ್ನ ವ್ಯರ್ಥವಾಯಿತು. ಆದರೆ ಒಂದುದಿನ ತಮ್ಮ ಕೊಲೆಯಾಗುವುದು ನಿಶ್ಚಯ. ಈ ಅವಸ್ಥೆಯಲ್ಲಿ ತಮ್ಮ ಆತ್ಮಸಂಮಾನಕ್ಕಾಗಿ ಏನಾದರೂ ಹೇಳುವುದಿದ್ದರೆ, ನಮಗೆ ಏನನ್ನಾದರೂ ತಿಳಿಸಬೇಕೆಂದಿದ್ದಗೆ ಹೇಳಿರಿ."

"ನನ್ನೊಂದಿಗೆ ಒಪ್ಪಂದ ಮಾಡಿಕೊಳ್ಳುವಿರಾ ?"

"ಎಂತಹ ಒಪ್ಪಂದ ?"

"ಇನ್ನೊಂದು ಆರುತಿಂಗಳ ಮಟ್ಟಿಗೆ ನಾನು ನಿರಾಪದವಾಗಿ ಇರಬೇಕೆನ್ನುತ್ತೇನೆ. ಶತ್ರುಗಳು ನನ್ನನ್ನು ಕೊಲ್ಲುವುದಕ್ಕಾಗಿ ಹೊಂಚುಹಾಕಿ ಹಗಲಿರುಳು ಅನುಸರಿಸುತ್ತಿದ್ದಾರೆ; ಇದು ನನಗೆ ಅಸಹ್ಯವಾಗಿದೆ. ಆರು ತಿಂಗಳು ಅವಕಾಶ ಸಿಕ್ಕರೆ ಮುಂದೆ ನಾನೆಂದೂ ತಮ್ಮನ್ನು ನಿರಸ್ತಗೊಳಿಸುವುದಿಲ್ಲ."

"ಸರಿ, ತಮಗೆ ಆರುತಿಂಗಳು ಅವಕಾಶ ಕೊಟ್ಟೆ. ಅಷ್ಟರೊಳಗೆ ಯಾರೂ ತಮ್ಮ ಕೊಲೆಗೆ ಪ್ರಯತ್ನಿಸುವುದಿಲ್ಲವೆಂದು ಭರವಸೆ ಕೊಡುತ್ತೇನೆ. ಆದರೊಂದು ಮಾತು: ತಮ್ಮ ಕಕ್ಕ ಈ ಆರು ತಿಂಗಳೊಳಗೇ ತೀರಿಕೊಂಡರೆ ಈ ಒಪ್ಪಂದದ ಬಂಧನ ಉಳಿಯಲಾರದು. ಅರ್ಥಾತ್ ತಮ್ಮನ್ನು ಬರ್ಲಿಂಗ್ ಸಿಂಹಾಸನವನ್ನು ನಾವು ಏರಗೊಡಲಾರೆವು." ಎಂದು ವಿಲಿಯಮ್ ಹೇಳಿದ.

"ಹಾಗೇ ಆಗಲಿ; ಈ ಕರಾರು ನನಗೆ ಸಮ್ಮತ. ಈ ಅವಧಿಯಲ್ಲಿ ಯಾವ ಗುಪ್ತಘಾತಕನೂ ನನ್ನನ್ನು ಬೆಂಬತ್ತುವುದಿಲ್ಲವೆಂದು ಆಶಿಸುತ್ತೇನೆ. ನಾನೂ ನಿಮ್ಮ ಮೇಲೆ ಕೈಯೆತ್ತುವುದಿಲ್ಲ. ಆರುತಿಂಗಳಮೇಲೆ ಬೇಕಾದರೆ ನನ್ನೊಡನೆ ಹೋರಾಟಕ್ಕೆ ನಿಲ್ಲಬಹುದು."

"ಅದನ್ನಂತೂ ಮಾಡಲೇಬೇಕಾಗುವುದು" ಗಂಭೀರಸ್ವರದಲ್ಲಿ ವಿಲಿಯಂ ಹೇಳಿದ.

ಬಳಿಕ ಹೊರಡಲು ಏಳುತ್ತ ಪಿಟರ್ಸ್ ಪೆನಿಸರಳ ಕಡೆ ನೋಡಿದ. ಅವಳು ಅನ್ಯಮನಸ್ಕಳಾಗಿ ವಿಷಣ್ಣಳಾಗಿರುವಳೆಂದು ತೋರಿತು. ಈಗೊಂದು ಗಂಟೆಯ ಮೊದಲು ಅವನೊಡನೆ ನಗುತ್ತ ಕೆಲೆಯುತ್ತ ಮಾತನಾಡಿದವಳು, ಸವಿಮಾತುಗಳಿಂದ ಅವನ ಮನವನ್ನು ತಣಿಸಿದವಳು, ಅವನ ಸುಖ ದುಃಖ

ಗಳಲ್ಲಿ ಸಹಾನುಭೂತಿ ತೋರಿಸಿದ್ದವಳು ಈಗ ಹೀಗೆಯೆ! ಅವನ ಜೀವನ ವನ್ನು ಕುತ್ತಕ್ಕೀಡುಮಾಡುವ ಸಂಚಿನಲ್ಲಿ ಈಕೆಯೂ ಸೇರಿರುವಳೆ? -ಒಮ್ಮೆಲೆ ಪಿಟರ್ಸ್‌ನ ಮೋರೆ ಕ್ರೋಧದಿಂದ,ಉತ್ತೇಜನದಿಂದ ಕೆಂಪೇರಿತು; ಕಣ್ಣುಗಳು ಹೊಳೆದವು; ಮುಖದಲ್ಲಿ ಕಠೋರತೆ ಮೂಡಿತು. ಅವನು ಕ್ರೋಧದಿಂದ ಗರ್ಜಿಸಿಬಿಟ್ಟ: "ಮನುಷ್ಯನ ಅನೇಕ ಮಹತ್‌ಸಂಕಲ್ಪಗಳು ಅವನ ಬುದ್ಧಿ ದೋಷದಿಂದ ವ್ಯರ್ಥವಾಗಿ ಬಿಡುವವು. ಶತ್ರುಗಳನ್ನು ಕೊಲೆಮಾಡುವ ಸಂಚಿನಿಂದ ಅಥವಾ ಬಾಂಬಿನ ಸಹಾಯದಿಂದ ದೇಶೋದ್ಧಾರವಾಗುವುದೆಂದು ಎಣಿಸುವವರಿಗೆ ಬುದ್ಧಿಯೇ ಇಲ್ಲ!"

೮

ಬರ್ಜಿಲಂಡ್ ದೊರೆ ತನ್ನ ಅರಮನೆಯ ವಿಶಾಲವಾದ ಪುಸ್ತಕಾಲಯದಲ್ಲಿ ಸಿಗಾರೇಟನ್ನು ಸೇದುತ್ತ ಕಿಡಿಕಿಯಲ್ಲಿ ನೋಡುತ್ತ ನಿಂತಿದ್ದ. ಅವನು ಮುದುಕ; ಗಡ್ಡ ಮೀಸೆ ಪೂರಾ ನರೆತಿವೆ; ಬಿಳಿತಲೆಯಲ್ಲಿ ಯತ್ನಪೂರ್ವಕವಾಗಿ ರಚಿತವಾದ ಬೈತಲೆ; ಹಣೆ ಹರವಾದುದು. ದೇಹ ಸುದೃಢ, ನೀರೋಗಿ; ಅವನೊಬ್ಬ ವೀರಪುರುಷ. ಕವಚಧಾರಿಯಾದ ಪೇದೆ ಬಂದು, 'ಯುವರಾಜರು ಮಹಾರಾಜರನ್ನು ಕಾಣಬೇಕೆನ್ನುತ್ತಾರೆ' ಎಂದು ತಿಳಿಸಿದ. ರಾಜ ಅದಕ್ಕೆ ತನ್ನ ಅನುಮತಿಯನ್ನು ಸೂಚಿಸಿದ. ಪೇದೆ ಹೊರಟುಹೋದ. ಸ್ವಲ್ಪ ಹೊತ್ತಿನಲ್ಲಿ ಜಾನ್ ಪಿಟರ್ಸ್ ಒಳಗೆ ಬಂದು ಕಕ್ಕನಿಗೆ ಅಭಿವಂದಿಸಿ ಕೈಕುಲುಕಿ ಕೇಳಿದ: "ತಮ್ಮ ಮೈಯಲ್ಲಿ ನೆಟ್ಟಗಿದೆಯಷ್ಟೆ?"

ಕಕ್ಕನು ಹುಬ್ಬನ್ನು ಮುದುಡಿಸಿ ಬೇಸರದಿಂದ ಮಾತನಾಡಿದ: "ಹಾಂ, ನೆಟ್ಟಗೇ ಇದ್ದೇನೆ. ಆದರೆ ನಿನ್ನ ಬಗ್ಗೆ ಕೇಳಿದ ಕೀರ್ತಿಯೆಲ್ಲ ನಿಜವೇ ಇದ್ದರೆ, ನೀನು ಮುಖ ತೋರಿಸುವುದಕ್ಕಿಂತ ಸಾಯುವುದೇ ಇಷ್ಟ."

ಪಿಟರ್ಸ್ ಈ ತಿರಸ್ಕಾರದಿಂದ ಕೊಂಚವೂ ವಿಚಲಿತನಾಗಲಿಲ್ಲ. ಅಲಕ್ಷ್ಯದಿಂದ ಉತ್ತರವಿತ್ತ: "ಪತ್ರಿಕೆಗಳಲ್ಲಿ ಬಂದ ಸುದ್ದಿಗಳನ್ನು ಬಾಯಿಬಲಿನ ಉಕ್ತಿಗಳಂತೆ ಸತ್ಯವೆಂದೇ ತಿಳಿಯುತ್ತೀರಿ, ನೀವು; ಇದು ಅನ್ಯಾಯ. ಪತ್ರಿಕೆಗಳಲ್ಲಿ ಏನು ಬರೆಯುತ್ತಾರೊ ಏನು ಬಿಡುತ್ತಾರೊ ನಾನೆಂದೂ ನೋಡುವುದಿಲ್ಲ."

“ನೋಡದಿರುವುದೇ ತಪ್ಪು. ನೀನೊಂದಿಷ್ಟು ಎಚ್ಚರದಿಂದ ವರ್ತಿಸುವುದು ಉಚಿತ. ನಿನ್ನ ನಡತೆ ಬಹಳ ಕೆಟ್ಟಿದೆ. ನಾಲ್ಕೂ ಕಡೆ ನಿನ್ನ ಕಲಂಕದ ವಾರ್ತಾವಾಹಿನಿ ಹರಿದಿದೆ. ಶ್ರೀಮತಿ ಕಾರಾನೊಡನೆ ನೀನು ವಿಹರಿಸಿದ್ದು, ಡಚೆಸಳ ಹೀರಕಾಲಂಕಾರಗಳ ವಿಷಯದಲ್ಲಿ ನಡೆದ ಕಾಂಡ ಎಲ್ಲವೂ ನನಗೆ ಗೊತ್ತಿದೆ. ಈ ಕೀರ್ತಿಯನ್ನು ಮುಖಕ್ಕೆ ಬಳಿದುಕೊಂಡೂ ನನಗೆ ಮೋರೆ ತೋರಿಸಲು ಹೇಗೆ ಬಂದೆ?”

“ಪತ್ರಿಕೆಗಳಲ್ಲಿ ಇವೆಲ್ಲ ಪ್ರಕಟವಾಗಿವೆಯೆ? ಪತ್ರಿಕಾಕರ್ತರು ಯಾವ ವಿಷಯವನ್ನೂ ಚರ್ಚಿಸದೆ ಬಿಟ್ಟಿಪ್ಪ ಅಲ್ಲವೆಂದು ತೋರುತ್ತದೆ. ಎಲ್ಲ ಅನಧಿಕಾರ ಚರ್ಚೆಗಳೂ ಅವರಿಗೆ ಬೇಕು!”

ಅರಮನೆಯ ಆಕಡೆ ರಾಜಬೀದಿ, ಅದರ ಪಕ್ಕದಲ್ಲಿ ವಿಶಾಲವಾದ ಉಪವನ. ಅಲ್ಲಿ ಬಹುಜನರು ನೆರೆದಿದ್ದರು; ಬೀದಿಯಲ್ಲಿಯೂ ದಟ್ಟಣೆಯಿತ್ತು. ಅವರ ಕಡೆ ಬೆರಳು ತೋರಿಸಿ ಅರಸನೆಂದ: “ಆ ಜನರೆಲ್ಲ ನಮ್ಮ ಪ್ರಜೆಗಳು. ಒಂದು ದಿನ ನೀನವರ ಅರಸಾಗುವೆ. ಈಗ ಹತ್ತು ವರ್ಷಗಳ ಹಿಂದೆ ನಮ್ಮ ರಾಜ್ಯದಲ್ಲಿ ಯಾರ ಹೃದಯದಲ್ಲಿಯೂ ಸಾಧಾರಣ ತಂತ್ರದ ವಾಸನೆ ಕೂಡ ಹುಟ್ಟಿರಲಿಲ್ಲ. ಆದರಿಂದು ಇಲ್ಲಿ ಸೇರಿದವರಲ್ಲಿ ಕನಿಷ್ಠ ಮೂರರಲ್ಲೊಂದು ಪಾಲು ಜನರ ಎದೆಯಲ್ಲಾದರೂ ರಾಜವಿದ್ವೇಷ ತುಂಬಿದೆ, ಬಲ್ಲೆಯಾ?”

ಯುವರಾಜನು ಕುತೂಹಲ ದೃಷ್ಟಿಯಿಂದ ಬೀದಿಯ ಕಡೆ ನೋಡಿದ. “ಆದರೆ ಈ ಜನರು ತಪ್ಪುಗಾರರೆಂದು ನನಗೆ ತೋರುವುದಿಲ್ಲ. ಯುವರಾಜನಾಗಿರದಿದ್ದರೆ ನಾನು ಅವರ ದಳದಲ್ಲಿ ಸೇರುತ್ತಿದ್ದೆ.” ಎಂದ.

ರಾಜನು ಹುಬ್ಬುಗಂಟಿಕ್ಕಿದ. “ನೀನಿದನ್ನು ನಗೆಚಾಟಿಕೆಯ ಮಾತೆಂದು ಬಗೆದೆಯಾ? ನಮ್ಮ ಕಣ್ಣೆದುರಿಗೇ ಪ್ರಜೆಗಳ ಶಕ್ತಿ ಎಷ್ಟು ಬೆಳೆಯುತ್ತಿದೆ, ಕಾಣುವುದಿಲ್ಲವೆ? ಇವರು ನಮ್ಮನ್ನೊಂದು ದಿನ ಇಳಿಸಿಬಿಡುವರು. ದೇಶದಲ್ಲಿ ಈ ವಿಷವೃಕ್ಷದ ಬೇರುಗಳು ಬಹಳ ದೂರದವರೆಗೆ ಇಳಿದಿವೆ. ರಾಜತಂತ್ರದ ವಿರುದ್ಧ ವ್ಯವಸ್ಥಿತವಾದ ಸಂಚು ನಡೆದಿರುವಂತೆ ನನಗೆ ಸಂದೇಹವುಂಟಾಗುತ್ತಿದೆ. ಪೋಲಿಸ್ ದಳಾಧ್ಯಕ್ಷ ಬರ್ನಾರ್ಡ್ ಹೆಚ್ಚಿಗೇನನ್ನೂ ಹೇಳು

ವುದಿಲ್ಲ ನಿಜ; ಆದರೆ ಅವರ ಭಾವಭಂಗಿಯನ್ನು ನೋಡಿದರೆ ಅವರು ಅತ್ಯಂತ ಉತ್ಕಂಠಿತರಾಗಿರುವಂತೆ ಕಾಣುತ್ತದೆ." ಎಂದ ರಾಜ.

" ಉತ್ಕಂಠಿತರಾಗಿ ಮಾಡುವುದೇನು ? ಕಾಣದ ಬರೆಹವನ್ನು ಯಾರಿಂದಾದರೂ ಅಳಿಸಬಲ್ಲರೆ ? ಅದೃಷ್ಟದಲ್ಲಿದ್ದದ್ದು ಆಗಿಯೇ ತೀರುವುದು." ಎಂದ ಯುವರಾಜ.

ಈ ಉತ್ತರದಿಂದ ರಾಜ ಉತ್ತೇಜಿತನಾದ. " ತಿಳಿಗೆಟ್ಟವರಂತೆ ಮಾತನಾಡುತ್ತೀಯಲ್ಲ ! ನಾನು ನಿನ್ನನ್ನು ಕರೆದದ್ದೇಕೆಂದು ಗೊತ್ತೆ ? ಪ್ರಜೆಗಳು ಇಷ್ಟೊಂದು ಉಚ್ಛೃಂಖಲರಾಗುವುದಕ್ಕೆ ನೀನೇ ಕಾರಣ. ಇದನ್ನು ಹೇಳಲೆಂದೇ ನಿನ್ನನ್ನು ಕರೆಸಿದ್ದು."

' ಅದು ಹೇಗೆ ?" ಕಕ್ಕನನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತ ಯುವರಾಜ ಕೇಳಿದ.

" ನಿನ್ನ ಹೊರತು ಬೇರೆ ಯಾರು ಕಾರಣ ? ನಿನ್ನ ದುರಾಚಾರವನ್ನೇ ಕುರಿತು ನಾಡಜನರೆಲ್ಲ ಹಗಲಿರುಳೂ ಚರ್ಚಿಸುತ್ತಾರೆ ಅವರೆಲ್ಲರೂ ನಿನ್ನ ಮೇಲೆ ವಿಷ ಕಾರುತ್ತಿದ್ದಾರೆ. ಒಟ್ಟಾರೆ ರಾಜವಂಶದ ಬಗ್ಗೆಯೇ ಜನರಲ್ಲಿ ತಿರಸ್ಕಾರವುಂಟಾಗಿದೆ ; ಅದಕ್ಕೆ ಮೂಲಕಾರಣನೇ ನೀನು. ನಿನ್ನ ಉಚ್ಛೃಂಖಲವೃತ್ತಿಯ ಸಮಾಚಾರ ಕೂಸುಕುನ್ನಿಗೂ ಗೊತ್ತಾಗಿದೆ ನಿನಗೆ ಎಷ್ಟು ಜನ ಉಪಪತ್ನಿಯರುಂಟೆಂಬುದನ್ನು ಕೂಡ ಅವರು ಹೇಳುತ್ತಾರೆ ಯಾವ ದೇಶಕ್ಕೇ ಹೋಗಲಿ, ಯಾವಾಗಲೇ ಹೋಗಲಿ, ಯಾವಾಗಲೂ ನೀನು ಹೆಂಗುಸರೊಡನೆ ಕಾಮಲೋಲನಾಗಿರುತ್ತೀ ; ಅದೆಲ್ಲವೂ ಅವರಿಗೆ ತಿಳಿಯುತ್ತಿದೆ. ನಿನ್ನ ಈ ಹೇಯಪ್ರವೃತ್ತಿಯನ್ನು ತಣಿಸಿಕೊಳ್ಳುವುದಕ್ಕೇ ತಾವು ತೆರಿಗೆ ಸುಂಕ ಕೊಡಬೇಕೇ ಎಂದವರು ಆಡಿಕೊಳ್ಳುತ್ತಿದ್ದಾರೆ." ಎಂದು ರಾಜ ಧಟ್ಟಿಸಿ ನುಡಿದ.

ಆದಕ್ಕೆ ಪಿಟರ್ಸ್ ಮೆಲ್ಲಗೆ ಹೇಳಿದ : " ಯಾರಿಗೆ ಯಾತರಲ್ಲಿ ಸುಖವೋ ಅವರು ಅದನ್ನೇ ಮಾಡುವರು. ಸ್ಪಷ್ಟವಾಗಿ ಮಾತನಾಡುವುದಾದರೆ ಕಕ್ಕಾ, ತಾವಾದರೂ ಜಿತೇಂದ್ರಿಯ ತಪಸ್ವಿಗಳೇ ಎಂದು ಕೇಳಬೇಕಾಗುತ್ತದೆ."

ರಾಜನು ಅಧೀರನಾದ. "ಅಲ್ಲ; ಜಿತೇಂದ್ರಿಯ ತಪಸ್ವಿ ನಾನಲ್ಲ ನಿಜ. ಆದರೆ ನಿನ್ನಂತೆ ಕ್ಷಣಭಂಗುರವಾಗಿ ಅನಾಚಾರ ಮಾಡುತ್ತ ಹೊರಟಿಲ್ಲ. ನನ್ನ ಚಾರಿತ್ರ್ಯದಲ್ಲಿಯ ದೌರ್ಬಲ್ಯವನ್ನು ಡೊಳ್ಳುಹೊಡೆದು ಸಾರುವುದಿಲ್ಲ. ತಾಯಿನಾಡಿನಲ್ಲಿದ್ದಷ್ಟು ದಿನ ನೀನು ಕೆಲಮಟ್ಟಿಗೆ ಸದ್ಗೃಹಸ್ಥರಂತೆ ಇರುತ್ತೀ. ಹೊರಗೆ ಕಾಲಿಟ್ಟೊಡನೆ ನಿನ್ನ ರಕ್ಕಸತನ ಜಾಗ್ರತವಾಗುತ್ತದೆ ನಿನ್ನ ತಲೆ ತಾಳ-ಮೇಳ ತಪ್ಪುತ್ತದೆ. ನಿನಗೆಷ್ಟೋ ಹೇಳಿದೆ, ಫಲ ದೊರೆಯಲಿಲ್ಲ; ಆದುದರಿಂದ ಈಗ ಮತ್ತೆ ಕರೆದಿದ್ದೇನೆ. ಒಂದು ವಿಷಯ ನೀನು ಮರೆಯಬೇಡ. ಈ ದೇಶದ ಹಲಕೆಲವರು, ಅಸ್ಥಿರಚಿತ್ತನಾದ ಕಾಮುಕ ರಾಜನ ಶಾಸನಕ್ಕೊಳಗಾಗಿ ಇರಕೂಡದೆಂದು ಒಮ್ಮತದಿಂದ ನಿರ್ಣಯಿಸಿದ್ದಾರೆ. ನೀನು ನಿನ್ನ ನಡತೆಯನ್ನು ತಿದ್ದಿಕೊಳ್ಳದಿದ್ದರೆ ಪ್ರಜಾವಿದ್ರೋಹವು ಅನಿವಾರ್ಯ." ಎಂದು ಉಪದೇಶಿಸಿದ.

"ಹಾಗೆ ತಮ್ಮ ವಿಶ್ವಾಸವೆ? ಜನಸಾಮಾನ್ಯರ ಕಣ್ಣಿಗೆ ನಾನು ನಂಜಾಗಿದ್ದೇನೆಂಬುದನ್ನೇನೋ ಒಪ್ಪುವೆ. ಆದರೆ ಅದರ ಫಲವಾಗಿ ಬಂಡೇಳುವುದೆಂದು ನನಗೆನಿಸುವುದಿಲ್ಲ. ಅದು ಅಂತಿಂತಹರಿಂದಾಗುವ ಕೆಲಸವಲ್ಲ, ಅದಕ್ಕೆ ಪ್ರತಿಭಾವಂತರು ಬೇಕು."

"ಕೆಲಸಕ್ಕೆ ತಡೆಯುಂಟಾದರೆ ಪ್ರತಿಭೆಯ ಅವಶ್ಯಕತೆಯಿರುವುದಿಲ್ಲ. ಕಾರ್ಯಕ್ಷೇತ್ರದಲ್ಲಿ ಯೋಗ್ಯ ಮನುಷ್ಯರ ಅಭಾವವಿರುವುದಿಲ್ಲ. ಈಗ ನೀನೊಂದು ಕೆಲಸ ಮಾಡಿದರೆ, ಎಲ್ಲ ನಿಟ್ಟುಗಳಿಂದಲೂ ರಕ್ಷಣೆಯಾದೀತು"

"ಏನು?" ಆತುರದಿಂದ ಪಿಟರ್ಸ್ ಕೇಳಿದ.

"ಮದುವೆ ಮಾಡಿಕೋ."

"ತಾವು ವಧುವನ್ನು ಗೊತ್ತುಮಾಡಿದ್ದೀರೇನೋ ಅಲ್ಲವೆ? ಯಾರವರು? ಹಾರ್ಡ್‌ಮ್ಯಾನರ ಮಗಳಿರಬೇಕು, ಅಲ್ಲವೆ? ಆದರೆ ನೋಡಿ, ಆತನೇ ವಿದ್ರೋಹೀ ದಳದ ನಾಯಕ. ಆತನ ಮಗಳನ್ನು ಮದುವೆಯಾದರೆ ಪ್ರಜೆಗಳು ಹಿಡಿತದಲ್ಲಿ ಉಳಿದಾರು." ಪಿಟರ್ಸ್ ನಗೆಯೊಡನೆ ಮಾತನಾಡಿದ.

"ಹುಚ್ಚರ ಹಾಗೆ ಮಾತನಾಡುತ್ತೀಯಲ್ಲ ನೀನು. ಜಾನ್, ಜರ್ಮನಿಯ ಇಲ್ಲವೆ ಇಙ್ಲಂಡಿನ ರಾಜಕನ್ನೆಯನ್ನು ಮಾಡಿಕೊಳ್ಳಬೇಕು."

ಈ ಮಾತಿಗೆ ಅಡ್ಡಡ್ಡ ತಲೆಹಾಕಿ ಪಿಟರ್ಸ್ ಪ್ರತಿವಾದಿಸಿದ: “ ಅಗದ ಮಾತನ್ನೇ ಹೇಳುತ್ತಿರುವಿರಿ ನೀವು. ಸ್ತ್ರೀಜಾತಿಯ ಬಗ್ಗೆ ತಮಗಿದ್ದ ಜ್ಞಾನವನ್ನು ಕಂಡು ನನಗೆ ಆಶ್ಚರ್ಯವಾಗುತ್ತಿದೆ. ವಿದ್ರೋಹಿಗಳಿಂದ ಸಿಂಹಾಸನವನ್ನು ಉಳಿಸಿಕೊಳ್ಳುವುದಕ್ಕಾಗಿ, ನಾನು ಬೇಕೆಂತ ಕೊರಳೊಳಗೆ ಗುದ್ದಿಯನ್ನು ಕಟ್ಟಿಕೊಳ್ಳಬೇಕೆ? ”

ದೊರೆಗೆ ಕೋಪಬಂದಿತು. ಅವನೆಂದ: “ ಜಾನ್, ಮೂರ್ಖರಂತೆ ಮಾತನಾಡುತ್ತೀಯಲ್ಲ! ನನ್ನ ಮಾತು ಮೀರಬೇಡ.”

“ ಒಳ್ಳೇದು, ಆದರೆ ರಾಜಕುಮಾರಿ ಇವಳು ಮಾತ್ರ ನನಗೆ ಬೇಡ.” ಎಂದ ಪಿಟರ್ಸ್.

ರಾಜನು ನಕ್ಕು ನುಡಿದ: “ ನಾನೆಲ್ಲಿ ಹಾಗೆ ಹೇಳಿದೆ? ಶೀಘ್ರದಲ್ಲಿ ಈ ವಿಷಯವಾಗಿ ಬರ್ನಾರ್ಡರೊಡನೆ ಯೋಚಿಸುತ್ತೇನೆ. ಮದುವೆಯಾಗುವ ವರೆಗೂ ನೀನು ಮಾತ್ರ ಸಾವಧಾನದಿಂದಿರಬೇಕು. ಛದ್ಮವೇಷದಿಂದ ಎಲ್ಲಿಯೂ ಹೋಗಬಾರದು, ವೈಗಾವಲಿಲ್ಲದೆ ಊರೊಳಗೆ ತಿರುಗಬಾರದು. ನೀನು ಯುವರಾಜ; ಹೀಗೆ ಮಾಡುವುದು ನಿನ್ನ ಗೌರವಕ್ಕೆ ಕುಂದು, ಜೀವಕ್ಕೆ ಗಂಡಾಂತರ.”

“ ಇನ್ನೂ ಏನಾದರೂ ಹೇಳುವುದುಂಟೆ? ”

“ ಹೇಳುವುದೇನೋ ಬಹಳವಿತ್ತು. ಎಲ್ಲವೂ ನೆನಪಾಗಲೊಲ್ಲದು. ನನಗಿಂದು ಬಹಳ ಆಯಾಸವಾಗಿದೆ.”

“ ಅಸ್ವಾಸ್ಥ್ಯವೇನೂ ಇಲ್ಲವಷ್ಟೆ? ”

“ ಇಲ್ಲಪ್ಪ. ಆ ಬಗ್ಗೆ ನಿನಗೆ ಚಿಂತೆ ಬೇಡ.”

“ ಚಿಂತೆ ಇದ್ದದ್ದೆ. ನನ್ನ ಮಂಗಲ ಅಮಂಗಲ ಎಲ್ಲ ತಮ್ಮ ಶರೀರ ಸ್ವಾಸ್ಥ್ಯ ವನ್ನು ಅವಲಂಬಿಸಿವೆ.”

“ ಹೇಗೆ? ”

“ ಕಳೆದ ವಾರ ಒಬ್ಬನು ನನ್ನನ್ನು ಕೊಲ್ಲುವುದಕ್ಕೆ ಬಂದಿದ್ದ. ಅವನ ಉದ್ದೇಶ ಈಡೇರದೆ ಅವನೊಂದಿಗೆ ಹೋಗಿ ಅವರ ದಳಪತಿಯನ್ನು ಕಂಡಿದ್ದೆ. ಅಲ್ಲಿ ಒಡಂಬಡಿಕೆಯಾಯಿತು. ಅವರು ನನಗೆ ಆರು ತಿಂಗಳು—ಅಷ್ಟರೊಳಗೆ

ತಮಗೆ ಮೃತ್ಯುವೊದಗದಿದ್ದರೆ ಮಾತ್ರ-ಜೀವರಕ್ಷಣೆಯ ಭರವಸೆ ಕೊಟ್ಟಿದ್ದಾರೆ.”

ವಿಸ್ಮಯದಿಂದ ರಾಜ ಕೇಳಿದ: “ಅರ್ಥಾತ್, ನಾನು ಆರುತಿಂಗಳು ಬದುಕಿದ್ದರೆ, ಆ ಅವಧಿಯಲ್ಲಿ ನಿನ್ನ ತಲೆಯನ್ನು ತೆಗೆದುಕೊಳ್ಳಲು ಅವರು ಪ್ರಯತ್ನಿಸುವುದಿಲ್ಲ. ಎಂದಲ್ಲವೇ-ಜಾನ್, ನನ್ನೊಡನೆ ಚೇಷ್ಟೆ ಮಾಡುತ್ತಿದ್ದೀಯೋ ಏನು?”

“ಇಲ್ಲ ಕಕ್ಕ, ಚೇಷ್ಟೆಯಲ್ಲ, ಸತ್ಯ. ಇದರಲ್ಲಿ ಕೊಂಚವೂ ಅತಿರಂಜನೆಯಿಲ್ಲ.”

“ಅವರು ಎಲ್ಲಿ ಕಂಡಿದ್ದರು? ಪತ್ರಿಕೆಗಳಲ್ಲಿ ಓದಿಯೇ ಇಲ್ಲವಲ್ಲ.”

“ಹೇಳಲು ವ್ಯಸನವಾಗುತ್ತಿದೆ ಕಕ್ಕ – ನಾನು ಒಬ್ಬೊಂಟಿಗನಾಗಿ ಒಬ್ಬ ಮಿತ್ರನನ್ನು ಕಾಣಲು ಹೋಗಿದ್ದೆ. ಎಲ್ಲಿ ಏನೆಂದು ತಿಳಿದುಕೊಳ್ಳಲು ಆಗ್ರಹಪಡಬೇಡಿರಿ, ಅದನ್ನು ಹೇಳುವುದು ಸಾಧ್ಯವಿಲ್ಲ.–ಅಲ್ಲಿ ...”

“ನೀನೊಂದು ಕತ್ತೆ. ವಿಪತ್ತಿನ ಭಯವಿರುವ ಕಡೆ ಏಕೆ ಹೋಗಿದ್ದೆಯಪ್ಪನೇ? ಇರಲಿ, ಕ್ರಾಂತಿದಲದವರೊಡನೆ ಏನೇನು ಮಾತುಕತೆಗಳಾದವು?”

ಎಲ್ಲವನ್ನೂ ಪಿಟರ್ಸ್ ಕಿರಿವರಲ್ಲಿ ವಿವರಿಸಿದ. ಪೆನಿಸನಳ ವಿಷಯವಾಗಿಯೂ ಒಂದೆರಡು ಮಾತುಗಳನ್ನು ಹೇಳಿದ. ಎಲ್ಲವನ್ನು ಮನವಿಟ್ಟು ಕೇಳಿಕೊಂಡು ಕೊನೆಗೆ ರಾಜ ಪ್ರಶ್ನಿಸಿದ: “ಬರ್ಜಿಲಂಡಿನ ರಾಜದ್ರೋಹಿಗಳಿಗೂ ಆ ಜನರಿಗೂ ಸಂಬಂಧವಿದೆಯೆ? ನಿನಗೇನೆನಿಸಿತು?”

“ಸಂಬಂಧವಿರುವುದು ಅಸಂಭವವಲ್ಲ. ರಾಜನನ್ನು ಬಿಟ್ಟು ನನ್ನ ಜೀವದ ಸುತ್ತು ಏಕೆ ಬೆನ್ನುಹತ್ತಿದ್ದೀರಿ ಎಂದು ನಾನವರನ್ನು ಕೇಳಿದೆ.”

“ಸರ್ವನಾಶ! ಹಾಗೇಕೆ ಕೇಳಿದೆ? ಅವರ ತಲೆಯಲ್ಲಿ ಈ ವಿಷಯವನ್ನು ತುಂಬಿದ್ದು ಅನ್ಯಾಯ.” ಸಿಟ್ಟಿನಿಂದ ರಾಜನೆಂದ.

“ತಮಗೆ ಭಯವೇನಿಲ್ಲ. ಅವರು ವ್ಯವಸಾಯಿ ಅನಾರ್ಕಿಸ್ಟ್ ಅಲ್ಲವೆಂದೊಪ್ಪಿದ್ದಾರೆ. ತಮ್ಮ ಮೇಲೆ ಆಕ್ರಮಣ ಮಾಡುವ ಸಾಹಸಕ್ಕೆ ಅವರು ಹೋಗುವುದಿಲ್ಲ.”

ಮಗನ ಭರವಸೆಯ ಮಾತಿನಿಂದ ರಾಜನ ಮನಸಿನ ದಿಗಿಲು ದೂರವಾಗಲಿಲ್ಲ. ಅವನ ಮನಃಚಕ್ಷುವಿನೆದುರು ಗುಪ್ತಘಾತಕನ ಮಸೆದ ಚೂರಿಯೆ

ಕುಣಿಯುತ್ತಿತ್ತು. ಗಾಬರಿಗೊಂಡ ಚಂಚಲಚಿತ್ತದಿಂದ ರಾಜನು ಕೋಣೆಯೊಳಗೆ ಎಡೆಯಾಡತೊಡಗಿದ. ಎಡೆಯಾಡುತ್ತಿದ್ದವನು ಗಕ್ಕನೆ ನಿಂತು ಮಾತನಾಡಿದ : "ಜಾನ್, ಇನ್ನೊಂದು ಮಾತಿದೆ ಕೇಳು – ನಾನು ಮುದುಕನಾದೆ. ಹೆಚ್ಚುದಿನ ರಾಜ್ಯಭಾರವನ್ನು ವಹಿಸೇನೆಂಬ ಆಶೆಯಿಲ್ಲ. ನನ್ನ ತರುವಾಯ ಗದ್ದುಗೆಯನ್ನೇರುವವನಿಗೆ ಅನಾರ್ಕಿಸ್ಟರಿಂದ ಬಹಳ ಗಂಡಾಂತರವುಂಟೆಂಬುದನ್ನು ಮರೆಯ ಬೇಡ. ಮುಂದಿನ ಇಪ್ಪತ್ತು ವರ್ಷ ಆ ರಾಜನಿಗೆ ಶಾಂತಿಯೆಂಬುದೇ ಸಿಕ್ಕದು. ಶಾಸನಸಭೆಯಲ್ಲಿ ಪ್ರಜಾತಂತ್ರವಾದಿಗಳು ತಮ್ಮ ಪಕ್ಷವನ್ನು ಬಲಪಡಿಸಿಕೊಳ್ಳುತ್ತಿರುವರೆಂದು ಕೇಳಿದ್ದೇನೆ. ಅವರ ಸಂಖ್ಯಾಬಲ ಹೆಚ್ಚಿತೆಂದರೆ ನಮ್ಮ ಶಕ್ತಿ ನಷ್ಟವಾಗುವುದರಲ್ಲಿ ಸಂದೇಹವಿಲ್ಲ ಏನೇನಾಗುವುದೋ ನಾನರಿಯೆ."

ಪಿಟರ್ಸ್ ಹೇಳಿದ : "ಮೊದಲವರು ರಾಜಕುಟುಂಬದ ವೆಚ್ಚಕ್ಕೆ ಕತ್ತರಿ ಹಾಕುವರೆಂದು ನನಗೆನಿಸುತ್ತದೆ. ಈ ಪರಿಸ್ಥಿತಿಯಲ್ಲಿ ನಾನು ಮದುವೆಯಾಗದಿರುವುದೇ ನೆಟ್ಟಗೆ ; ಹಣದ ಕೊರತೆಯಿಂದ ನನಗೆ ಸಂಸಾರ ನಡೆಯಿಸುವುದು ತೆಗವಾದೀತು."

ಆಗೊಬ್ಬ ಮಹಿಳೆ ಒಂದು ಕಾಗದವನ್ನು ತಂದು ರಾಜನ ಕೈಗಿತ್ತಳು. ಅದನ್ನೋದಿಕೊಂಡು ರಾಜನೆಂದ : "ನಾನೀಗಲೇ ಹೊರಡಬೇಕಾಗಿದೆ. ನಾಳೆ ಬೆಳಗ್ಗೆ ನೀನು ನನ್ನೊಡನೆ ತಿರುಗಾಡಲಿಕ್ಕೆ ಬಾ, ಇನ್ನೂ ಆಡಬೇಕಾದ ಅಗತ್ಯವಾದ ಮಾತುಗಳಿವೆ."

ಜಾನ್ ಪಿಟರ್ಸ್ ಪುಸ್ತಕಾಲಯದಿಂದ ಹೊರಬರುತ್ತಿರುವಾಗ ಒಂದು ಕೋಣೆಯ ಬಾಗಿಲಲ್ಲಿ ಒಬ್ಬ ಯುವತಿಯನ್ನು ಕಂಡ. ಯುವರಾಜನು ಅಲ್ಲಿ ಹಾಯುತ್ತಲೇ ಅವಳು ಮುಖಕ್ಕೆ ಮುಸುಕೆಳೆದುಕೊಂಡು ಒಳಕ್ಕೆ ಸರಿದಳು. ಪಿಟರ್ಸ್ ತನ್ನಷ್ಟಕ್ಕೆ ನುಗುಳ್ನಕ್ಕು, 'ಪ್ರಜೆಗಳು ತೆರಿಗೆ ತೆತ್ತುವುದು ಇದಕ್ಕಾಗಿಯೇ ಏನು ?' ಎಂದುಕೊಂಡು ಹೊರಟು ಹೋದ.

೬

ಅರಮನೆಯಿಂದ ಹೊರಟ ಜಾನ್ ಪಿಟರ್ಸ್ ಪೋಲಿಸ್ ದಳಾಧ್ಯಕ್ಷನ ಕಡೆಗೆ ಹೋದ. ಬ್ಯಾರನ್ ಬರ್ನಾರ್ಡ್ ಬಹುದಿನಗಳಿಂದ ಆ ಪದದಲ್ಲಿದ್ದ. ಆತ ಪ್ರಭುಭಕ್ತ, ವಿಶ್ವಾಸಿ, ಅದರಂತೆಯೆ ಕಾರ್ಯದಕ್ಷನೂ. ಚಿಕ್ಕ ಬರ್ಜಿ

ಲಂಡ್ ರಾಜ್ಯದಲ್ಲಿ ಆತನಿಗೆ ಒಳ್ಳೇ ಗೌರವವಿತ್ತು. ಬ್ಯಾರನ್ ಬರ್ನಾರ್ಡನ ಹೆಸರು ಫಿಲಿಪ್. ಪಿಟರ್ಸ್-ಫಿಲಿಪ್ಪರಲ್ಲಿ ಪರಸ್ಪರ ಸದ್ಭಾವವಿದ್ದಿತು. ಆದರೂ ಒಬ್ಬರಿಗೊಬ್ಬರು ಒಳವಮಾತುಗಳನ್ನು ಬಿಚ್ಚಿ ಹೇಳುತ್ತಿರಲಿಲ್ಲ. ಫಿಲಿಪ್ಪನ ಕೋಣೆಯಲ್ಲಿ ಇಬ್ಬರೂ ಮಾತನಾಡುತ್ತ ಕುಳಿತರು.

ಫಿಲಿಪ್ ಮೇಜಿನ ಮೇಲೆ ಪಿಟರ್ಸನೆದುರಿಗೆ ಬಾಗಿ, "ಯುವರಾಜ, ತಾವು ಹಲವು ದೇಶಗಳನ್ನು ತಿರುಗಿ ಬಂದಿರಿ, ಇಷ್ಟು ತಿರುಗಿದರೂ ತಮ್ಮ ಆರೋಗ್ಯ ಚೆನ್ನಾಗಿಯೆ ಇದೆ. ತಮ್ಮದೇನು ಉಕ್ಕಿನ ಶರೀರವೆ ?" ಎಂದ.

ಪಿಟರ್ಸ್ ನಕ್ಕು ಉತ್ತರವಿತ್ತ : "ಉಕ್ಕಿನದಾಗಿರಲಿಕ್ಕಿಲ್ಲ, ಆದರೆ ಅರಳೆಯದಾಗಲಿ ಮೇಣದ್ದಾಗಲಿ ಅಲ್ಲ. ಸ್ವಲ್ಪಕ್ಕೇ ಪ್ರಕೃತಿ ಕೆಡುವುದಿಲ್ಲ. ಲಂಡನ್ನಿನ ಭಯಂಕರ ಚಳಿಯಲ್ಲಿಯೂ ಇದಕ್ಕೇನೂ ಧಾಡಿಯಾಗಲಿಲ್ಲ."

"ಅದು ಸರಿ. ಆದರೆ ಲಂಡನ್ನಿನ ಚಳಿಗಿಂತಲೂ ಪ್ಯಾರಿಸಿನ ಪ್ರಭಾತದ ಗಾಳಿ ಹೆಚ್ಚು ಅನಿಷ್ಟಕಾರಿ" ಎಂದ ಫಿಲಿಪ್.

ಬರ್ನಾರ್ಡ್ ತನಗೆ ಹಾಸ್ಯಮಾಡುತ್ತಿದ್ದಾನೆಂದು ಪಿಟರ್ಸನಿಗೆ ತಿಳಿಯದೆ ಹೋಗಲಿಲ್ಲ. ಅವನೆಂದ : "ಪ್ಯಾರಿಸಿನ ಮಾತನ್ನು ಏಕೆ ತೆಗೆಯುತ್ತೀರಿ ? ನನ್ನ ಪ್ಯಾರಿಸ್ ಯಾತ್ರೆಯ ವಿಷಯವಾಗಿ ಪತ್ರಿಕೆಗಳಲ್ಲಿ ಏನಾದರೂ ಬಂದಿದೆಯೋನೋ ?"

"ಕರ್ತವ್ಯವೆಂದು ಕೆಲವೊಂದು ವಿಷಯಗಳನ್ನು ನಾನು ಶೋಧಿಸಬೇಕಾಗುತ್ತದೆ."

"ಕಸ್ಟಮನ ಅಪ್ಪಣೆಯಂತೆಯೆ ?"

ಇದಕ್ಕೆ ಬರ್ನಾರ್ಡ್ ಉತ್ತರವೀಯಲಿಲ್ಲ. ರಾಜನಿಗೆ ದೋಷ ತಗಲುವಂತಹ ಮಾತನ್ನು ಹಿಂದೊತ್ತುವುದು ಉಚಿತವೆಂದು ಅವನೆನಿಸಿದ. ಕ್ಷಣ ತಡೆದು ಅವನೆಂದ : "ತಮ್ಮ ಬಗ್ಗೆ ನಾನು ಸಂಗ್ರಹಿಸಿದ ವಿವರಣೆಯಿಂದ ನನ್ನ ಕಾರ್ಯಕ್ಷಮತೆ ಯಥೇಷ್ಟವಾಗಿ ಕಂಡುಬರುತ್ತದೆ. ನನ್ನ ದಿನಚರಿ ಒಳ್ಳೇ ಮನೋರಂಜಕವಾಗಿದೆ."

ತನ್ನ ಚಲನವಲನದ ಮೇಲೆ ಕಣ್ಣಿಡಲು ಬರ್ನಾರ್ಡ್ ಪೇರರನ್ನು ನಿಯಮಿಸಿರಬೇಕು, ಇಲ್ಲನೆ ತಾನೇ ಹೇರತನ ಮಾಡಿರಬೇಕು ಎಂದು ಪಿಟರ್ಸ್

ತಿಳಿದುಕೊಂಡ. ಅವನು ಕೇಳಿದ : “ ನಾನು ವಿದೇಶಗಳಲ್ಲಿ ಎಲ್ಲಿಯಾದರೂ ತಿಳಿಗೇಡಿಯಂತೆ ವರ್ತಿಸಿದೆನೆಂದು ನಿಮಗೆನಿಸುವುದೊ ?”

“ ತಾವು ಒಳ್ಳೇ ಸೊಗಸನ್ನು ಸೂರೆಗೊಂಡಿರೆಂಬುದನ್ನು ಹೇಳುವುದೇ ಬೇಡ. ಒಂದು ದಿನ ಬೆಳಗಿನಲ್ಲಿ ತಾವು ರಂಬುಲೇಟಿನಲ್ಲಿ ಮೋಟರು ಹೊಡೆದದ್ದು ನೆನಪಿದೆಯೆ?”

“ ಇಲ್ಲ.”

“ ಅಷ್ಟು ದೊಡ್ಡ ವಿಷಯ ತಮಗೆ ನೆನಪಿಲ್ಲವೆ? ತಮ್ಮ ಸ್ಮರಣ ಶಕ್ತಿ ಶೋಚನೀಯವೇ ಸರಿ. ಬುಧವಾರ ರಾತ್ರಿ ನಿಮಗೆ ರಾಜದೂತನ ಮನೆಯ ಔತಣವಿತ್ತು. ಆ ಭೋಜನಸಮಾರಂಭದಲ್ಲಿ ಕೌಂಟ್ ಗೇಲ್ ಎಂಬ ಸರ್ದಾರ ಹಸ್ತರಿದ್ದರು. ಅವರು ಎಂಥವರೆಂಬುದನ್ನು ನಾನು ತಿಳಿದುಕೊಳ್ಳಬೇಕಾಗಿದೆ; ಅವರ ವಿಷಯ ಒಳ್ಳೇ ಅವಶ್ಯವಾಗಿ ಬೇಕಾಗಿದೆ.”

“ ಅದೊಂದೂ ನನಗೆ ನೆನಪಿಲ್ಲ.”

“ ಏನೆಂದಿರಿ? ಮೊದಲು ತಮಗೆ ಇಷ್ಟೊಂದು ಮರೆವಿರಲಿಲ್ಲ; ರಾಜದೂತನಲ್ಲಿ ಊಟವಾದದ್ದಾದರೂ ನೆನಪಿದೆಯೆ?” ಆಶ್ಚರ್ಯದಿಂದ ಒನ್ಸಾರ್ಡ್ ಕೇಳಿದ.”

“ಎಷ್ಟೋ ಕಡೆ ಉಂಡಿದ್ದೇನೆ, ತಿಂದಿದ್ದೇನೆ; ಎಲ್ಲವನ್ನೂ ನೆನಪಿಡುವುದು ಸಾಧ್ಯವೆ? ”

“ ಬಿಡಿರಿ, ಅದೆಲ್ಲ ಮರೆತಿದ್ದೀತು. ಮೋಟರಿನಲ್ಲಿ ಹೋಗುತ್ತಿದ್ದಾಗ ಘಟಿಸಿದ ದುರ್ಘಟನೆಯೂ ನೆನಪಿನಲ್ಲಿಲ್ಲವೆ? ಅದರಲ್ಲಿ ತಾವು ಉಳಿದದ್ದೇ ದೊಡ್ಡ ಮಾತು.”

ಕಸುವಿನಿಂದ ಮೇಜನ್ನು ಬಡಿದು ಪಿಟರ್ಸ್ ಇಲ್ಲಿ ನೋಡಿ ಒನ್ಸಾರ್ಡ್, ನಿಮ್ಮ ಯಾವ ಪ್ರಶ್ನೆಗೂ ಉತ್ತರ ಕೊಡಲಾರೆ. ನನ್ನ ಮೇಲೂ ಪತ್ತೆದಾರಿ ನಡೆಸುವುದು ನಿಮ್ಮ ಕರ್ತವ್ಯವಾಗಿದ್ದರೆ, ನಾನೇನು ಬೇಡವೆನ್ನುವುದಿಲ್ಲ. ಆದರೆ ನನ್ನ ಪ್ರತಿಯೊಂದು ಕಾರ್ಯದ ಬಗ್ಗೆಯೂ ನಿಮಗೆ ನಾನು ಉತ್ತರದಾಯಿಯಾಗಬೇಕೆಂದು ಮಾತ್ರ ಆಶಿಸಬೇಡಿರಿ. ನಾನು ನಿಮ್ಮಿಂದ ಕೆಲವು ಮಾತುಗಳನ್ನು ಕೇಳಿಕೊಳ್ಳಲೆಂದು ಬಂದದ್ದು, ನಿಮ್ಮ ಪ್ರಶ್ನೆಗಳಿಗೆ ಉತ್ತರಕೊಡಲಿಕ್ಕಲ್ಲ.”

" ಒಳ್ಳೆದು. ಏನು ಕೇಳುವುದುಂಟೋ ಕೇಳಿರಿ, ಹೇಳುತ್ತೇನೆ "

" ಲಂಡನಿನಲ್ಲಿ ನಾನು ಎರಡು ರಾತ್ರಿ ಅಜ್ಞಾತವಾಸಿಯಾಗಿದ್ದೆ. ಆಗೊಮ್ಮೆ ಪ್ರಾಣಸಂಕಟಕ್ಕೆ ಬಿದ್ದಿದ್ದೆ."

" ಏನಾಗಿತ್ತು? "

" ಒಬ್ಬನು ನನ್ನನ್ನು ಕೊಲ್ಲಲುಜ್ಜುಗಿಸಿದ್ದ."

" ಯಾರು? "

" ಆ ಗುಂಪಿನಲ್ಲಿ ಮೂವರು ಗಂಡಸರು, ಒಬ್ಬ ಹೆಂಗಸು ಇದ್ದರು. ಅವರು ತೀರ ಕಾಡುಮಂದಿ. ಸಂಚು ಮಾಡುವ ವಿದ್ಯೆಯಲ್ಲಿ ಕೊಂಚವೂ ಸ್ವಾರಸ್ಯವಿಲ್ಲ ಅವರಿಗೆ. ಆದರೂ ಅವರು ಕೆಲವರು ಕೂಡಿ, ಪೃಥ್ವಿಯಲ್ಲಿಯ ಸ್ವಚ್ಛಂದ ಪ್ರಜಾಪೀಡಕರಾದ ರಾಜರನ್ನೂ ಅವರ ಕರ್ಮಚಾರಿಗಳನ್ನೂ ಕೊನೆಗಾಣಿಸುವ ಉದ್ದೇಶದಿಂದ ಗುಪ್ತಸಮಿತಿಯನ್ನು ಸಂಘಟಿಸಿದ್ದಾರೆ. ಬೊಡ್ಡೆಗೆ ಕೊಡಲಿ ಹಾಕುವುದು ಬಿಟ್ಟು, ಟೊಂಗೆಯನ್ನೇಕೆ ಸವರಲು ಪ್ರಯತ್ನಿಸುವರೆಂದು ನಾನವರನ್ನು ಕೇಳಿದೆ. ನಮ್ಮ ಕಕ್ಕ ಫರ್ಡಿನಂದರನ್ನು ಮೊಟ್ಟ ಮೊದಲು ಕೊಲ್ಲುವುದು ಅವರ ಕರ್ತವ್ಯ; ಆದರೆ, ಅವರ ಲಕ್ಷ್ಯ ಬೊಡ್ಡೆಯ ಕಡೆಗಿಲ್ಲ, ಎಲೆಚಿಗುರುಗಳ ಕಡೆಗಿತ್ತು; ಮುದುಕರನ್ನುಳಿಸಿ ಹರಯದವರನ್ನಳಿಸಲು ವ್ಯಸ್ತರಾಗಿದ್ದರು! "

ಬನಾರ್ಡರ್ಫ್ ಒಮ್ಮೆಲೆ ಎದ್ದ. " ತಾಳಿರಿ, ಈಗ ಬಂದೆ" ಎಂದು ನುಡಿದು ಪಕ್ಕದ ಕೋಣೆಯನ್ನು ಹೊಕ್ಕ. ಕೊಂಚ ಹೊತ್ತಿನಲ್ಲಿ ಒಂದು ಹೊತ್ತಗೆಯನ್ನು ಹಿಡಿದುಕೊಂಡು ಬಂದು, ಅದನ್ನು ಪಿಟರ್ಸನ ಕೈಯಲ್ಲಿ ಕೊಡುತ್ತ ಹೇಳಿದ. " ಈ ಅಲ್ಬಮಿನಲ್ಲಿ ಅನೇಕರ ಭಾವಚಿತ್ರಗಳಿವೆ. ತಮ್ಮನ್ನು ಕೊಲ್ಲಲು ಹೊಂಚು ಹಾಕಿದ ನಾಲ್ವರಲ್ಲಿ ಯಾರ ಭಾವಚಿತ್ರವಾದರೂ ಇದರಲ್ಲುಂಟೋ ಹೇಗೋ ನೋಡಿರಿ. ಮೊದಮೊದಲಿನ ಭಾಗ ಬಹು ಹಿಂದಿನ ಸಂಗ್ರಹ; ಕೊನೆಯಿಂದ ನೋಡಿರಿ."

ಪಿಟರ್ಸ್ ಕುತೂಹಲಿಯಾಗಿ ಅಲ್ಬಮಿನ ಪುಟಗಳನ್ನು ಮುಗುಚ ತೊಡಗಿದ. ಎಂಟು ಹತ್ತು ಪುಟಗಳನ್ನು ತಿರುವಿಹಾಕಿ ಪಕ್ಕನೆ ತಡೆದ. ಆ ಪುಟದಲ್ಲಿಯ ಭಾವಚಿತ್ರದ ಮುಖವನ್ನು ಅವನು ಗುರುತಿಸಿದ. ಪೆನಿಸರಳ

ಮನೆಯಲ್ಲಿ ತನ್ನನ್ನು ಕೊಲೆಮಾಡಲು ಬಂದಿದ್ದ ಯುವಕನ ಭಾವಚಿತ್ರವದು. "ಇವನೇ, ಇವನೇ ನನ್ನ ಕೊಲೆಗೆ ಉದ್ಯುಕ್ತನಾದವ." ಎಂದ ಪಿಟರ್ಸ್.

ಭಾವಚಿತ್ರದಡಿಯಲ್ಲಿ ಸಂಖ್ಯೆಯಿತ್ತು ಬರ್ನಾರ್ಡ್ ಒಂದು ಪುಸ್ತಕವನ್ನು ತಂದು ಆ ಸಂಖ್ಯೆಯುಳ್ಳನೆಯ ಪುಟವನ್ನು ತೆರೆದು ಎಂದ; "ಅವನ ಕತೆಯನ್ನು ಕೇಳಿರಿ: ಇವನ ಹೆಸರು ವ್ಹಿಕ್ಟರ್ ಡೆಕರ್ಜಿ. ಇವನ ತಂದೆ ಎಮಿಲ್ ಡೆಕರ್ಜಿ ವಕೀಲಿವೃತ್ತಿಯವ ಮಾಲರಾತಿನಲ್ಲಿ ಅವರ ಮನೆ. ಆ ಕುಟುಂಬದ ಜನರೆಲ್ಲ ಸಾಮ್ಯವಾದಿಗಳು. ಸಾಮ್ಯವಾದಿ ಸಂಪ್ರದಾಯದಲ್ಲಿ ಗುಪ್ತಹತ್ಯೆ ಮೊದಲಾದ ಕಠಿನ ಕಾರ್ಯಗಳನ್ನು ವಹಿಸಿಕೊಂಡವರಲ್ಲಿ ವ್ಹಿಕ್ಟರ್ ಒಬ್ಬ; ಅವನು ರಾಜದ್ರೋಹಿಗಳ ಗುಪ್ತಸಮಿತಿಯ ಸದಸ್ಯನಾಗಿದ್ದಾನೆ. ಪತ್ರಿಕೆಗಳಲ್ಲಿ ರಾಜದ್ರೋಹಾತ್ಮಕ ಲೇಖನಾದಿಗಳನ್ನು ಬರೆಯುತ್ತಿದ್ದಾನೆ ಕೆಲದಿನಗಳ ಪೂರ್ವದಲ್ಲಿ 'ಕಿಗಾರೋ' ಪತ್ರಿಕೆಯಲ್ಲಿ ನಮ್ಮ ರಾಜವಂಶವನ್ನು ತುಂಬಾ ಹೀಯಾಳಿಸಿ ಟೀಕಿಸಿ ಇವನು ಬರೆದ ಒಂದು ಲೇಖನ ಪ್ರಕಟವಾಗಿದೆ. ಅದಕ್ಕಾಗಿ ಇವನನ್ನು ಬರ್ಜಿಲಂಡ್ ರಾಜ್ಯದಿಂದ ಹೊರದೂಡಲಾಗಿತ್ತು. ಆಗವನು ಇಲ್ಲಿಂದ ಲಂಡನಿಗೆ ಹೋದನೆಂದಿಷ್ಟೇ ಗೊತ್ತು. ಈಗೆಲ್ಲಿದ್ದಾನೆ, ಏನುಮಾಡುತ್ತಾನೆಂಬುದು ಅಜ್ಞಾತವಾಗಿತ್ತು. ತಮ್ಮ ಮಾತಿನಿಂದ ಇವನಿನ್ನೂ ತನ್ನ ಸಂಕಲ್ಪವನ್ನು ಬಿಟ್ಟಿಲ್ಲವೆಂದು ತೋರುತ್ತದೆ.– ನೋಡಿರಿ, ಆ ದಲದ ಮತ್ತೆ ಯಾರ ಭಾವಚಿತ್ರವಾದರೂ ಇದೆಯೋ ಹೇಗೋ ?"

ಪುಟಗಳನ್ನೆಲ್ಲ ಮಗುಚಿ ನೋಡಿ ಪಿಟರ್ಸ್ ಹೇಳಿದ : "ಇಲ್ಲ; ಮತ್ತೆ ಯಾರದೂ ಕಾಣುವುದಿಲ್ಲ"

ಆಮೇಲೆ ಬರ್ನಾರ್ಡ್ ಪಿಟರ್ಸನಿಂದ ಆ ದಿನದ ಸಂಗತಿಯನ್ನೆಲ್ಲ ಕೇಳಿಕೊಂಡು ಹೇಳಿದ : "ಯುವರಾಜ ತಾವು ದೊಡ್ಡ ಕುತ್ತಕ್ಕೆ ಈಡಾಗಿದ್ದಿರಿ. ಅವರು ತಮ್ಮನ್ನು ಕೊಲ್ಲಲು ಏಕೆ ಹವಣಿಸಿದ್ದರೋ ತಿಳಿಯಲೊಲ್ಲದು. ತಮ್ಮ ಹೇಳಿಕೆಯಿಂದ, ಅವರ ತಮ್ಮೊಡನೆ ಹುಡುಗಾಟ ಆಡಿದರೆಂದೆನಿಸುತ್ತದೆ ; ಆ ವ್ಯಾಪಾರವು ಆಮೂಲಾಗ್ರವಾಗಿ ರಹಸ್ಯಮಯವಾಗಿದೆ."

“ಪ್ರಸಂಗ ಅತ್ಯಂತ ಭಯಂಕರವೆಂದು ಆಗ ನನಗೂ ಎನಿಸಿರಲಿಲ್ಲ. ಅವರೊಡನಿದ್ದಾಗ ರಂಗಭೂಮಿಯಲ್ಲಿ ನಾಟಕವಾಡಿದಂತೆ ಎನಿಸುತ್ತಿತ್ತು. ಆದರೆ ಉಳಿದುಕೊಂಡದ್ದು ಮಾತ್ರ ಪೂರ್ವ ಜನ್ಮದ ಪುಣ್ಯ.”

“ಆ ದಳದ ಬೇರೆ ಯಾರ ಚಿತ್ರವೂ ಇದರಲ್ಲಿ ಇಲ್ಲವೆಂದಿರೇನು ?” ಎಂದು ಬರ್ನಾರ್ಡ್ ಮತ್ತೆ ಕೇಳಿದ.

“ನಿಶ್ಚಯವಾಗಿ ಇಲ್ಲ.”

ಆಗ ಬರ್ನಾರ್ಡ್ ಅತಿಶಯ ಗಂಭೀರಭಾವದಿಂದ ಸಿಗಾರೇಟನ್ನು ಸೇದತೊಡಗಿದ.

“ಈ ಜನರು ಯಾವುದೊಂದು ಅನಾರ್ಕಿಸ್ಟ್ ಪಂಥಕ್ಕೆ ಸೇರಿದವರೆ ? ನರಹತ್ಯೆಯೆ ಇವರ ಉದ್ಯೋಗವೆ ?” ಎಂದು ಪಿಟರ್ಸ್ ಪ್ರಶ್ನಿಸಿದ.

ಬರ್ನಾರ್ಡ್ ಚಿಂತಿತಭಾವದಿಂದ ಉತ್ತರವಿತ್ತ : “ಇದಕ್ಕೆ ಸರಿಯಾದ ಉತ್ತರ ಹೇಳುವುದು ಸಾಧ್ಯವಿಲ್ಲ. ತಮಗೆ ನೆನಪಿದೆಯೋ ಇಲ್ಲವೋ ಗೊತ್ತಿಲ್ಲ,– ಲಂಡನಿನಲ್ಲಿ, ಪ್ಯಾರಿಸಿನಲ್ಲಿ, ಟುರಿನಿನಲ್ಲಿ– ಹೆಣಗಳು ಸಿಕ್ಕಿದ್ದವು. ಆದರೆ ಈವರೆಗೂ ಕೊಂದವರು ಸಿಕ್ಕಿಲ್ಲ ಹತರಾದ ಮೂವರೂ ಪ್ರಸಿದ್ಧರು; ದುಶ್ಚರಿತ್ರರೆಂದು, ಪ್ರಜಾಪೀಡಕರೆಂದು ಅವರೆಲ್ಲರಿಗೂ ಹೆಸರಾಗಿದ್ದರು. ಸಾಂಟಿನಾನಿನ ಡ್ಯೂಕ್ ಆ ಮೂವರಲ್ಲೊಬ್ಬರು, ವೈಯಕ್ತಿಕ ದ್ವೇಷದಿಂದಲೇ ಈ ಕೊಲೆಗಳಾಗಿರಲೂ ಬಹುದು. ಆದರೆ, ಪ್ಯಾರಿಸಿನ ಪೋಲಿಸರು ಇದು ಯಾವುದೋ ಗುಪ್ತಸಮಿತಿಯ ಕೆಲಸವಿರಬೇಕೆಂದು ನಂಬುತ್ತಾರೆ. ಇವರಿಗೆ ಅಸಾಧ್ಯಕಾರ್ಯವೇ ಇಲ್ಲ.”

“ನನಗೇನೋ ಹಾಗೆ ತೋರುವುದಿಲ್ಲ. ಅವರ ರೀತಿ ಮಾತು ನೋಡಿದರೆ ನರಹತ್ಯೆಯ ವಿಷದಲ್ಲಿ ಅವರು ಅನಭಿಜ್ಞರೆಂದೆನಿಸುವುದು.” ಪಿಟರ್ಸ್ ಎಂದ.

ಬರ್ನಾರ್ಡ್ ಅಡ್ಡ ಗೋಣುಹಾಕುತ್ತ, “ತಮ್ಮ ಅಭಿಪ್ರಾಯ ಸರಿಯಲ್ಲ. ನನಗೆ ತಿಳಿದ ಮಟ್ಟಿಗೆ, ಇವರ ಸಂಚು ಚಾತುರ್ಯ ಪೂರ್ಣವಾಗಿ ಸಂಘಟಿತವಾಗಿದೆ, ಅದರ ಜಾಲ ಬಹು ದೂರ ಪಸರಿಸಿದೆ ಎಂದು ನನ್ನ ಭರವಸೆ. ಆದರೂ ಮನುಷ್ಯ ಭ್ರಮಾಶ್ರಮಾದಗಳನ್ನು ಪೂರ್ಣ ಮೀರಿದವನಲ್ಲ. ಎಷ್ಟು ಕೌಶಲದಿಂದ ರಚಿಸಿದ ಸಂಚೂ ಸಾಮಾನ್ಯ ಭ್ರಮೆಯಿಂದ

ವ್ಯರ್ಥವಾಗುವುದುಂಟು" ಎಂದು ಕೊಂಚತಡೆದು ಹೇಳಿದ : "ಕೆಲ ದಿನ ನಾನು ಲಂಡನಿಗೆ ಹೋಗಬೇಕಾಗುವುದು."

"ಏಕೆ ಇಲ್ಲಿ ನಿಮಗೇನು ಕೆಲಸ ಕಡಿಮೆಯಾಗಿವೆಯೆ?"

"ಲಂಡನಿನಲ್ಲಿ ಹೀಗೆ ಒಂದು ವಿಶೇಷಕಾರ್ಯವಿದೆ. ನಿಜ ಹೇಳ ಬೇಕೆಂದರೆ, ತಮ್ಮ ಮಾತುಗಳನ್ನು ಕೇಳಿ ಬರ್ಜಿಲಂಡಿನ ರಾಜಸಿಂಹಾಸನ ವನ್ನು ಪಡೆಯುವ ವಿಷಯದಲ್ಲಿ ಕೊಂಚವೂ ಆಸಕ್ತಿಯಿಲ್ಲವೆಂದು ಎನಿಸುತ್ತದೆ."

ಪಿಟರ್ಸ್ ತೀಕ್ಷ್ಣದೃಷ್ಟಿಯಿಂದ ಜನಾರ್ದನನ ಮುಖವನ್ನು ನೋಡಿ "ಸರ್, ಹೀಗೆನಿಸಲು ಕಾರಣವೇನು?" ಎಂದು ಹೇಳಿದ.

"ಕಾರಣಗಳು ತುಂಬಾ ಇವೆ. ತಾವು ಯುವರಾಜರೆಂಬುದನ್ನು ಕ್ಷಣ ಹೊತ್ತು ಮರೆತು ಈ ರಾಜ್ಯದ ಸಾಮಾನ್ಯಪ್ರಜೆ ಎಂದು ಭಾವಿಸಿಕೊಳ್ಳಿರಿ. ಎಂದರೆ, ಫರ್ದಿನಂಡ್ ರಾಜರ ಉಚ್ಛೃಂಖಲತೆಯಿಂದ, ಅನ್ಯಾಯದ ಆಡಳಿತ ದಿಂದ, ಈ ರಾಜ್ಯದ ಪ್ರಜಾಕೋಟಿ ದೀರ್ಘಕಾಲದಿಂದ ದಿನದಿನವೂ ಎಂಥ ನಿದಾರುಣಯಾತನೆಯನ್ನು ಅನುಭವಿಸುತ್ತಿದೆ ಎಂಬುದು ತಮಗೆ ಗೊತ್ತಾ ಗುವುದು."

"ಇವೆಲ್ಲ ಮಾತು ರಾಜದ್ರೋಹಿಗಳ ಬಾಯಲ್ಲಿಯೇ ಒಪ್ಪುವುದು!"

"ಅದು ನಿಜ. ಆದರೆ ತಮ್ಮೆದುರು ಹೃದ್ಗತವನ್ನು ಬಚ್ಚಿಟ್ಟು ಮಾತ ನಾಡುವ ಅಗತ್ಯವಿಲ್ಲೆಂದು ನನಗೆನಿಸುತ್ತದೆ ತಾವು ಅರಸರಾಗುವಿರೆಂದು ಪ್ರಜೆಗಳು ಬಲ್ಲರು. ಆದರೆ ಅದರಿಂದ ಅವರ ಸ್ಥಿತಿಯಲ್ಲಿ ಏನಾದರೂ ಪರಿ ವರ್ತನೆಯಾಗುವುದೆ? ತಮ್ಮ ಬಗ್ಗೆ ಪ್ರಚುರವಾಗಿರುವ ವದಂತಿಗಳು ಸತ್ಯವಿ ದ್ದರೆ, ಪ್ರಜೆಗಳು ತಮ್ಮಲ್ಲಿ ಎಷ್ಟೂ ಆಶೆಯಿಡಲಾರರೆಂಬುದನ್ನೂ ಒಪ್ಪಬೇಕಾ ಗುವುದು. ಚಿಕ್ಕ ದೊಡ್ಡ ಯಾವ ಪತ್ರಿಕೆಯಲ್ಲಿ ನೋಡಿದರೂ ತಮ್ಮ ದುರಾ ಚರಣೆಯ ಕಥೆ ಇದ್ದೇ ಇದೆ. ಒಂದು ದಿನ ರಾಜ್ಯದ ಶಾಸನ ಸೂತ್ರಗಳನ್ನು- ಪ್ರಜೆಗಳ ಭಾಗ್ಯಸೂತ್ರಗಳನ್ನು-ಕೈಗೆ ತೆಗೆದುಕೊಳ್ಳುವವರು, ರಾತ್ರಿಕಾಲದಲ್ಲಿ ಪ್ಯಾರಿಸಿನ ಸುರಾಲಯದಲ್ಲಿಯೋ, ವ್ಹಿಯನ್ನದ ನಾರಾಂಗನಾಮಂದಿರದ ಲ್ಲಿಯೋ ಇರುತ್ತಾರೆಂದರೆ, ಯಾವ ಶಿಕ್ಷಣವನ್ನು ಪಡೆಯಲು ಅವರಲ್ಲಿಗೆ ಹೋಗಿರುತ್ತಾರೋ ಏನೋ ಯಾರು ಹೇಳಬಲ್ಲರು? ಇವೆಲ್ಲ ಸುದ್ದಿಗಳನ್ನು

ಕೇಳಿದ ಸಾಮಾನ್ಯರ ಮನಸು ವಿದ್ರೋಹಿಯಾದೀತೋ ಆಗದಿಕ್ಕಿಲ್ಲವೋ ತಾವೇ ಯೋಚಿಸಿರಿ."

ಜಾನ್ ಪಿಟರ್ಸ್ ಯಾವ ಮಾತನ್ನೂ ಆಡಲಿಲ್ಲ. ಬರ್ನಾರ್ಡ್ ಹೇಳುವುದನ್ನು ನೀರವವಾಗಿ ಕೇಳುತ್ತಲಿದ್ದ. ಅವನು ಮುಂದುವರಿಸಿದ: ತಮ್ಮೊಡನೆ ಒಡನಾಟಗಳಿಂದಲೂ ನನ್ನ ಗೆಳೆತನವಿದೆ. ಆದರೂ ತಮ್ಮ ಪ್ರವೃತ್ತಿಯ ನೆಲೆ ನನಗೆ ಹತ್ತಲಿಲ್ಲ. ತಮ್ಮ ಪ್ರಕೃತಿ ಸಂಪೂರ್ಣ ರಹಸ್ಯದಿಂದ ಆವೃತವಾಗಿದೆ. ತಮ್ಮನ್ನು ನಾನು ಯಾವ ರೂಪದಲ್ಲಿ ಕಾಣುವೆನೋ ಪ್ರಜೆಗಳು ಆ ರೂಪದಲ್ಲಿ ಕಾಣಲಾರರು. ಅವರ ದೃಷ್ಟಿಯಲ್ಲಿ ತಾವು ಅತ್ಯಂತ ಅಪ್ರಿಯರು, ಶ್ರದ್ಧೆಗೆ ಅಪಾತ್ರರು. ಅವರು ಆಡಿಕೊಳ್ಳುವ ಹಾಗೇ ತಾವು ಕೂಡ ಯಾವುದೋ ಗುಪ್ತಸಂಕಲ್ಪಕ್ಕೆ ವಶರಾಗಿ, ಹೀನಲಂಪಟ ಪ್ರವೃತ್ತಿಯವರೆಂಬುದನ್ನೇ ಜನರೆದುರು ತೋರಿಸಲು ಪ್ರಯತ್ನಿಸುತ್ತಿರುವಂತೆ ನನಗೆ ತೋರುತ್ತಿದೆ. ನನ್ನೀ ಅನುಮಾನವು ಎಷ್ಟು ಮಟ್ಟಿಗೆ ಸತ್ಯವೋ ನಾನರಿಯೆ."

ಅಸಮಾಧಾನದಿಂದ ಪಿಟರ್ಸ್ "ಬರ್ನಾರ್ಡ್, ನೀವಿಂದು ಸ್ವಲ್ಪ ಮಿತಿ ಮೀರಿಯೇ ಮಾತನಾಡಿಬಿಟ್ಟಿರಿ" ಎಂದ.

"ಆದರೆ ಒಂದೂ ಅಸಂಗತವಲ್ಲವೆಂದು ಎನಿಸುತ್ತದೆ" ಎಂದ ಬರ್ನಾರ್ಡ್.

"ಹೀಗೆ ನಿಮ್ಮ ತಿರಸ್ಕಾರವೇಕೆ? ನಾನು ನಿಮ್ಮನ್ನು ಮಿತ್ರರೆಂದು ಭಾವಿಸುತ್ತೇನೆ; ಎಂತಲೇ ನಿಮ್ಮ ಅನೇಕ ಅನ್ಯಾಯದ ಮಾತುಗಳನ್ನು ಸೈರಿಸಿದ್ದೇನೆ. ಇದು ನನ್ನ ದೌರ್ಬಲ್ಯವಿರಬಹುದು. ಆದರೆ ನೀವು ಬರೀ ಪ್ರಜೆಗಳ ಸುಖ-ಸೌಕರ್ಯಗಳ ಕಡೆ ನೋಡಿದರೆ ತೀರದು, ರಾಜ್ಯದ ಶಾಂತಿರಕ್ಷಣೆಯ ಭಾರವೂ ನಿಮ್ಮ ಮೇಲಿದೆ. ರಾಜದ್ರೋಹಿಗಳು ದಿನದಿನಕ್ಕೂ ಪ್ರಬಲರಾಗುತ್ತಿದ್ದಾರೆಂದು ನನಗೆ ತಿಳಿದುಬಂದಿದೆ; ಸುತರಾಂ ರಾಜಧಾನಿಯಲ್ಲಿ ನಿಮಗೆ ಅನೇಕ ಕಾರ್ಯಗಳಿವೆ."

"ನಾನು ಅದನ್ನು ಅಲ್ಲಗಳೆಯುವುದಿಲ್ಲ."

"ಈ ವಿದ್ರೋಹಿಗಳ ನಾಯಕನು ಯಾರೆಂದು ನಿಮ್ಮ ಗುಪ್ತಚಾರರಿಗೆ ಇನ್ನೂ ತಿಳಿದುಕೊಳ್ಳುವುದಾಗಿಲ್ಲ, ಇನ್ನೂ ಅವನ ಚಲನವಲನ ಯಾವುದೂ

ಗೊತ್ತಾಗಿಲ್ಲ ಶೋಚನೀಯ ! ಇದು ನಿಮ್ಮ ಶಾಖೆಗೆ ತುಂಬ ನಾಚಿಕೆಯ ವಿಷಯವಲ್ಲವೆ ? "

" ಅವನು ಇನ್ನೂ ವರೆಗೆ ನಮ್ಮ ಕಣ್ಣಿಗೆ ಇಂಗುಹಚ್ಚಿ, ದೇಶದಲ್ಲಿ ರಾಜದ್ರೋಹದ ಬೀಜವನ್ನು ಬಿತ್ತುತ್ತ ತಿರುಗಾಡುತ್ತಿದ್ದಾನೆ. ಆದರೆ ರಾಜ್ಯದ ಇಂದಿನ ಪರಿಸ್ಥಿತಿಯಲ್ಲಿ ಅವನನ್ನು ಹಿಡಿಯುವುದು ಎಷ್ಟು ಕಠಿನವೆಂಬುದನ್ನು ತಾವು ಯೋಚಿಸಿದಂತಿಲ್ಲ. ನಾವೀಗ ಅವನನ್ನು ಬಂಧಿಸಲು ಮುಂದುವರಿದರೆ, ಅಥವಾ ಯಾವನೊಬ್ಬನನ್ನು ಹಿಡಿದರೆ ಪರಿಣಾಮವೇನಾಗುವುದೆಂದು ಬಲ್ಲಿರಾ ? ಕ್ರಾಂತ್ಯನ್ಮುಖರಾದ ಪ್ರಜೆಗಳು ತತ್ಕ್ಷಣವೇ ಕ್ರಾಂತಿಯ ಸ್ಫೋಟಿಸಿಬಿಡುವರು."

" ಅದಕ್ಕೆ ಅಂಜುವುದೇಕೆ? ನಿಮಗೆ ದಂಡಿನ ನೆರವು ಸಿಕ್ಕುವುದು."

ಬರ್ನಾರ್ಡ್ ತಲೆಯಲ್ಲಾಡಿಸಿ ಹೇಳಿದ: " ಹೂಂ ಸೈನ್ಯಬಲ! ನಮ್ಮ ರಾಜ, ತಮ್ಮ ಸುಖವಿಲಾಸಿಯರಾದ ಸೈನ್ಯವನ್ನು ನಚ್ಚಿಕೊಂಡಿರಬಹುದೆನ್ನು ವಿರಾ ? ನನ್ನ ಮನದೊಳಗಿನ ಗುಟ್ಟನ್ನು ಹೇಳುತ್ತೇನೆ ಕೇಳಿರಿ— ನಮ್ಮ ಸೈನಿಕರು ನಾಗರಿಕರ ಮೇಲೆ ಗುಂಡು ಹಾರಿಸಲಾರರು !"

" ನಾಳೆ ರಾತ್ರಿ ನಾನು ದಂಡಿನ ಬೀಡಿಗೆ ಹೋಗುತ್ತೇನೆ. ನೀವೆಂದುದನ್ನು ಸೇನಾಪತಿಗೆ ಹೇಳಬಹುದೆ? " ಎಂದು ಕೇಳಿದ ಪಿಟರ್ಸ್.

" ತಮ್ಮ ಸೇನಾಪತಿಯೆಂಬ್ಬ ದೊಡ್ಡ ಕತ್ತೆ. ನನ್ನ ಮಾತು ಅಕ್ಷರಶಃ ಸತ್ಯವೆಂದು ಅವನಿಗೆ ಒಂದುದಿನ ಗೊತ್ತಾಗುವುದು."

ಯಾರೋ ಬಾಗಿಲನ್ನು ತಟ್ಟಿದರು ಬರ್ನಾರ್ಡ್ ಎದ್ದು ಹೋಗಿ ಕದವನ್ನು ತೆರೆದ. ಪೇದೆಯೊಬ್ಬ ಗುಣಗುಣನೆ ಏನೋ ಹೇಳಿ ಹೊರಟು ಹೋದ ಬಳಿಕ ಬರ್ನಾರ್ಡ್ ಪಿಟರ್ಸನಿಗೆ ಹೇಳಿದ: " ಇಷ್ಟು ದಿನಗಳ ಮೇಲೆ ನಿಜವಾಗಿ ಹುಲಿ ಎದ್ದಂತಾಯಿತು. ಇಂದು ಅಪರಾಹ್ನದಲ್ಲಿ ಶ್ರೀಮತಿ ಕಾರ್ಟರ್ ಅರಮನೆಯಿಂದ ಹೋಗುತ್ತಲಿದ್ದಾಗ ಒಂದು ತಸ್ಕರತಂಡ ಅವಳಿಗೆರಗಿತಂತೆ; ಅವಳ ಆಭರಣಗಳನ್ನು ಸುಲಿದುಕೊಂಡು ಹೋಯಿತಂತೆ; ಅವಳ ಬಂಡಿ ಮುರಿದು ಬಿದ್ದಿದೆಯಂತೆ."

ರಂಜನೆಗಾಗಿ ಬಂದಿದ್ದೀ. ಈಗ ಬೇರೆ ಯಾವ ವಿಷಯವನ್ನೂ ಮನಸ್ಸಿನಲ್ಲಿ ತರಬೇಡ. ಬೇಕಾದರೆ, ನಾಳೆ ಬೇಕಾದವರನ್ನು ದಂಡಿಸಿಕೋ."

"ನನಗೆ ಇಲ್ಲಿ ಬಂದುದಕ್ಕೆ ವ್ಯಸನವಾಗಿದೆಯೆಂದು ತಿಳಿಯಬೇಡಿರಿ ನನ್ನ ಕ್ಷೋಭಕ್ಕೆ ಕಾರಣ ತಮ್ಮ ಅಸ್ವಾಭಾವಿಕ ಗಾಂಭೀರ್ಯವೇ! ಇಂದೊಮ್ಮೆಲೆ ನನ್ನ ಮೇಲೆ ಇಷ್ಟು ನಿರ್ದಯವೇಕೆ ತಮಗೆ?"

"ನಾನೇನು ನಿರ್ದಯತೆ ತೋರಿಸಿದೆ ನಿನಗೆ?"

"ತಮ್ಮ ಇಂದಿನ ನಡತೆ ಕಠೋರವಲ್ಲವೆ? ನಾವಿಬ್ಬರು ಇಲ್ಲಿ ಊಟಕ್ಕೆ ಬಂದಿದ್ದೇವೆ; ನಮ್ಮ ಉಪಚಾರಕ್ಕಾಗಿ ಒಬ್ಬ ಪ್ರಾಣಿಯೂ ಇಲ್ಲ; ತಾವು ಚೆನ್ನಾಗಿ ಮಾತನಾಡಲಿಲ್ಲ, ಬಾಯಿ ಮುಚ್ಚಿಕೊಂಡೇ ಇದ್ದಿರಿ; ಬೇರೆ ಕಡೆಗೇ ಮೋರೆ ತಿರುವಿಕೊಂಡಿದ್ದಿರಿ. ತಮ್ಮ ಬಾಯಿಂದಲೇ ನಾನು ಯಾವಾಗಲೂ ನನ್ನಂಥ ಸುಂದರಿ ಈ ನಾಡಿನಲ್ಲಿಯೇ ಇಲ್ಲವೆಂದು ಕೇಳುತ್ತಿದ್ದೇನೆ. ಇನ್ನು ತಮ್ಮ ಅಂತರಂಗದ ಮಾತಾಗಿದ್ದರೆ ತಮ್ಮಿಂದ ನನಗೆ ನಿಜವಾಗಿ ಆದರ ದೊರೆಯುತ್ತಿತ್ತು."

"ಅದಕ್ಕಾಗಿ ನೊಂದುಕೊಳ್ಳಬೇಡ ಮೋರೀ. ಇಂದಿಷ್ಟಿಗೆ ಒಂದು ಮಹತ್ವದ ಮಾತನ್ನು ಹೇಳಲಿಕ್ಕೆ ನಿನ್ನನ್ನು ಕರೆದುಕೊಂಡು ಬಂದಿದ್ದೇನೆ. ನಿನಗೆ ಬೇರೆ ಕಡೆ ಹೋಗುವ ಅಗತ್ಯವಿತ್ತೆಂದು ನನಗೆ ಗೊತ್ತಾಗಲಿಲ್ಲ."

ಮೋರಿ ನಸುಮುನಿಸಿನಿಂದ ಮಾತನಾಡಿದಳು: "ಮಹತ್ವದ ಕೆಲಸದ ಪಟ್ಟಿಗೆ ಮಾತ್ರ ನಾನು, ಸರಸಸಲ್ಲಾಪಗಳಿಗೆ ಬೇರೆಯವರು! ಸೊಗಸು ಸೂರೆಗೊಳ್ಳುವುದಕ್ಕಾಗಿ ಲಂಡನ್ ಪ್ಯಾರಿಸುಗಳಲ್ಲಿ ಬಹಳ ದಿನ ಕಳೆದು ಬಂದಿರಿ. ಅಲ್ಲಿ ಒಳ್ಳೇ ಸುಖವಾಗಿದ್ದಿರೆಂದು ಪತ್ರಿಕೆಗಳಲ್ಲಿ ಓದಿದ್ದೇನೆ. ನಾನು ತಮ್ಮ ಮನಸಿಗೆ ಬಂದಿಲ್ಲವೇನೊ? ಬಂದಿದ್ದರೆ ನನ್ನನ್ನು ಬಿಟ್ಟು ದೇಶಾಂತರಕ್ಕೆ ಹೋಗುತ್ತಿರಲಿಲ್ಲ."

ನಗುಮೊಗದಿಂದ ಪಿಟರ್ಸ್ ಹೇಳಿದ: "ಮೋರೀ, ನನ್ನ ಮೇಲೆ ಮುನಿದುಕೊಳ್ಳಬೇಡ. ನೀನು ಪರಮಸುಂದರಿ ಎಂಬುದನ್ನು ಯಾವ ಹೊಸಪರಿಯಿಂದ ಹೇಳಲಿ? ನಿನ್ನ ನಯನಬಾಣ ಯಾರ ಎದೆಯಲ್ಲಿ ನಡುವುದೋ ಅವರು ತಲೆತಿರುಗಿ ಬೀಳುವುದು ಖಂಡಿತ. ಆದರೆ ಇತ್ತೀಚೆಗೆ

ನನ್ನ ಮನಸಿಗೇ ನೆಮ್ಮದಿಯಿಲ್ಲ. ವಿಶೇಷವಾಗಿ ರಾಜಧಾನಿಯ ಈಗಿನ ಪರಿಸ್ಥಿತಿಯಲ್ಲಿ ತೊಡಗುವುದು ಸರಿಯೆನಿಸುವುದಿಲ್ಲ."

"ಕಳೆದ ಪ್ರೇಮಯಲ್ಲಿ ವಾರ ಮಾತ್ರ ಪ್ರೇಮಲೀಲೆ ಸರಿಯೆನಿಸಿತ್ತು. ಆ ಮಾತು ಈಗೆಷ್ಟು ಹಳೆಯದು? ಇಷ್ಟರೊಳಗೇ ಪ್ರೇಮಲೀಲೆಯಲ್ಲಿ ತಮಗೆ ಬೇಸರು ಹುಟ್ಟಿತೆ? ನಾನೇನೂ ಈ ಮಾತನ್ನು ನಂಬಲಾರೆ. ನನ್ನಿಚ್ಛೆಯೆಂದರೆ...."

"ನಿನ್ನಿಚ್ಛೆಯೇನು?"

"ಏನು ಮಾಡಿದರೆ ತಮ್ಮ ಹೃದಯವನ್ನು ಪಡೆದೇನೆಂಬುದನ್ನು ತಿಳಿದುಕೊಳ್ಳುವ ಇಚ್ಛೆಯಿದೆ."

"ನಿನ್ನ ಆಕ್ಷೇಪ ಅಕಾರಣವೆಂದು ನಿಶ್ಚಯವಾಗಿ ನಂಬು. ನೀನು ನನ್ನ ಹೃದಯವನ್ನು ಪೂರಾ ಪಡೆದಿದ್ದೀ ಅಲ್ಲಿ ಬೇರೆ ಯಾರಿಗೂ ಎಡೆಯಿಲ್ಲ. ನೀನು ಕೇಳಿದ ಲಂಡನ್-ಪ್ಯಾರಿಸುಗಳಲ್ಲಿಯ ನನ್ನ ವಿಲಾಸದ ಸಂಗತಿಯೆಲ್ಲ ಕಟ್ಟುಕತೆ, ನಿಜವಲ್ಲ. ಜನ ತಿಳಿದುಕೊಂಡಂತೆ ನಾನು ಲಂಪಟನಲ್ಲ."

"ನಿಜ ನಿಜ. ತಾವು ಅತಿ ಸಾಧುಗಳು. ತಮ್ಮ ಚರಿತ್ರ ಅತಿ ನಿರ್ಮಲ. ಅಲ್ಲದಿದ್ದರೆ ತಾವೆಂದೂ ನನ್ನನ್ನು ಒದೆದು ನೂಕುತ್ತಿರಲಿಲ್ಲ. ನಾವಿಬ್ಬರೂ ಈ ಹೋಟೆಲಿನಲ್ಲಿ ಎಷ್ಟೋಸಲ ಏಕಾಂತವಾಗಿ ಉಂಡಿದ್ದೇವೆ; ತಾವೆಂದೂ ಪ್ರೀತಿಯಿಂದ ನನ್ನ ಹೆಗಲಮೇಲೆ ಕೈಹಾಕಿಲ್ಲ. ಆದರೆ ಬೇರೆ ಕಡೆ ತಾವಿಷ್ಟು ಅರಸಿಕರಾಗಿರುವುದಿಲ್ಲ!"

ಜಾನ್ ಪಿಟರ್ಸ್ ತನ್ನ ರಸಿಕತೆಯ ಪ್ರಮಾಣವೆಂದು ಮೇರಿಯ ಕೆನ್ನೆಗಳನ್ನಪ್ಪಿ ಚುಂಬಿಸಿದ. ಬಳಿಕ ಅನುನಯದಿಂದ ನುಡಿದ: "ನನ್ನ ಬಗ್ಗೆ ಕೇಳಿದ ಅಲ್ಲದ ಇಲ್ಲದ ವಿಷಯಗಳನ್ನೆಲ್ಲ ಮರೆತುಬಿಡು, ನನ್ನ ಮೇರಿ. ಸುಮ್ಮನೆ ಮನವನ್ನು ಕೆಡಿಸಿಕೊಂಡು ನೋಯಬೇಡ ನಾನು ಬರ್ಜಿಲಂಡಿನ ಯುವರಾಜನೆಂದೇ ಜನರಿಗೆ ನನ್ನ ಕಡ್ಡಿಯಷ್ಟು ತಪ್ಪು ಗುಡ್ಡದಷ್ಟಾಗಿ ಕಾಣುತ್ತದೆ. ದೇಶದ ಈಗಿನ ಸ್ಥಿತಿಯಲ್ಲಿ ನಾನು ಕೆಲವುದಿನ ವಿಲಾಸವನ್ನು ನಿಲ್ಲಿಸುವುದು ಲೇಸು."

ಹೋಟೆಲಿನ ಹಿಂಬಾಗಿಲಲ್ಲಿ ಮೇರಿಯ ಗಾಡಿ ಬಂದಿತು. ಅವಳು ಗುಪ್ತದ್ವಾರದಿಂದ ಪಿಟರ್ಸನೊಡನೆ ಹೊರಟಳು. ಅವರನ್ನು ಹೊರಗಿನ ಜನರು ಯಾರೂ ನೋಡದ ಹಾಗೆ ಹೋಟೆಲಿನ ಒಡೆಯ ಏರ್ಪಾಡು

ಮಾಡಿದ್ದ. ಆದರೂ ಆ ರಾತ್ರಿಯೇ ಊರೊಳಗಿನ ಎಲ್ಲ ಹೋಟೆಲುಗಳಲ್ಲಿ ಎಲ್ಲ ಜನರಿಗೂ ಯುವರಾಜನು ವ್ಹಾಯಿಟ ಥೇಟರಿನ ಸವಪ್ರೀಸ್ಸ್ ನಟಿ ಮೇರಿ-ಲಿ-ಮೋಜಾರಳೊಡನೆ ಹೋಟಲಿಗೆ ಬಂದದ್ದು ಹೇಗೋ ಗೊತ್ತಾಗಿ ಹೋಯಿತು.

ಅವರ ಬಂಡಿ ಜನಪೂರ್ಣವಾದ ರಾಜಪಥದಲ್ಲಿ ಸಾಗಿತ್ತು. ಪಿಟರ್ಸ್ ಮೇರಿ ಯಾರೂ ಏನೂ ಮಾತನಾಡಲಿಲ್ಲ. ಪಿಟರ್ಸ್ ಕಿಡಿಕಿಯೊಳಗಿಂದ ಅಡ್ಡಾಡುವ ಜನರನ್ನು ನೋಡುತ್ತಿದ್ದ. ಊರ ಮಂದಿಯೆಲ್ಲಾ ಅರಸುತನದ ವಿರುದ್ಧವಾಗಿಯೇ ತರ್ಕವಿತರ್ಕ ನಡೆಸಿರುವಂತೆ ಅವನಿಗೆನಿಸಿತು. ಎಲ್ಲರ ಮುಖಗಳಲ್ಲಿಯೂ ಅಶಾಂತಿಯ ಲಕ್ಷಣ ಕಾಣುತ್ತಿದ್ದಿತು ಎಲ್ಲರೂ ವ್ಯಾಕುಲರಾದಂತೆ, ಚಂಚಲರಾದಂತೆ ಇದ್ದರು. ಯಾರು ಯಾರೋ ತನ್ನ ಹೆಸರನ್ನೆತ್ತಿ ಏನೋ ಆಡಿಕೊಂಡಂತೆ ಕೇಳಿಸಿತು. ನಾಲ್ಕಾರು ಜನರು ತನ್ನ ಕಡೆ ನೋಡಿ ತಿರಸ್ಕಾರದಿಂದ ನಕ್ಕಂತಾಯಿತು ಪ್ರಜೆಗಳೆಲ್ಲರೂ ತಾನು ಸಿಂಹಾಸನಕ್ಕೆ ಅಯೋಗ್ಯನೆಂದು ಎಣಿಸಿರುವರೆಂದು ಅವನಿಗೆನಿಸಿತು. ಇದೆಲ್ಲವನ್ನೂ ಕಂಡು, ನೆನೆದು ಅವನ ಮುಖ ಚಿಂತಾಕುಲವಾಯಿತು; ಹಣೆಯಲ್ಲಿ ಬೆವರ ಹನಿಗಳು ಮೂಡಿದವು.

ಅದನ್ನು ಕಂಡು ಮೇರಿ ಪಿಟರ್ಸನ ಹೆಗಲಮೇಲೆ ಕೈಯಿಟ್ಟು, ವಿಚಾರಿಸಿದಳು: "ಇಂದು ಏನಾಗಿದೆ ತಮಗೆ? ಏಕೆ ಚಿಂತೆ ಮುಸುಕಿದಂತೆ ಕಾಣುತ್ತಿದ್ದೀರಿ?" ಬಳಿಕ ಅವಳು ಮೆಲ್ಲನೆ ಕೈಚೀಲವನ್ನು ತೆಗೆದು ಪಿಟರ್ಸನ ಕೈಯನ್ನು ಹಿಡಿದು ಕುಲುಕಿದಳು ಆ ಸುಕೋಮಲ ಸ್ಪರ್ಶದಿಂದ ಅವನು ಚಕಿತನಾದ. ಕೆಂಡವೇ ತಾಗಿತೇನೋ ಎಂಬಂತಿತ್ತು ಆ ಸೋಂಕು. ಅವನು ಅಚಲನಾದ. ಬಗೆಬಗೆಯ ವಿಪರೀತ ಭಾವಗಳ ಘಾತಪ್ರತಿಘಾತಗಳಿಂದ ಅವನ ಹೃದಯವು ಆಲೋಡಿತವಾಗತೊಡಗಿತು. ಲಜ್ಜೆಯಿಂದ ಮುಖ ಮರೆಸಿಕೊಳ್ಳಬೇಕೆನಿಸಿತು. ಹೆಣ್ಣಿನ ಸೋಂಕೇ ಅವನಿಗೆ ಅಸಹ್ಯವಾದುದೆಂದು ಭಾವನೆಯುಂಟಾಯಿತು. ಆದರದನ್ನು ಪಿಟರ್ಸ್ ತೋರಗೊಡಲಿಲ್ಲ.

ಮನೋಭಾವವನ್ನು ಬೈತಿಟ್ಟು ಕೋಮಲಸ್ವರದಲ್ಲಿ ಮಾತನಾಡಿದ: "ನನ್ನ ಚಿಂತೆಗೆ ಬೇಕಷ್ಟು ಕಾರಣಗಳಿವೆ. ಇಂದು ರಾತ್ರಿ ಆ ಚಿಂತೆ ನನ್ನನ್ನು ಹೆಚ್ಚಾಗಿ ಪೀಡಿಸುತ್ತಿದೆ. ನನ್ನ ದುಃಖವಿಷಾದಗಳ ವಿವರಣೆಯನ್ನು

ತಿಳಿಯಲು ನೀನು ಆಗ್ರಹ ಪಡಬೇಡ. ನನಗಾಗಿ ನೀನು ಚಿಂತಿಸಲೂಬೇಡ. ನನ್ನನ್ನು ಕುರಿತು ನಾಳೆ ಸಂಜೆಯ ಸಮಯದಲ್ಲಿ ಬೇಕಾದವರೊಡನೆ ಉಲಿದಾಡು, ನಲಿದಾಡು ಎಂದರೆ ಆನಂದವಾದೀತು.''

ಮೇರಿ ಮೆಲುದನಿಯಲ್ಲಿ ಉತ್ತರವಿತ್ತಳು: ‘‘ನಾನು ಯಾರೊಡನೆಯೂ ಕುಣಿಯಲಿಕ್ಕೊಲ್ಲೆ. ತಾವು ಥೇಟರಿಂಗೆ ಬರದಿದ್ದರೆ ನನಗೆ ಅಭಿನಯದಲ್ಲಿ ಉತ್ಸಾಹವೇ ಇರುವುದಿಲ್ಲ.”

“ಮೇರೀ, ನನಗೀಗ ಆಮೋದಪ್ರಮೋದದಲ್ಲಿ ಮನಸಿಲ್ಲ. ಅನಂತ ಚಿಂತೆಗಳಲ್ಲಿ ನನ್ನ ಹೃದಯ ಮುಳುಗಿದೆ. ದೇಶದ ಹಿತಾಪೇಕ್ಷೆಯುಳ್ಳ ಯಾವನಿಗೂ ಆಮೋದಕ್ಕೆ ಇದು ಸಮಯವಲ್ಲ. ವಿಶೇಷವಾಗಿ, ನನ್ನ ಚಿಂತೆಗಳು ಬಹುಪರಿಯಾಗಿವೆ.”

“ಚಿಂತೆಗೆ ಯಾವಳೋ ಹೆಂಗುಸು ಕಾರಣವಿರಬೇಕಷ್ಟೆ?”

“ನಿನ್ನ ಅನುಮಾನವೇನೂ ಸುಳ್ಳಲ್ಲ. ಲಂಡನಿನಲ್ಲಿ ಒಬ್ಬಳ ಪರಿಚಯವಾಗಿದ್ದಿತು. ಆದರೆ ಆಕೆ ನನಗೆ ಪ್ರಸನ್ನಳಾಗಿರಲಿಲ್ಲ.”

“ಯಾರಾಕೆ? ತಮ್ಮನ್ನು ಸಂತುಷ್ಟಗೊಳಿಸಲು ಒಲ್ಲದವಳು ಮಹಾಮೂರ್ಖಳೇ ಸರಿ.”

ಮತ್ತೆ ಇಬ್ಬರೂ ಮೌನತಳೆದರು. ನಿರ್ಜನವಾದ ಒಂದು ಓಣಿಯಲ್ಲಿ ದೊಡ್ಡ ಕಟ್ಟಡದ ಮುಂದೆ ಬಂಡಿ ನಿಂತಿತು. ಇಬ್ಬರೂ ಇಳಿದು ವಿದ್ಯುತ್ತಿನ ತೊಟ್ಟಿಲನ್ನೇರಿ ನಾಲ್ಕನೆಯ ನೆಲೆಗೆ ಹೋದರು. ಅಲ್ಲಿ ಮೇರಿಯ ಮನೆ. ಅವಳು ತನ್ನ ಮನೆಯೊಳಗೆ ಪ್ರವೇಶಿಸಿ ದೀಪಹಚ್ಚಿದಳು. ಆಗ ಪಿಟರ್ಸ್ ಅವಳಿಗೆಂದ: “ನೀನು ನಿನ್ನ ಮಲಗುವ ಕೋಣೆಗೆ ಹೋಗು. ನಾನಿಲ್ಲಿ ಬಂದದ್ದು ಯಾರಿಗೂ ತಿಳಿಯಕೂಡದು, ಈಕಡೆ ಯಾರನ್ನೂ ಬರಗೊಡಬೇಡ.”

ಅವನ ಕೈಯನ್ನು ಹಿಡಿದು ಮೇರಿಯೆಂದಳು: “ತಮಗೆ ಆಗಿದೆಯಾದರೂ ಏನು? ಲಂಡನಿನ ಆ ಬೋಕಾಣಿ ಮಾಟಮಾಡಿ ತಲೆಕೆಡಿಸಿದ್ದಾಳೇನೋ!”

ಮೇರಿ ಬೇರೆ ಕೋಣೆಗೆ ಹೊರಟುಹೋದಳು. ಪಿಟರ್ಸ್ ಕೋಣೆಯ ಮುಂಬಾಗಿಲನ್ನು ಮುಚ್ಚಿ ಒಂದು ಗುಪ್ತದ್ವಾರವನ್ನು ತೆರೆದ. ಸೋಪಾನ

ಶ್ರೇಣಿಯನ್ನು ಅತಿಕ್ರಮಿಸಿ, ಬೇರೊಂದು ಕೋಣೆಯನ್ನು ಹೊಕ್ಕ. ಅದೊಂದು ವಿರಾಮದ ಕೊಟಡಿ. ಅಂದವಾಗಿ ಸಜ್ಜಿತವಾಗಿತ್ತು. ಅಲ್ಲೊಂದು ಕಪ್ಪು ದೊಡ್ಡ ಮೇಜಿತ್ತು ; ನಾಲ್ಕು ಕುರ್ಚಿಗಳಿದ್ದವು.

೧೧

ಸ್ವಲ್ಪಹೊತ್ತಿನಲ್ಲಿ ಯಾರೋ ಕೋಣೆಯ ಕದವನ್ನು ಮೆಲ್ಲಗೆ ಬಡಿದರು. ಪಿಟರ್ಸ್ ಎದ್ದು ಹೋಗಿ ಬಾಗಿಲನ್ನು ತೆರೆದು ಪುನಃ ಬಂದು ಕುರ್ಚಿಯಲ್ಲಿ ಕುಳಿತ. ಮೂವರು ಸದ್ಗೃಹಸ್ಥರು ಒಳಗೆ ಬಂದರು. ಈಗ ಪಿಟರ್ಸ್ ಪಿಟರ್ಸಾಗಿರಲಿಲ್ಲ. ಮೊಗವಾಡವನ್ನು ಧರಿಸಿ ವೇಷವನ್ನು ಬದಲಿಸಿದ್ದ. ಎಲ್ಲ ದೀವಿಗೆಗಳನ್ನು ನಂದಿಸಲಾಗಿತ್ತು. ಒಂದೇ ಮಂದವಾದ ದೀಪ ಉರಿಯುತ್ತಲಿತ್ತು. ಪಿಟರ್ಸ್ ಕುಳಿತ ಸ್ಥಳದಲ್ಲಿ ಅದರ ಬೆಳಕು ಬಿದ್ದಿರಲಿಲ್ಲ.

ಬಂದ ಮೂವರಲ್ಲಿ ಒಬ್ಬ ಉದ್ದವಾದ ಕರಿಯ ಗಡ್ಡದವನು ಲೆಪ್ಟಿಟಾ, 'ರಿಪಬ್ಲಿಕನ್ ಟಾಯಿಮ್ಸಿ'ನ ಸಂಪಾದಕ. ಒಬ್ಬ ಹೈಟನ್ –ಆತನ ಕೂದಲು ಗಡ್ಡಮೀಸೆಗಳೆಲ್ಲ ಹಣ್ಣಾಗಿದ್ದವು,– ಅಲ್ಲಿಯ ಒಂದು ಕಾಲೇಜಿನ ಪ್ರಾಧ್ಯಾಪಕ ; ಇನ್ನೊಬ್ಬ ಫ್ರನ್ಸಿಸ್ ಗ್ರಾಮೊ, ವಕೀಲ, ರಾಜಕೀಯ ಚಳವಳಿಗಾರ, ಬರ್ಗಿಲಂಡ್ ಪಾರ್ಲಿಮೆಂಟಿನ ವಿಖ್ಯಾತ ಸದಸ್ಯ. ಗ್ರಾಮೋ ಪ್ರಾಚೀನ ವಂಶದಲ್ಲಿ ಹುಟ್ಟಿದವನಾಗಿಯೂ ಸಾಧಾರಣ ತಂತ್ರದ ಪಕ್ಷಪಾತಿ, ಅಸಾಧಾರಣ ಭಾಷಣಕಾರನೆಂದು ಅವನ ಖ್ಯಾತಿ. ನಾಡಿನಲ್ಲಿ ರಾಜತಂತ್ರವು ಕೊನೆಗೊಂಡು, ಸಾಧಾರಣತಂತ್ರವು ನೆಲೆಗೊಂಡರೆ ಮೊದಲ ಅಧ್ಯಕ್ಷ ಪದವಿಗೆ ಈತನೇ ತಕ್ಕವರ ಎಂದೆಲ್ಲರೂ ತಿಳಿದಿದ್ದರು. ಅವನ ದಿಟ್ಟತನದ ಸ್ವಾತಂತ್ರ್ಯವಾದದಿಂದಾಗಿ ದೊರೆಯೂ ದೊರೆಯ ಸಂಗಡವವರೂ ಅವನನ್ನು ಒಗರುಗಣ್ಣಿನಿಂದ ನೋಡುತ್ತಿದ್ದರೂ ಅವನು ಜನರಲ್ಲಿ ಸ್ವಾತಂತ್ರ್ಯಪ್ರಿಯ ತೇಜಸ್ವೀವ್ಯಕ್ತಿಯೆಂದು ಗೌರವವನ್ನು ಪಡೆದಿದ್ದ.

ಜಾನ್ ಪಿಟರ್ಸ್ ತನ್ನ ಕಂಠಸರವನ್ನು ಬದಲಿಸಿ ಮಾತನಾಡಿದ : " ಸಾಧಾರಣ ತಂತ್ರವಾದಿಗಳ ಕೊನೆಯ ಸಭೆಗೆ ಪೂರ್ವಭಾವಿಯಾದ ವರದಿ ನನ್ನ ಕೈಸೇರಿದೆ. ಆದರ ಬಗೆಗೆ ಮಾತನಾಡಲು ತಮ್ಮನ್ನು ಕರೆದದ್ದು.

ವರದಿಯನ್ನು ಓದಿದರೆ ಸಭೆಯ ಅನೇಕ ಸದಸ್ಯರು ಅತ್ಯಂತ ಅಸಂತುಷ್ಟರಾಗಿರುವರೆಂದು ತೋರುತ್ತದೆ. ಅದಕ್ಕೇನು ಕಾರಣ ?"

ಈಗ ಪಿಟರ್ಸ ಪಿಟರ್ಸ್‌ಲ್ಲ ಸಾಧಾರಣ ತಂತ್ರವಾದಿಗಳ ನಾಯಕ ತಮ್ಮ ನಾಯಕನಾಗಿದ್ದರೂ ದಳದವರು ಯಾರೂ– ಗಣ್ಯಮಾನ್ಯ ವ್ಯಕ್ತಿಗಳು ಕೂಡ– ಅವನು ಯಾರು ಎಂತಹನೆಂದು ಅರಿಯರು. ಅವನು ಯಾವಾಗಲೂ ಮೊಗವಾಡ ಹಾಕಿಕೊಂಡು ಬದಲು ಧ್ವನಿಯಿಂದಲೇ ಮಾತನಾಡುತ್ತಿದ್ದ.

ಲೆವ್ವಿಟ್ ಹೇಳಿದ : "ಈ ಅಸಂತೋಷಕ್ಕೆ ಕಾರಣವೆಂದರೆ, ನಮ್ಮ ಸಭೆಯ ತರುಣಸದಸ್ಯರೆಲ್ಲರೂ ಕೊಂಚವೂ ತಡವಿಲ್ಲದೆ ಕೂಡಲೆ ಕೆಲಸವನ್ನಾರಂಭಿಸುವ ಸಮಯ ಈಗ ಬಂದಿದೆ ಎಂದು ನಂಬಿದ್ದಾರೆ. ಹುಮ್ಮಸದಿಂದ ಮುನ್ನುಗ್ಗಲು ಒಪ್ಪಿಗೆಯನ್ನು ಕಾಯ್ದಿದ್ದಾರೆ. ದೇಶದ ಜನವೆಲ್ಲವೂ ರಾಜನ ಬಗ್ಗೆ ಅಸಂತುಷ್ಟವಾಗಿದೆ; ಸದ್ಯದ ಸರಕಾರದ ಮೇಲೆ ಕತ್ತಿ ಮಸೆದಿದೆ. ಮುದುಕ ದೊರೆ ದಿನದಿನಕ್ಕೂ ಹೆಚ್ಚು ದುರಾಚಾರಿಯಾಗುತ್ತಿದ್ದಾನೆ; ಯುವರಾಜನು ಯಾವಾಗಲೂ ಮದ್ಯಮಹಿಳೆಯರಲ್ಲಿಯೇ ಮತ್ತನಾಗಿರುತ್ತಾನೆ; ದೇಶದ ಶಾಸನಪ್ರಣಾಲಿಯನ್ನು ಪರಿವರ್ತಿಸಿ, ಹೊಸ ಸರಕಾರವನ್ನು ಸ್ಥಾಪಿಸಬೇಕೆಂಬ ತಮ್ಮ ಗೊತ್ತುವಳಿಗೆ ಎಲ್ಲರೂ ಬೆಂಬಲವಿತ್ತಿದ್ದಾರೆ. ಈ ವಿಷಯದಲ್ಲಿ ಎಲ್ಲ ಸದಸ್ಯರಿಗೂ ಅಷ್ಟೇ ಉತ್ಸಾಹ. ದೇಶದ ನಾನಾಕಡೆಗಳಿಂದ ಇದಕ್ಕೆ ಅನುಮೋದನೆ ದೊರೆತಿದೆ. ವಿಪ್ಲವಕ್ಕೆ ಇದೀಗ ಸುಯೋಗ ಒದಗಿದೆಯೆಂದು ಬಹುಜನರು ದೃಢವಾಗಿ ನಂಬಿದ್ದಾರೆ. ಆದುದರಿಂದ ಇನ್ನು ಯಾರನ್ನೂ ತಡೆದು ನಿಲ್ಲಿಸುವುದು ನಮಗೆ ದುಃಸಾಧ್ಯವಾಗಿ ಬಿಟ್ಟಿದೆ; ಎಲ್ಲರೂ ಅತ್ಯಂತ ಉತ್ತೇಜಿತರಾಗಿ ಹೂಂಕರಿಸುತ್ತಿದ್ದಾರೆ. ಶೀಘ್ರವೇ ದೊರೆಯನ್ನು ಗದ್ದುಗೆಯಿಂದ ಇಳಿಸಲು ಅವರು ಹಟಹಿಡಿದಿದ್ದಾರೆ."

"ಅವರು ಹಿಡಿಯಬೇಕೆನ್ನುವ ದಾರಿ ಯಾವುದು ?" ಸಭಾಪತಿ ಪಿಟರ್ಸ್ ಕೇಳಿದ.

ಗ್ರಾಮೋ ಹೇಳಿದ : "ದಾರಿ ಎರಡಿಲ್ಲ, ಒಂದೇ. ವಿಶ್ವದಲ್ಲಿ ಯಾವ ಯಾವ ಜನಾಂಗಗಳು ಸ್ವಾತಂತ್ರ್ಯವನ್ನು ಗಳಿಸಿವೆಯೋ, ಎಲ್ಲವೂ ಕತ್ತಿಯ ಸಹಾಯದಿಂದಲೆ ಪಡೆದಿವೆ. ನಾವೂ ಅದನ್ನೇ ಅವಲಂಬಿಸಬೇಕಾಗು

ವುದು; ರಾಜ-ಯುವರಾಜರನ್ನು ಕೊಲ್ಲಬೇಕಾಗುವುದು. ನರಹತ್ಯೆಯಲ್ಲಿ ನಮಗೆ ಮನಸಿಲ್ಲ; ಆದರೆ ಅನಿವಾರ್ಯವಾಗಿ ಕರ್ತವ್ಯವೆಂದು ಮಾಡ-ಬೇಕಾಗುವುದು."

ಪಿಟರ್ಸ್ ಪ್ರಶ್ನಿಸಿದ: "ಅರಮನೆಯಲ್ಲಿ ನೆತ್ತರನ್ನು ಹರಿಸಿದರೆ ಪರಿಣಾಮವೇನಾದೀತೆಂದು ಯೋಚಿಸಿರುವಿರಾ? ರಾಜನನ್ನೂ ರಾಜಪರಿ-ವಾರವನ್ನೂ ಕೊಂದರೆ ಯುರೋಪಿನ ಇತರ ರಾಷ್ಟ್ರಗಳು ನಮ್ಮ ಸಂಬಂಧ ವನ್ನು ಕಡಿದು ಕೊಂಡಾವು. ಇದ್ದ ಗೆಳೆಯರೂ ಹಗೆಗಳಾದಾರು; ಯುರೋಪಿನಲ್ಲಿ ನಾವು ಏಕಾಕಿ ಯಾದೇವು."

ಗ್ರಾಮೋ ಎಂದ: "ತಮ್ಮ ಗ್ರಹಿಕೆ ಹೀಗಿದೆಯೇನು? ಈ ಕೊಲೆಯನ್ನು ವಿಧಿಪೂರ್ವಕವಾಗಿ ಸಮರ್ಥಿಸುವುದು ಅಸಂಭವವೆಂದು ನಾವೂ ಬಲ್ಲೆವು. ಪ್ರಕಾಶ್ಯವಾಗಿ ನಾವೂ ಸಮರ್ಥಿಸುವುದಿಲ್ಲ. ಸಾರ್ವಜನಿಕ ಸಭೆಗಳಲ್ಲಿ ಆ ಬಗ್ಗೆ ದುಃಖವನ್ನು ವ್ಯಕ್ತಗೊಳಿಸುವೆವು; ಕೊಲೆಗಾರನು ಸಿಕ್ಕರೆ ತಕ್ಕ ಶಿಕ್ಷೆಯನ್ನೂ ವಿಧಿಸುವೆವು. ಅತ್ತ ನಮ್ಮ ಹೊಸ ರಾಜ್ಯಘಟನೆ ಯಥಾಯೋಗ್ಯರೀತಿಯಲ್ಲಿಯೆ ಪ್ರತಿಷ್ಠಿತವಾಗುವುದು. ಈ ಸ್ಥಿತಿಯಲ್ಲಿ ನಮ್ಮ ತಪ್ಪನ್ನು ಹೊರಗೆಳೆಯುವವರು ಯಾರು?"

ಪಿಟರ್ಸ್ ಹೇಳಿದ: "ರಾಜ-ಯುವರಾಜರು ಇಲ್ಲವಾದ ಬಳಿಕ ಐದಾರು ಜನ ರಾಜವಂಶೀಯರು ಸಿಂಹಾಸನದ ಅಧಿಕಾರಿ ನಾನು ತಾನೆಂದು ವಾದಿಸಬಹುದು,– ಮರೆಯಬೇಡಿರಿ. ಯುರೋಪಿನ ರಾಷ್ಟ್ರಗಳು ಅವರಲ್ಲಿ ಯಾರೊಬ್ಬರ ಬೆನ್ನು ಕಟ್ಟಬಹುದು. ಆಗ ನಾವು ಯಾವುದೊಂದು ಪ್ರಬಲ ರಾಜಶಕ್ತಿಯ ಬೊಂಬೆಗಳಾಗಬೇಕಾದೀತು. ಎಲ್ಲವನ್ನೂ ಯೋಚಿಸಿರುವಿರಾ?"

"ಹಾಗಾದರೆ ತಮ್ಮ ಸೂಚನೆಯೇನು?" ಗ್ರಾಮೋ ಕೇಳಿದ.

ಅದಕ್ಕೆ ದಳಪತಿ ಪಿಟರ್ಸ್ ದೃಢಸ್ವರದಲ್ಲಿ ಉತ್ತರವಿತ್ತ: "ರಕ್ತಪಾತ ವಿಲ್ಲದೆ ಶಾಸನಪದ್ಧತಿ ಬದಲಾಗಬೇಕೆಂದು ನನ್ನಿಚ್ಛೆ. ಪಾರ್ಲಿಮೆಂಟಿನ ಬಹುಸಂಖ್ಯ ಸದಸ್ಯರು ನಮ್ಮ ಕಡೆಗಿದ್ದಾರೆ. ರಾಜನು ಪಾರ್ಲಿಮೆಂಟನ್ನು ವಿಸರ್ಜಿಸಲು ಪ್ರಯತ್ನಪಟ್ಟರೂ ಒಂದು ತಿಂಗಳೊಳಗೆ ಅದು ಸಾಧ್ಯವಿಲ್ಲ. ಐದೇ ನಿಮಿಷಗಳಲ್ಲಿ ನಾವು ನಮ್ಮ ಹೊಸಘಟನೆಗೆ ಪಾರ್ಲಿಮೆಂಟಿನ ಸಮ್ಮತಿ ಪಡೆಯಬಹುದು. ಆಮೇಲೆ ರಾಜನಿಗೆ ಸಿಂಹಾಸನವನ್ನು ಬಿಡುವಂತೆ ವಿಧಿಸಿ

ಬಿಟ್ಟರಾಯಿತು. ಅದರಂತೆ ನಡೆಯದೆ ಮಂಗಲವಿಲ್ಲವೆಂದರಿತು ರಾಜನು ದೇಶಾಂತರಕ್ಕೆ ಹೊರಟುಹೋಗುವನು.''

" ಅದು ನಿಜ. ಆದರೆ ಯುವರಾಜನನ್ನು ತಳ್ಳುವುದು ಹೇಗೆ? ಯುವ ರಾಜನಲ್ಲಿ ದೋಷಗಳೇನೇ ಇರಲಿ, ಅವನು ಹೇಡಿಯಲ್ಲ. ಅವನು ಸೈನ್ಯದ ಸಹಾಯವನ್ನು ಪಡೆದರೆ ನಮ್ಮ ಕಾರ್ಯ ಸಫಲವಾದೀತೆ?" ಗ್ರಾನೊ ಕೇಳಿದ.

'' ಯುವರಾಜನು ನಮಗೆ ಯಾವ ವಿಘ್ನವನ್ನೂ ತರಲಾರನೆಂದು ನನ್ನ ಗ್ರಹಿಕೆ. ಕೆಲಕಾಲ ಅವನನ್ನು ತಡೆದಿಡುವ ಹೊಣೆಯನ್ನು ನಾನು ಹೊರುತ್ತೇನೆ. ಈ ದೇಶದ ಇತಿಹಾಸದಲ್ಲಿ ನಾವು ಅಭಿನವ ಕೀರ್ತಿಯನ್ನು ಪ್ರಸ್ಥಾಪಿಸಲು ಹೊರಟಿದ್ದೇವೆ; ಅದರ ಹೊಣೆಯೆಲ್ಲ ನಮ್ಮ ಮೇಲಿವೆಯೆಂಬು ದನ್ನು ಮರೆಯುವಂತಿಲ್ಲ. ನಾವು ತಪ್ಪುತಡೆ ಮಾಡಿದರೆ ಮುಂದಿನ ಪೀಳಿಗೆ ಕ್ಷಮಿಸಲಾರದು, ಅದು ನಮ್ಮನ್ನು ಶಪಿಸುವುದು. ನಾವು ದಕ್ಷತೆಯಿಂದ ಸರಿಯಾಗಿ ಕೆಲಸವನ್ನು ಸಾಧಿಸಿಕೊಂಡರೆ ಮುಂದಿನವರ ಭಕ್ತಿಶ್ರದ್ಧೆಗಳಿಗೆ ಪಾತ್ರರಾಗುವೆವು. ನಮ್ಮಿಂದ ಇತಿಹಾಸವು ಕಲಂಕಿತವಾಗಬಾರದು. ನಮ್ಮ ಸಂಕಲ್ಪ ಪಥವನ್ನು ನಾವು ಒಳ್ಳೇ ಜೋಕೆಯಿಂದ ನಡೆಯಬೇಕು.''

ಪ್ರಾಧ್ಯಾಪಕ ಹೈಟನ್ ಈಗ ಮಾತನಾಡಿದ: '' ಸಭಾಪತಿ ಮಹಾ ಶಯರು ಹೇಳಿದ್ದು ಅತ್ಯಂತ ಸಮಂಜಸವಾದ ಮಾತು; ವಿಚಾರವಂತರಾಡುವ ಮಾತು ನರಹತ್ಯೆಗೆ ಬಿಂದುಮಾತ್ರವೂ ನನ್ನ ಸಹಾನುಭೂತಿಯಿಲ್ಲ; ಅತ್ಯಾ ಚಾರ-ಹಿಂಸೆಗಳನ್ನು ನಾನು ವಿರೋಧಿಸುತ್ತೇನೆ. ಯಾರ ಮೇಲೂ ಅತ್ಯಾ ಚಾರವನ್ನೆಸಗದೆ ನಾವು ನಮ್ಮ ಗುರಿಯನ್ನು ಮುಟ್ಟಬೇಕೆಂದು ನಾನೆನ್ನುತ್ತೇನೆ."

ಗ್ರಾನೊ ಹೇಳಿದ: '' ಈ ಮಾತು ನನಗೂ ಸಮ್ಮತ. ಆದರೆ ಜನ ಸಾಮಾನ್ಯರನ್ನು ಶಾಂತವಾಗಿರಿಸಲಾದೀತೋ ಇಲ್ಲವೋ ಎಂಬ ಸಂದೇಹ. ಇಷ್ಟರಲ್ಲಿಯೆ ಅವರು ದೊರೆಯ ಒಬ್ಬ ಉಪಪತ್ನಿಯ ಬಂಡಿಯನ್ನು ಮುರಿದು ಅವಳ ಆಭರಣಗಳನ್ನು ಅಪಹರಿಸಿದ್ದಾರೆ. ಅಲ್ಲದೆ ದಿನದಿನಕ್ಕೂ ಅವರ ಸ್ವೈರಣೆ ಸಡಿಲುತ್ತಿದೆ. ಅವರನ್ನು ತಡೆಯಬಲ್ಲ ಶಕ್ತಿಶಾಲಿ ಯಾರೂ ಇಲ್ಲ. ಇನ್ನು ಮೇಲೆ ಅವರನ್ನು ನಿಯಂತ್ರಿಸುವುದು ಇನ್ನೂ ಕಠಿನವಾಗುವುದು.''

"ರಾಜ ಮುದುಕ ಅವನನ್ನು ಕೊಂದರೆ ಯಾರ ಸಹಾನುಭೂತಿಯೂ ನಮಗೆ ದೊರೆಯಲಾರದು. ನಮ್ಮ ಉದ್ದೇಶವೇ ವ್ಯರ್ಥವಾಗಬಹುದು. ಆದುದರಿಂದ ರಾಜವಧೆಯನ್ನು ನಾನು ಒಪ್ಪಲಾರೆ. ಆ ಕೆಲಸಕ್ಕೆ ತಾವೆಂದಿಗೂ ಕೈಹಾಕಕೂಡದು." ಎಂದ ದಳಪತಿ.

ಅವನ ಮಾತನ್ನು ಕೇಳಿ ಮೂವರೂ ಎಷ್ಟೋ ಹೊತ್ತು ನೀರವವಾಗಿ ಕುಳಿತರು. ಅವರ ಮೊಗಗಳಲ್ಲಿ ಉತ್ಕಂಠೆ ಮೂಡಿದ್ದಿತು. ದಲಪತಿ ಮಾತ್ರ ಪೂರಾ ಅಚಂಚಲನಾಗಿದ್ದ. ದಲಪತಿಯ ಸಂಕಲ್ಪ ಬದಲಾಗುವ ಸಂಭವ ವಿಲ್ಲವೆಂದು ಅವರಿಗೆನಿಸಿತು. ಕೊನೆಗೆ ಗ್ರಾವೋ ನೀರವತೆಯನ್ನು ಮುರಿದ : "ಮಹಾಶಯರೆ, ನಾವೆಲ್ಲರೂ ತಮ್ಮನ್ನು ರಾಜದ್ರೋಹೀದಲದ ನಾಯಕ ರೆಂದು ಪರಿಗ್ರಹಿಸಿದ್ದೇವೆ. ತಮ್ಮ ಅದ್ಭುತ ಯುಕ್ತಿಪೂರ್ಣವಾದ ಶಸ್ತ್ರವನ್ನೇದಿ ನಾವು ಹುರುಪಿನಿಂದ ಈ ಕಾರ್ಯದಲ್ಲಿ ತೊಡಗಿದ್ದೇವೆ. ತಮ್ಮ ಮಾರ್ಗ ದರ್ಶನ ಅತ್ಯಂತ ಉಪಯುಕ್ತವಾಗಿದೆ. ಈವರೆಗೆ ನಾವು ತಮ್ಮ ಮಾತನ್ನೆಂದೂ ಅಲ್ಲಗಳೆದಿಲ್ಲ. ತಾವು ಯಾರೆಂಬುದನ್ನೂ ನಾವರಿಯೆವು; ನಮ್ಮೊಂದಿಗಿದ್ದಾಗ ತಾವು ಯಾವಾಗಲೂ ಛದ್ಮವೇಷದಲ್ಲಿರುತ್ತೀರಿ; ನಾವದನ್ನು ಆಕ್ಷೇಪಿಸಿಯೂ ಇಲ್ಲ. ತಾವು ಯಾರು, ಏತಕ್ಕಾಗಿ ಹೀಗೆ ವಿಚಿತ್ರವಾಗಿ ವ್ಯವಹರಿಸುತ್ತಿರುವಿರಿ ಎಂಬುದನ್ನರಿಯಲು ಕುತೂಹಲವನ್ನೂ ತೋರಿಲ್ಲ. ಜನತೆಯ ನೇತೃತ್ವವನ್ನು ವಹಿಸಲು ದೇವರೇ ತಮ್ಮನ್ನು ಕಳಿಸಿರುವನೆಂದು ಭಾವಿಸಿದ್ದೇವೆ ಸಾಧಾರಣ ಸಭೆಯಲ್ಲಿ ಎಲ್ಲರೊಪ್ಪಿದ ನಿರ್ಣಯವನ್ನು ಕೂಡ—ಅದು ತಮಗೆ ಅಸಮ್ಮತವಾದ ಪಕ್ಷದಲ್ಲಿ—ನಿರಾಕರಿಸಿ ತಮ್ಮ ಮಾತನ್ನೇ ಶ್ರದ್ಧೆಯಿಂದ ಸಮರ್ಥಿಸಿದ್ದೇವೆ. ಎಲ್ಲ ವಿಷಯಗಳಲ್ಲಿಯೂ ತಮ್ಮ ಪ್ರಭುತ್ವವನ್ನು ಅಕ್ಷುಣ್ಣವಾಗಿರಿಸಿದ್ದೇವೆ. ಇದು ಯಾವುವನ್ನೂ ತಾವು ಕೂಡ ಅಲ್ಲಗಳೆಯಲಾರಿರಿ. ಈಗಿನ ದಾರುಣ ಸಮಸ್ಯೆ ಯಲ್ಲಿಯೂ ತಮ್ಮನ್ನೇ ಅವಲಂಬಿಸಿಕೊಂಡಿರುವೆವೆಂದೂ ನಂಬಬೇಕು"

"ಸರಿ, ಇನ್ನೇನಾದರೂ ಹೇಳುವುದಿದ್ದರೆ ಹೇಳಿರಿ." ಎಂದ ಪಿಟರ್ಸ್.

ಗ್ರಾವೋ ಹೇಳಿದ: "ನಮ್ಮ ರಾಜದ್ರೋಹೀ ದಳಕ್ಕೆ ಆತ್ಮಶಕ್ತಿಯಲ್ಲಿ ಸಂಪೂರ್ಣ ವಿಶ್ವಾಸವಿದೆ; ನಮ್ಮ ಸಂಖ್ಯೆಯೂ ವಿಪುಲಪರಿಮಾಣದಲ್ಲಿ ಹೆಚ್ಚಿದೆ. ನಾಡಿನಲ್ಲಿಯ ಸುಶಿಕ್ಷಿತರು, ವಿಚಕ್ಷಣರು ಎಲ್ಲರೂ ನಮ್ಮೊಡನೆ ಸೇರಿದ್ದಾರೆ.

ನಮ್ಮ ಕಾರ್ಯಪ್ರಣಾಲಿಯಲ್ಲಿ ಕೊಂಚವೂ ನ್ಯೂನತೆಯಿಲ್ಲ. ನಾವೇ ಈ ರಾಜ್ಯದ ನಿಯಂತೃಗಳೆಂದರೂ ಅತ್ಯುಕ್ತಿಯಾಗಲಿಕ್ಕಿಲ್ಲ. ನಮ್ಮ ಉದ್ದೇಶದ ಮಾರ್ಗದಲ್ಲಿ ನಾವೀಗ ಬಹೂದೂರ ಮುಂದುವರಿದಿದ್ದೇವೆ. ರಾಜ್ಯದಾಡಳಿತದ ಎಲ್ಲ ಭಾರವನ್ನು ಕೈಕೊಳ್ಳಲುದ್ಯುಕ್ತರಾಗಿದ್ದೇವೆ. ಕಡಲಿನ ಹೆದ್ದೆರೆಗಳು ನಾಡನ್ನು ಆವರಿಸಲು ಮುನ್ನುಗ್ಗುತ್ತಲಿವೆ. ಎಷ್ಟು ಪ್ರಯತ್ನಪಟ್ಟರೂ ತಾವ ದರ ಏರಾಟವನ್ನು ತಡೆಯಲಾರಿರಿ. ತಾವು ನಮ್ಮ ದಳಪತಿ; ತಮ್ಮ ಅಪ್ಪಣೆ ಯಂತೆಯೆ ನಾವು ನಡೆಯುವೆವು; ತಮ್ಮ ಅಪ್ಪಣೆಯ ಹೊರತು ಕಾರ್ಯ ಮಾಡುವ ಶಕ್ತಿ ನಮಗಿಲ್ಲ. ಆದರಂತೆ ಇಷ್ಟು ದೂರ ಮುಂಬರಿದು ಈಗ ನಿಶ್ಚೇಷ್ಟರಾಗಿ ಕುಳಿತುಕೊಳ್ಳುವುದು ಅಸಾಧ್ಯವೆಂಬುದೂ ಸತ್ಯ ''

ಪಿಟರ್ಸ್ ಹೇಳಿದ: '' ಅರಸು ಸತ್ತ ಬಳಿಕ ನಿಧಾನವಾಗಿ ಶಾಸನ ಪದ್ಧತಿಯನ್ನು ಬದಲಿಸಿಕೊಳ್ಳಬೇಕೆಂದು ನನ್ನಿಚ್ಛೆಯಿತ್ತು. ಅರಸನಿಗೆ ವಯ ಸ್ಸಾಗಿದೆ, ಅವನ ಆರೋಗ್ಯವೂ ಕೆಟ್ಟಿದೆ, ಅವನು ಹೆಚ್ಚು ಸಮಯ ಬದು ಕಿರಲಾರ: ಅವನ ಮೃತ್ಯುವಿನ ತರುವಾಯ ನಮ್ಮ ಸಂಕಲ್ಪ ಸಿದ್ಧಿಸುವುದು ಕಠಿನವಲ್ಲ ಎಂದು ಬಗೆದಿದ್ದೆ. ಆದರೆ ತಾವು ಅಷ್ಟು ದಿನ ತಡೆಯಲು ಸಿದ್ಧರಿ ರಿಲ್ಲವೆಂದು ತೋರುತ್ತಿದೆ. ಈಗ ತಾವೇನು ನಿರ್ಧರಿಸಿದ್ದೀರಿ ? ''

'' ನಾವು ಅರಮನೆಗೆ ಮುತ್ತಿಗೆ ಹಾಕಬೇಕೆಂದಿದ್ದೇವೆ. ರಾಜನೂ ಯುವರಾಜನೂ ಓಡಿಹೋದರೆ ನೆಟ್ಟಗೆ, ಇಲ್ಲದಿದ್ದರೆ ಅವರ ಹಣೆಯಲ್ಲಿ ಬರೆ ದಂತೆ ಆಗುವುದು. ಆಗಬಾರದ್ದು ಆದರೆ ಅದಕ್ಕೆ ಅವರೇ ಹೊಣೆ '' ಎಂದು ಗ್ರಾವೋ ಹೇಳಿದ.

'' ತಾವು ಹೇಳಿದಂತೆ, ಯುವರಾಜನ ವಿಷಯದಲ್ಲಿ ನನ್ನ ಅಡ್ಡಿಯೇನೂ ಇಲ್ಲ. ಅವನು ಯುವಕ; ಬೇಕಾದರೆ ಓಡಿಹೋದಾನು, ಬೇಕಾದರೆ ನಮ್ಮೊ ಡನೆ ಹೋರಾಡಿ ಮಡಿದಾನು, ರಾಜನು ಮುದುಕ, ಅವನಿಗೆ ಹೋರಾಡಲು ಬಲ ವಿಲ್ಲ. ಅವನನ್ನು ಕೊಂದರೆ ನಮ್ಮ ಚರಿತ್ರೆಗೆ ಕಪ್ಪು ತಗಲುವುದೆಂದು ನಾನು ಮತ್ತೆ ಮತ್ತೆ ಹೇಳುತ್ತೇನೆ ಅದರಿಂದ ನಮ್ಮ ಕಾರ್ಯದಲ್ಲಿ ವಿಘ್ನವುಂಟಾ ಗುವುದು. ನಮ್ಮ ನಾಡಿನ ಮೇಲೆ ಕಣ್ಣಿಟ್ಟಿದ್ದ ಯಾವನೊಬ್ಬ ಪರಕೀಯ ರಾಜನ ಸೈನ್ಯವು ಇದನ್ನು ಅಲ್ಪಾವಧಿಯಲ್ಲಿಯೆ ಆಕ್ರಮಿಸಿಬಿಡಬಹುದು. ಅವರಿಗೊಂದು ನೆವ ಸಿಕ್ಕುವುದೇ ತಡ.''

" ಆದರೆ ಇಂಥ ಅನಧಿಕಾರ ಹಸ್ತಕ್ಷೇಪವನ್ನು ಇಂಗ್ಲಂಡ್ ಫ್ರಾನ್ಸು ಗಳು ಸಮರ್ಥಿಸಲಾರವು" ಎಂದ ಗ್ರಾಮೋ.

" ಅದನ್ನು ಹೇಗೆ ಹೇಳುವುದು? ನಮ್ಮ ರಾಜನಲ್ಲಿ ಎಷ್ಟೇ ತಪ್ಪುಗ ಳಿದ್ದರೂ ಅನ್ಯಾಯದಿಂದ ಅವನ ಕೊಲೆಯಾದರೆ, ಅವುಗಳನ್ನು ಯಾರೂ ಎಣಿಸುವುದಿಲ್ಲ. ಅವನ ಬಗ್ಗೆ ಎಲ್ಲರೂ ಸಹಾನುಭೂತಿ ತೋರುವರು." ಎಂದ ಪಿಟರ್ಸ್.

" ನಾವಿದನ್ನೆಲ್ಲ ಯೋಚಿಸಿಯೇ ಇರುವೆವು. ಆದರೆ ಜನಸಾಮಾನ್ಯ ರನ್ನು ಏನು ಹೇಳಿಯೂ ತಡೆಯುವುದು ಸಾಧ್ಯವಿಲ್ಲ. ದಂಡಿನಲ್ಲಿ ಸುಮಾರು ಅರ್ಧಭಾಗ ನಮ್ಮ ವಶವಾಗಿದೆ. ನಮ್ಮಿಂದ ಒಂದು ತಿಂಗಳು ತಡವಾದರೂ ಪರಿಣಾಮ ಕೆಟ್ಟದಾಗುವುದು. ಜನರು ಇದೊಂದು ವಂಚನೆಯೆಂದು ಭಾವಿಸು ವರು. ರಾಜನನ್ನೂ ರಾಜತಂತ್ರವನ್ನೂ ಕೊಚ್ಚಿಕೊಂಡು ಹೋಗಲಿದ್ದ ತೆರೆ ಗಳು ನಮ್ಮನ್ನೇ ಕೊಚ್ಚಿಕೊಂಡು ಹೋಗಬಹುದು. ನಮ್ಮ ಉಪದೇಶ ಅವ ರಿಕೆ ನಾಟುವುದಿಲ್ಲ " ಎಂದ ಗ್ರಾಮೋ.

" ತಮ್ಮನ್ನು ಪೇಚಿನಲ್ಲಿ ಸಿಕ್ಕಿಸಬೇಕೆಂದೇನೂ ನನ್ನಿಚ್ಛೆಯಿಲ್ಲ. ಜನ ತೆಯ ಇಷ್ಟಕ್ಕೆ ವಿರುದ್ಧವಾಗಿ ಸಾಗುವ ಶಕ್ತಿಯೂ ನನಗಿಲ್ಲ. ನನ್ನಲ್ಲಿ ತಮಗೆ ಶ್ರದ್ಧೆ ಇದ್ದುದಾದರೆ, ಪಾರ್ಲಿಮೆಂಟ್ ಸಭೆಸೇರುವ ಮುಂಚೆ ರಾಜ ನನ್ನು ಆಕ್ರಮಿಸಬಾರದೆಂದು ನಾಯಕವರ್ಗಕ್ಕೆ ತಿಳಿಸಿರಿ. ನನ್ನನ್ನು ಅಧಿ ನಾಯಕನನ್ನಾಗಿ ಮಾಡಿಕೊಂಡುದರಿಂದ ನನ್ನ ಈ ಆದೇಶವನ್ನು ಪಾಲಿಸಲು ತಾವೆಲ್ಲ ಬದ್ಧರಾಗಿದ್ದೀರಿ."

" ತಾವು ರಾಜನನ್ನು ಎಚ್ಚರಿಸುವಿರೇನು ? " ಪ್ರಾಧ್ಯಾಪಕನು ಕೇಳಿದ.

" ಹಾಂ, ಹಾಗೆ ನನ್ನಿಚ್ಛೆ. ಇದು ಅನುಚಿತವೆಂದು ತಾವೆನ್ನಬಹುದು. ತಾವು ಆತನ ಕೊಲೆಗೆ ಸಂಕಲ್ಪವನ್ನೇ ಮಾಡಿದ್ದೀರಿ ಆದರೆ ನಾನು ಮತ್ತೊಮ್ಮೆ ಹೇಳುತ್ತೇನೆ: ರಾಜವೃದ್ಧ, ಆತ್ಮರಕ್ಷಣೆಗೆ ಅಸಮರ್ಥ. ಅವನ ಮೈಗೆ ಗಾಯಮಾಡಿದರೆ ಇಡೀ ಯುರೋಪಿನಲ್ಲಿ ಕಾಳ್ಗಿಚ್ಚು ಹೊತ್ತುವುದು."

ದಲಪತಿಯ ಮಾತನ್ನು ಕೇಳಿ ಪ್ರಾಧ್ಯಾಪಕನು ಮತ್ತೆಂದ : " ಆ ಕಿಚ್ಚನ್ನು ಆರಿಸಲು ಜೀವವನ್ನೇ ಒತ್ತೆಯಿಟ್ಟು ನಾವು ಹೆಣಗುವೆವು. ನಾವು

ಹೊತ್ತ ಹೊಣೆ ಸಾಮಾನ್ಯವಲ್ಲ; ಅದನ್ನು ಈಡೇರಿಸಲು ನಾವು ಸಂಕಲ್ಪವನ್ನೇ ಮಾಡಿದ್ದೇವೆ. ಮಾಡಬೇಕಾದ ಮನುಷ್ಯಪ್ರಯತ್ನಗಳನ್ನೆಲ್ಲಾ ಮಾಡುವೆವು.''

ಕ್ಷಣಹೊತ್ತು ಮೌನವಾಗಿದ್ದು ಪಿಟರ್ಸ್ ಮಾತನಾಡಿದ : ''ಯಾವ ಆತಂಕವೂ ಉಂಟಾಗದಿದ್ದರೆ ಇನ್ನೊಂದು ವಾರದ ತರುವಾಯ ನಾವು ಲ್ಲಿಯೇ ಕೂಡೋಣ. ಇಂದಿನ ಕೆಲಸ ಮುಗಿದಂತಾಯಿತು.''

ಲೆವ್ವಿಟ್ ಆಸನದಿಂದೇಳುತ್ತ ನುಡಿದ : '' ಮಹಾಶಯರೆ, ನನ್ನೊಂದು ವಿಶೇಷ ನಿವೇದನೆಯುಂಟು, ಅಪ್ಪಣೆಯಾದರೆ ಹೇಳುವೆ.''

'' ಹೇಳಿ.''

'' ನಾಳೆ ಬರಲಿರುವ ಹೊಸಸರಕಾರದ ಆಳಿಕೆಯನ್ನು ಕುರಿತು ತಾವೊಂದು ಕರಡನ್ನು ಸಿದ್ಧಪಡಿಸಿರುವಿರಷ್ಟೆ. ಅದರಲ್ಲಿ ಬೇರೆ ಬೇರೆ ಪದಗಳಿಗೆ ಯಥಾಯೋಗ್ಯ ನಾಮಗಳನ್ನು ನಿರ್ದಿಷ್ಟಗೊಳಿಸಿರುವಿರಿ. ತಮ್ಮ ಬುದ್ಧಿಕೌಶಲ, ಬಹುದರ್ಶಿತೆ, ಪ್ರಜಾತಂತ್ರದ ಬಗ್ಗೆ ಅಗಾಧಜ್ಞಾನ ಅದರಲ್ಲಿ ವ್ಯಕ್ತವಾಗಿವೆ. ಅದರಿಂದಾಗಿ ಒಂದು ವಿಷಯವನ್ನು ತಿಳಿದುಕೊಳ್ಳಲು ನಮಗೆ ಆತುರವುಂಟಾಗಿದೆ – ಬರ್ಜಿಲಂಡಿನ ಸ್ವಾತಂತ್ರ್ಯದ ಪ್ರವರ್ತಕರು ನಾಳಿನ ರಾಜ್ಯದಾಡಳಿತದಲ್ಲಿ ಯಾವ ಭಾರವನ್ನು ನಿರ್ವಹಿಸುವರು ? ಯಾರು ಯಾರಿಗೆ ಯಾವ ಯಾವ ಹೊಣೆಯನ್ನು ಒಪ್ಪಿಸಲಾಗುವುದು, ಬೇರೆ ಬೇರೆ ಮಂತ್ರಿಪದಗಳಿಗೆ ಯಾರು ಯಾರು, ಎಂಬುದನ್ನೂ ನಿರ್ದೇಶಿಸಲಾಗಿದೆ. ಆ ನಾಮಾವಳಿಯಲ್ಲಿ ತಮ್ಮ ಹೆಸರೇ ಇಲ್ಲ. ಅವರೆಲ್ಲರ ನೇತೃತ್ವರನ್ನು ತಾವು ವಹಿಸುವಿರೆಂದು ನನ್ನಾಸೆ. ಜನಸಾಧಾರಣರ ಪರವಾಗಿಯೆ ನಾನೀ ಮಾತನ್ನಾಡುತ್ತಿರುವೆ. ತಾವು ಯಾರಿಗೆ ಸ್ವಾತಂತ್ರ್ಯವನ್ನು ತಂದುಕೊಡುವಿರೋ ಅವರ ರಕ್ಷಣೆಯ ಭಾಗವನ್ನೂ ತಾವೇ ಹೊತ್ತರೆ ನಾವು ಕೃತಕೃತ್ಯರಾಗುವೆವು. ಈ ಸಾಧಾರಣ ತಂತ್ರದ ಸಭಾಪತಿಯಾಗಲು ತಕ್ಕವರು ತಮ್ಮ ಹೊರತು ಯಾರೂ ಇಲ್ಲ '' ಎಂದ ಲೆವ್ವಿಟ್.

'' ಇದು ನಿರ್ವಿವಾದ ಸತ್ಯ '' ಪ್ರಾಧ್ಯಾಪಕನೆಂದ.

ಜಾನ್ ಪಿಟರ್ಸ್ ಗೋಣುಹಾಕಿ ಪ್ರತಿವಾದಿಸಿದ: "ಅಲ್ಲ ಮಿತ್ರರೆ, ನಾನು ಈ ಪುರಸ್ಕಾರಕ್ಕೆ ಯೋಗ್ಯನಲ್ಲ. ಹೊಸ ಪ್ರಭುತ್ವದಲ್ಲಿ ನಾನು ಯಾವ ಪೀಠವನ್ನೂ ವಹಿಸುವುದಿಲ್ಲ, ಅಂತಹ ಆಕಾಂಕ್ಷೆಯೂ ನನಗಿಲ್ಲ. ಕರ್ತವ್ಯವೆಂದೇ ನಾನು ತಮ್ಮ ನೆರವಿಗೆ ನಿಂತದ್ದು. ತಮ್ಮ ಸಂಕಲ್ಪ ಈಡೇರಿದರೆ ನನ್ನ ಆಶೆ ಪೂರಯಿಸಿದಂತೆ. ನಾನು ವೈಯಕ್ತಿಕ ಸ್ವಾರ್ಥದ ಉತ್ತೇಜನದಿಂದ ರಾಜತಂತ್ರವನ್ನು ಮುರಿದು ಪ್ರಜಾತಂತ್ರವನ್ನು ನೆಲೆಗೊಳಿಸಲು ಹೊರಟಿದ್ದೇನೆಂದು, ಯಾರೂ ಎಂದೂ ಕನಸಿನಲ್ಲಿಯೂ ಎಣಿಸಬೇಡಿರಿ."

ಆ ಹೊತ್ತಿಗೆ ಕೋಣೆಯ ಹೊರಗಡೆ ಸದ್ದಾಯಿತು. ಎಲ್ಲರೂ ಚಕಿತರಾಗಿ ಎದ್ದು ನಿಂತರು. ಪಿಟರ್ಸ್ ತತ್ಕ್ಷಣವೇ ಮೇಜಿನ ಮೇಲಿನ ಕಾಗದ ಪತ್ರಗಳನ್ನು ತೆಗೆದುಕೊಂಡು, ಒಳಗಿನ ಇನ್ನೊಂದು ಬಾಗಿಲಿಂದ ಬೇರೆ ಕೋಣೆಗೆ ಹೋಗಿ ಅದೃಶ್ಯನಾದ. ಪ್ರಾಧ್ಯಾಪಕನು ಒಂದು ಸಿಗಾರೇಟನ್ನು ಹೊತ್ತಿಸಿಕೊಂಡು ಅಗ್ಗಿಷ್ಟಿಗೆಯ ಹತ್ತಿರ ನಿಂತುಕೊಂಡ. ಬಹಳ ಹೊತ್ತಿನಿಂದಲೂ ಕಾಸಿಕೊಳ್ಳುತ್ತಿರುವವನಂತೆ. ಇನ್ನಿಬ್ಬರು ಎದುರುಬದುರು ನಿಂತು ಮಾತಾಡತೊಡಗಿದರು.

ಕೊಂಚ ಸಮಯದಲ್ಲಿ ಪೋಲಿಸ್ ದಳಪತಿ ಬರ್ನಾರ್ಡ್ ಬಾಗಿಲು ತೆರೆದುಕೊಂಡು ಒಳಗೆ ಬಂದ. ಹಿಂದೆ ಚಿಕ್ಕ ಪೋಲಿಸ್‌ಪಡೆಯಿತ್ತು. ಅದನ್ನು ಹೊರಗಿರಿಸಿ ಬರ್ನಾರ್ಡ್ ಕೋಣೆಯ ಬಾಗಿಲನ್ನಿಕ್ಕಿ, ಮಬ್ಬುಬೆಳಕಿನಲ್ಲಿ ಸುತ್ತಲೂ ನೋಡಿದ. ಆತನ ಉತ್ಸಾಹಪ್ರಫುಲ್ಲತೆಗಳು ಒಮ್ಮೆಲೆ ಇಂಗಿದವು. ಬೇಟೆ ಓಡಿಹೋಗಿದೆಯೆಂದು ತಿಳಿಯಿತು. ಹೈಟನ್, ಲೆವ್ವಿಟ್, ಗ್ರಾವೋ ಮೂವರನ್ನೂ ಆತ ಬಲ್ಲ; ಅವರು ಕ್ರಾಂತಿಕಾರರೆಂಬುದನ್ನೂ ಅರಿತಿದ್ದ; ಅವರನ್ನು ಯಾವಾಗ ಬೇಕಾದಾಗ ಹಿಡಿಯುವುದು ಆತನಿಗೆ ಸಾಧ್ಯವಿತ್ತು. ಅವರನ್ನು ಹಿಡಿಯುವುದಕ್ಕಾಗಿ ಇಂಹತ ಕಟ್ಟೆರುಳಲ್ಲಿ, ಹೀಗೆ ಹೊಂಚುಹಾಕಿ ಗುಪ್ತಸಭೆಯ ಮೇಲೆ ದಾಳಿಯಿಡುವ ಅಗತ್ಯವಿರಲಿಲ್ಲ. ಅವನು ಬಂದುದು ದಳಪತಿಯನ್ನು ಹಿಡಿಯುವುದಕ್ಕಾಗಿ. ಅವನನ್ನು ಹಿಡಿಯಲು ಹಲವು ಸಲ ಪ್ರಯತ್ನಿಸಿ ಬರ್ನಾರ್ಡ್ ನಿಷ್ಫಲನಾಗಿದ್ದ. ಈಗ ಖಂಡಿತ ಹಿಡಿಯುವೆ, ಓಡಿ ಹೋಗಲಾರ ಎಂದು ನಂಬಿದ್ದ. ಆದರೆ ಈ ಸಲವೂ

ಆತನ ಮನೋರಥ ಮುರಿದುಬಿತ್ತು. ಪೋಲಿಸರನ್ನು ಒಳಗೆ ಕರೆದು ಬರ್ನಾರ್ಡ್ ಹೇಳಿದ: "ಈ ಮನೆಯನ್ನೆಲ್ಲ ಸಂಶೋಧಿಸಿರಿ. ಅದು ನೋಡಿರಿ, ಗುಪ್ತದ್ವಾರ. ಅಲ್ಲಿಂದ ಬೇರೆ ಕೋಣೆಗಳಿಗೆ ಹೋಗಿ ಹುಡುಕಿರಿ; ಅಲ್ಲಿ ಸಿಕ್ಕವರನ್ನು ಹಿಡಿದು ತನ್ನಿರಿ. ಇಲ್ಲಿ ಮೂರು ಕುರ್ಚಿಗಳಿವೆ, ಮಂದಿ ಮೂವರೇ ಇದ್ದಾರೆ, ನಾಲ್ಕನೆಯವನು ಇಲ್ಲಿಯೋ ಎಲ್ಲಿಯೋ ಅಡಗಿರಬೇಕು."

೧೨

ಜಾನ್ ಪಿಟರ್ಸ್ ಮೇರಿಯ ಕೋಣೆಗೆ ಬಂದವನೇ ಮೊಗವಾಡವನ್ನು ತೆಗೆದು, ಆವಳ ಪಕ್ಕದಲ್ಲಿ ಕುಳಿತ. ಎರಡು ಗ್ಲಾಸುಗಳಿಗೆ ಮದ್ಯವನ್ನು ಸುರಿದು, ಒಂದನ್ನು ಮೇರಿಯ ಕೈಗಿತ್ತ. ಅಷ್ಟರಲ್ಲಿಯೆ ಬರ್ನಾರ್ಡ್ ಬಾಗಿಲನ್ನು ತೆರೆದುಕೊಂಡು ವ್ಯಸ್ತನಾಗಿ ಒಳಕ್ಕೆ ಬಂದ.

ಗ್ಲಾಸನ್ನು ಬಾಯಿಗೊಯ್ಯುತ್ತ ಪಿಟರ್ಸ್ ಬಾಗಿಲ ಕಡೆ ನೋಟ ಬೀರಿದ. ಬರ್ನಾರ್ಡನನ್ನು ಕಂಡು ಉತ್ತೇಜಿತ ಭಾವದಿಂದ ಅವನೆಂದ: "ಬರ್ನಾರ್ಡ್, ಇಷ್ಟು ರಾತ್ರಿಯಲ್ಲಿ ನೀವೇಕೆ ಇಲ್ಲಿ? ನನ್ನನ್ನು ಹುಡುಕಲಿಕ್ಕಲ್ಲವೆ? ಅರಮನೆಯಲ್ಲಿ ಯಾವ ಗೊಂದಲವೂ ಇಲ್ಲ ತಾನೆ?"

ತಟ್ಟನೆ ಏನು ಉತ್ತರ ಕೊಡಬೇಕೆಂದು ಬರ್ನಾರ್ಡನಿಗೆ ಹೊಳೆಯಲಿಲ್ಲ. ಮೇರಿ ಕೋಪದಿಂದ, "ಮಹಾಶಯರೇ, ನನ್ನ ಒಪ್ಪಿಗೆಯಿಲ್ಲದೆ ತಾವು ಯಾವ ಸಾಹಸದಿಂದ ಒಳಗೆ ಬಂದಿರಿ? ಕೀಲಿಕೈ ಎಲ್ಲಿ ಸಿಕ್ಕಿತು?" ಎಂದು ನುಡಿದು ಪಿಟರ್ಸನಿಗೆಂದಳು: "ಈ ಸದ್ಗೃಹಸ್ಥರು ಏತಕ್ಕಾಗಿ ಇಲ್ಲಿ ಅನಧಿಕಾರ ಪ್ರವೇಶ ಮಾಡಿದರು?"

"ಅದನ್ನು ನಾನು ಹೇಗೆ ಹೇಳಲಿ? ಅವರೇ ಹೇಳಬಲ್ಲರು. ಬರ್ನಾರ್ಡ್, ನಾನು ಏನು ಮಾಡುತ್ತಿದ್ದೆನೆಂದು ನೋಡಲು ಬಂದಿರೇನು?"

"ಇಲ್ಲ. ತಾವು ಇಲ್ಲಿದ್ದೀರೆಂದು ನನಗೆ ಗೊತ್ತಿರಲಿಲ್ಲ ತಮ್ಮನ್ನಿಲ್ಲಿ ಕಂಡೇನೆಂಬ ಕಲ್ಪನೆಯಿಂದಲೂ ಬರಲಿಲ್ಲ. ಬೇರೊಬ್ಬರನ್ನು ಹುಡುಕುವುದಕ್ಕೆ ಬಂದಿದ್ದೆ." ಎಂದ ಬರ್ನಾರ್ಡ್.

"ಯಾರನ್ನು?" ಮೇರಿ ಕೇಳಿದಳು.

ಬರ್ನಾರ್ಡ್ ಇದಕ್ಕೆ ಉತ್ತರವನ್ನು ಕೊಡಲಿಲ್ಲ. ಪಿಟರ್ಸ್ ಹಠಾತ್ತಾಗಿ ಎದ್ದು ನಿಂತು ಅವನನ್ನು ಅಡಿಯಿಂದ ಮುಡಿವರೆಗೂ ತೀಕ್ಷ್ಣ ದೃಷ್ಟಿಯಿಂದ ನೋಡಿದ. ಆ ನೋಟ ಬರ್ನಾರ್ಡನನ್ನು ಕೊಂಚ ಕುಗ್ಗಿಸಿತು.

"ಬ್ಯಾರನ್, ಈ ಹೊತ್ತಿನಲ್ಲಿ ನೀವಿಲ್ಲಿಗೆ ದಾರಿತಪ್ಪಿ ಬಂದಿರೆಂದು ಭಾವಿಸುವುದು ಅಸಂಗತ. ನಿಮ್ಮ ಆಗಮನದ ಉದ್ದೇಶವೇನು, ಹೇಳಿರಿ." ಎಂದ ಪಿಟರ್ಸ್.

"ವಿದ್ರೋಹಿಗಳ ದಳಪತಿಯನ್ನು ಹುಡುಕಲೆಂದು ಇಲ್ಲಿಗೆ ಬಂದಿದ್ದೇನೆ. ನಾನೀ ಕೋಣೆಯನ್ನು ಸಂಶೋಧಿಸಬೇಕಾಗಿದೆ." ಬರ್ನಾರ್ಡ್ ಧೀರಭಾವ-ದಿಂದ ಉತ್ತರವಿತ್ತ.

"ಅದೊಂದು ಕಠಿನ ಕೆಲಸವೆ ? ಈಗಲೇ ಶೋಧಿಸಿಕೊಳ್ಳಿರಿ ಮೇಜಿನ ಬಟ್ಟೆಯನ್ನು ತೆಗೆದು ನೋಡಿರಿ, ಬುಡದಲ್ಲಿ ಯಾರಾದರೂ ಇದ್ದಾರೋ ಏನೋ ; ಈ ತೆರೆಯನ್ನೆತ್ತಿಯೂ ನೋಡಬಹುದು : ಪಕ್ಕದಲ್ಲೊಂದು ಕೋಣೆಯುಂಟು, ಅದನ್ನು ಬೇಕಾದರೆ ನೋಡಿರಿ ;—ಮನೆಯೊಡತಿಯ ಒಪ್ಪಿ-ಗೆಯು ಅಗತ್ಯವೇನೂ ಇಲ್ಲ. ವಿದ್ರೋಹಿಗಳ ದಳಪತಿ ತಲೆದಿಂಬಿನಡಿಯಲ್ಲಿ ಅಡಗಿದ್ದಾನೋ ಹೇಗೋ, ನೋಡಿಕೊಳ್ಳಿರಿ. ಮಂಚದ ಗಾದಿ, ತಕ್ಕೆಗಿಕ್ಕೆ ಎಲ್ಲವನ್ನೂ ತಿರುವಿಹಾಕಿ ನೋಡಿರಿ. ದಳಪತಿ ಮಹಾಭಯಂಕರ ಮನುಷ್ಯ, ಅವನಿಗೆ ಅಸಾಧ್ಯ ಯಾವುದೂ ಅಲ್ಲ. ಚೆನ್ನಾಗಿ ಹುಡುಕಿರಿ." ಪಿಟರ್ಸ್ ನಗೆಯಾಡಿದ.

ಬರ್ನಾರ್ಡ್ ಅಪ್ರತಿಭನಾಗಿ, ಏನು ಮಾಡುವುದಕ್ಕೂ ತೋಚದೆ ಸುತ್ತಲೂ ನೋಡುತ್ತ ನಿಂತ. ಪಿಟರ್ಸ್ ಮತ್ತೆಂದ: "ನೀವು ಬಹುದಿನ-ಗಳಿಂದಲೂ ಅವನನ್ನು ಹುಡುಕುತ್ತ ಅಂಡಲೆಯುತ್ತಿರುವಿರೇನೋ. ಇನ್ನೂ ಎಷ್ಟೋ ಸ್ಥಳಗಳಿರುವಾಗ ಅವನು ಇಲ್ಲಿಯೆ ಆಶ್ರಯಿಸಿರುವನೆಂದು ನಿಮಗೆ ಸಂದೇಹವುಂಟಾಗಲು ಕಾರಣವೇನು ? "

"ತಮಗೆ ಕೇಳಿದರೆ ವಿಸ್ಮಯವಾದೀತು— ಈ ಮನೆಯ ಇನ್ನೊಂದು ಭಾಗದಲ್ಲಿ ಇಂದು ರಾತ್ರಿ ವಿದ್ರೋಹಿಗಳ ಗುಪ್ತಸಭೆ ಸೇರಿತ್ತು. ದಲಪತಿಯೇ ಅದಕ್ಕೆ ಅಧ್ಯಕ್ಷನಾಗಿದ್ದ. ಅದರ ಸುಳಿವು ಹಿಡಿದು ನಾನು ಅವನನ್ನು ಹಿಡಿ-ಯಲು ಬಂದಿದ್ದೆ." ಎಂದ ಬರ್ನಾರ್ಡ್.

"ರಂಗಮಂದಿರದ ಅಭಿನೇತ್ರಿಯ ಮನೆಯಲ್ಲಿ ವಿದ್ರೋಹಿಗಳ ಸಭೆಯೆ? ಇಂಥ ಮಾತನ್ನು ಎಂದೂ ಕೇಳಿರಲಿಲ್ಲ. ನಿಮ್ಮ ಚಾಣಾಕ್ಷತನ ಪ್ರಶಂಸನೀಯ. ಇಲ್ಲಿ ಸಭೆಸೇರಿದೆಯೆಂಬ ಸಂದೇಹಕ್ಕೆ ಕಾರಣವೇನಾದರೂ ಉಂಟೆ? ಗ್ರಾಮೋ ಈ ಮನೆಯ ಒಂದು ಕೋಣೆಯನ್ನು ಬಾಡಿಗೆಯಿಂದ ಹಿಡಿದಿದ್ದಾನೆಂದು ನಾನು ಕೇಳಿದ್ದೇನೆ. ಆದರಿಂದಲೇ ಇದು ವಿದ್ರೋಹಿಗಳ ಕೇಂದ್ರವೆಂದು ನಿಮಗೆ ಸಂಶಯ ಬಂದಿರಬೇಕು. ಗ್ರಾಮೋನನ್ನೂ ಅವನ ಗೆಳೆಯರನ್ನೂ ಬಂಧಿಸಿದಿರೇನು?" ಪಿಟರ್ಸ್ ಕೇಳಿದ.

"ಯಾರನ್ನೂ ಹಿಡಿದಿಲ್ಲ. ವಿದ್ರೋಹೀದಳದ ಸದಸ್ಯರು ಯಾರು ಯಾರೆಂಬುದು ನನಗೆ ತಿಳಿಯದ ವಿಷಯವಲ್ಲ. ಆದರೆ ಆ ಹಿಂಡಿನ ಹಿರಿಯನು ಯಾರೆಂಬುದು ಮಾತ್ರ ತಿಳಿದಿಲ್ಲ. ಅವನನ್ನು ಹುಡುಕಲೆಂದೇ ಬಂದಿದ್ದೆ. ಇತರ ಸದಸ್ಯರ ಬಗ್ಗೆ ಚಿಂತೆಯೇ ಇಲ್ಲ. ಬೇಕಾದಾಗ ಅವರನ್ನು ಹಿಡಿಯಬಹುದು." ಎಂದ ಬರ್ನಾರ್ಡ್.

"ಬೆಕ್ಕಿನ ಕೊರಳಲ್ಲಿ ಗಂಟೆ ಕಟ್ಟಬೇಕೆಂದು ಇಲಿಗಳು ಯೋಚಿಸುವುದು ಸುಲಭ, ಕೆಲಸ ಅಷ್ಟು ಸುಲಭವಲ್ಲ. ಅವನು ನಿಮ್ಮ ಕಣ್ಣಲ್ಲಿ ಮಣ್ಣೆರಚಿ ಬೇಕಾದಲ್ಲಿ ಅನಾಯಾಸವಾಗಿ ತಿರುಗುತ್ತಿದ್ದಾನೆಂದು ನನಗೆನಿಸುತ್ತದೆ."

"ನಾನು ಹಾಗೆ ನಂಬುವುದಿಲ್ಲ."

"ನೀವು ಬಹಳ ಬೇಗನೆ ಮುನಿದುಕೊಳ್ಳುತ್ತೀರಿ. ನಿಮ್ಮ ನಂಬಿಗೆ ಏನೇ ಇರಲಿ; ವಿದ್ರೋಹಿಗಳ ದಳಪತಿ ನಿಮ್ಮ ಕಣ್ಣುತಪ್ಪಿಸಿ ಎಲ್ಲಿ ಅಂತರ್ಧಾನ ಹೊಂದಿದನೆಂಬುದನ್ನು ತಿಳಿದುಕೊಂಡಿರುವಿರಾ? ನೀವು ಬಂದಿರೆಂದು ತಿಳಿದೊಡನೆ ಅವನು ನೊಣವಾಗಿ ಬಾಗಿಲ ಬಿರುಕಿನೊಳಗಿಂದ ಹಾರಿಹೋಗಿರಲಾರನಷ್ಟೇ?"

"ತಾವು ಏನೇ ಎನ್ನಿರಿ. ದಳಪತಿ ಕೆಲ ನಿಮಿಷಗಳ ಹಿಂದೆ ಈ ಮನೆಯಲ್ಲಿಯೆ ಇದ್ದನೆಂದು ಖಂಡಿತ ಹೇಳಬಲ್ಲೆ. ಅವನು ಕೆಳಗಿಳಿದೂ ಹೋಗಿಲ್ಲವೆಂದು ಗೊತ್ತಿದೆ. ನಮ್ಮ ಜನರು ಮನೆಯ ಸುತ್ತಲೂ ಕಾಯ್ದುಕೊಂಡಿದ್ದಾರೆ. ಆದರೂ ಅವನೆಲ್ಲಿ ಮೈಮರೆಸಿಕೊಂಡನೊ ತಿಳಿಯದಾಗಿದೆ."

"ನೀವು ತುಂಬ ವಿಚಕ್ಷಣರು. ಶೋಧಿಸುವುದನ್ನು ಬಿಟ್ಟು ಗೊಡ್ಡು ಮಾತಿನಲ್ಲಿ ಏಕೆ ಹೊತ್ತು ಹಾಳುಮಾಡುತ್ತಿರುವಿರಿ? ಇಲ್ಲಿ ಯಾರಿಗಾದರೂ

ಅಡಗಿಕೊಳ್ಳಲು ಅನುಕೂಲವಿರುವಂತೆ ನನಗೆ ತೋರುವುದಿಲ್ಲ. ಆದರೂ ಸರಿಯಾಗಿ ಹುಡುಕಿ ನೋಡುವುದು ಕರ್ತವ್ಯ. ಮಂಚದ ಕೆಳಗೂ ನೋಡಿರಿ. ಯಜಮಾನಿ ನಿಶ್ಚಯವಾಗಿ ಅಡ್ಡಿಮಾಡುವುದಿಲ್ಲ."

ಈಗ ಮೇರಿ ಮಾತನಾಡಿದಳು: "ನಿಮ್ಮ ಮಾತನ್ನು ಕೇಳಿ ನನ್ನ ಮೈಯೆಲ್ಲ ಉರಿಯುತ್ತಿದೆ. ಈ ರಾತ್ರಿ ಸಮಯದಲ್ಲಿ ನನ್ನ ಮಂಚದಡಿಯಲ್ಲಿ ಮಂದಿ ಅಡಗಿರುವರೆಂದು ಹೇಳುವುದು ಉಚಿತವೆ? ಇವರು ಪೋಲಿಸರ ಮುಖ್ಯರೇ? ಎಂಥ ಬುದ್ಧಿ!"

ಪಿಟರ್ಸ್ "ಗೊಂದಲದಲ್ಲಿ ಬಿದ್ದು ಇವರ ಬುದ್ಧಿ ನಷ್ಟವಾಗಿದೆ. ವಿದ್ರೋಹಿಗಳ ದಳಪತಿಯನ್ನು ಹಿಡಿಯುವೆನೆಂದು ತುಂಬಾ ಆಸೆಯಿಂದ ಬಂದಿದ್ದರು. ಆ ಧೂರ್ತನು ಹಿಡಿದೆನೆಂಬಷ್ಟರೊಳಗೇ ಇವರ ಮುಷ್ಟಿಯ ಬೆರಳ ಸಂದುಗಳೊಳಗಿಂದ ನುಸುಳಿಹೋಗಿದ್ದಾನೆ. ಈ ದುಃಖ ಕಡಿಮೆಯೆ? ಹೀಗಾದರೆ ಯಾರ ಬುದ್ಧಿ ಸಮ ಉಳಿದೀತು? ಇವರು ನನ್ನ ಹಳೆಯ ಗೆಳೆಯರು. ಈಗಲೇ ಇವರೊಡನೆ ಒಂದೆರಡು ಮಾತನಾಡಿಕೊಳ್ಳುವೆ." ಎಂದು ಮೇರಿಗೆ ಹೇಳಿ, ಬಳಿಕ ಬರ್ನಾರ್ಡರನ್ನು ಪ್ರಶ್ನಿಸಿದ: "ಬ್ಯಾರನ್, ಸಿಕ್ಕಿದಷ್ಟು ವಿದ್ರೋಹಿಗಳನ್ನು ಏಕೆ ಹಿಡಿಯಲಿಲ್ಲ?"

ಬರ್ನಾರ್ಡ್ ಹೇಳಿದ: "ಅದೇನು ಮಹಾಕಾರ್ಯವಲ್ಲ; ಅವರನ್ನು ಯಾವಕ್ಷಣದಲ್ಲಿ ಬೇಕೆಂದರೆ ಆಕ್ಷಣದಲ್ಲಿ ಹಿಡಿಯಬಹುದು. ಆದರೆ ಅದು ಕೆಲಸದ್ದಲ್ಲ. ಅದಕ್ಕೆ ಅವಸರಪಟ್ಟರೆ ಜನರಲ್ಲಿ ಕ್ಷೋಭೆಯುಂಟಾಗುವುದು. ಅನೇಕರು ಪ್ರಕಟವಾಗಿಯೇ ಕ್ರಾಂತಿಯನ್ನು ಎಬ್ಬಿಸುವರು. ವಿದ್ರೋಹೀ ದಲವನ್ನು ನಡೆಸುತ್ತಿರುವ ಸೂತ್ರಧಾರನನ್ನೇ ಮೊದಲು ಹಿಡಿಯುವುದು ಲೇಸೆಂದು ನನ್ನ ಅಭಿಪ್ರಾಯ."

ಪಿಟರ್ಸ್ ಎಂದ: "ನಿಮ್ಮ ವಿಚಾರಕ್ಕೇನೆನ್ನಬೇಕೋ ತಿಳಿಯದು. ಇತರ ವಿದ್ರೋಹಿಗಳನ್ನು ಹಿಡಿದರೆ ಗೊಂದಲವೇಳುವುದೆನ್ನುತ್ತೀರಿ, ದಳಪತಿಯನ್ನು ಹಿಡಿದರೆ ಆ ಭಯವಿಲ್ಲವೆನ್ನುವುದು ಎಂಥ ಕಲ್ಪನೆ! ತಮ್ಮ ದಳಪತಿಯನ್ನು ಬಂಧಿಸಿದ್ದು ವಿದ್ರೋಹಿಗಳಿಗೆ ತಿಳಿದರೆ, ಅವನನ್ನು ಬಿಡಿಸಿಕೊಳ್ಳಲು ಅವರು ಗಲಭೆಯೆಬ್ಬಿಸುವರೆಂದು ನನಗೆನಿಸುತ್ತದೆ."

"ಬಿಡಿಸಿಕೊಳ್ಳಲು ಅವಕಾಶ ಕೊಟ್ಟಿರಲ್ಲವೇ ಅವರು ದಂಗೆಯೇಳುವುದು? ಸಿಕ್ಕೊಡನೆಯೇ ಅವನನ್ನು ಇಲ್ಲವಾಗಿಸಿಬಿಡುತ್ತೇವೆ."

'ನಿಮ್ಮ ಮಾತು ಅತಿವಿಸಂಗತ. ದೇಶದಲ್ಲಿ ವಿಧಿವಿಧಾನ ಇಲ್ಲವೆ? ವಿಚಾರಣೆಯಿಲ್ಲದೆ ಒಬ್ಬ ಮನುಷ್ಯನನ್ನು ನಿರ್ಮೂಲವಮಾಡುವುದೆ?"

"ಇಲ್ಲದೇನು, ವಿಧಿ ವಿಧಾನ ಎಲ್ಲಾ ಇದ್ದೇ ಇದೆ. ಆದರೆ ದೇಶದ ಹಿತಕ್ಕಾಗಿ ಒಮ್ಮೊಮ್ಮೆ ಅವುಗಳನ್ನು ಬದಿಗಿಡಬೇಕಾಗುತ್ತದೆ; ಅದು ಅನ್ಯಾಯವೆಂದು ಕೈ ಕಾಯುವುದು ವ್ಯವಹಾರ್ಯವಾಗದು. ನಾನು ತಮಗೆ ಖಂಡಿತ ಹೇಳುತ್ತೇನೆ–ಒಂದು ವೇಳೆ ಇಂದು ರಾತ್ರಿ ದಳಪತಿ ಸಿಕ್ಕರೆ ಅವನು ನಾಳೆಯ ಬೆಳಗನ್ನು ಕಾಣುವುದಿಲ್ಲ!"

ಅವಕ್ಕೆ ಪಿಟರ್ಸ್ ನಸುನಕ್ಕು ನುಡಿದ: "ಇಂದು ನಿಮಗೆ ನರರಕ್ತದ ನೀರಡಿಕೆಯಾದಂತಿದೆ ಎಂತಲೇ ಎಂದೂ ಮಾಡಲು ಸಾಹಸ ಸಾಲದಂಥ ಕೆಲಸವನ್ನು ಮಾಡಲು ನೀವಿಷ್ಟು ಉತ್ಸುಕರಾಗಿದ್ದೀರಿ"

ಆದಕ್ಕೆ ಬರ್ನಾರ್ಡ್, "ನನ್ನ ಮಾತಿವಲ್ಲಿ ತಮಗೀಗ ನಂಬುಗೆ ಹುಟ್ಟಿದಿದ್ದರೆ ನಾಳೆ ಮುಂಜಾನೆ ನನ್ನನ್ನು ಕಾಣಿರಿ. ಆಗ ತೋರಿಸುತ್ತೇನೆ-ನೋಡಿ ತಾವು ಭಯವಿಸ್ಮಯಗಳಿಂದ ದಂಗುಬಡಿದು ನಿಲ್ಲುವಿರಿ." ಎಂದ,

ಪಿಟರ್ಸ್ ಹುಬ್ಬುಗಂಟಿಕ್ಕಿದ. "ಕಂಡರೂ ಸರಿ, ಕಾಣದಿದ್ದರೂ ಸರಿ, ನಾನು ನಿಮ್ಮ ಕೆಲಸದಲ್ಲೇನೂ ವ್ಯತ್ಯಯ ತರುವುದಿಲ್ಲ. ಇರಲಿ ನಾಳೆಯ ಮಾತು ನಾಳೆ. ಈಗ ಹೊರಟು ಹೋಗಿರಿ. ನಿಮ್ಮಂತಹ ವಿಚಾರವಂತರು ಹೀಗೆ ಅನಧಿಕಾರ ಪ್ರವೇಶ ಮಾಡುವುದು ಅಸಂಗತವೆಂಬುದನ್ನು ಯೋಚಿಸಬೇಕಾಗಿತ್ತು" ಎಂದ.

"ನಾನು ಹೋಗುತ್ತೇನೆ. ಆದರೆ ಮೊದಲು—ಇನ್ನೂ ಒಂದು ಕೆಲಸವಿದೆ" ಎಂದು ಬರ್ನಾರ್ಡ್ ಪಕ್ಕನೆ ಎದ್ದು ಕಿಡಿಕಿಯ ಹತ್ತಿರ ಹೋಗಿ ಆದರ ತೆರೆಯನ್ನು ಸರಿಸಿ ನೋಡಿದ ಆದರ ಬಾಗಿಲು ಅರೆತೆರೆದಿತ್ತು. "ತಾವು ರಾತ್ರಿಯಲ್ಲಿಯೂ ಕಿಡಿಕಿಯನ್ನು ತೆರೆದಿರುವಿರೊ?" ಎಂದು ಮೇರಿಯನ್ನು ಕೇಳಿದ.

"ತಪ್ಪೇನು? ಎಲ್ಲ ಕಿಡಿಕಿಗಳನ್ನು ಮುಚ್ಚಿಬಿಟ್ಟರೆ, ಒಳ್ಳೆಯ ಗಾಳಿ ಬೇಕಲ್ಲ" ಎಂದಳು ಮೇರಿ.

“ಅದು ನಿಜ, ನಾನು ಕಿಡಿಕಿಯನ್ನು ತೆರೆದುಬಿಡುತ್ತೇನೆ.” ಎಂದು ಕಿಡಿಕಿಯನ್ನು ಪೂರ್ಣವಾಗಿ ತೆರೆದು, ಬರ್ನಾರ್ಡ್ ತೀಕ್ಷ್ಣ ದೃಷ್ಟಿಯಿಂದ ಹೊರಗೆ ನೋಡಿದ ಅಲ್ಲಿ ಯಾರೂ ಕಾಣಲಿಲ್ಲ. ಬಳಿಕ ಒಳಗಡೆ ಸುತ್ತಲೂ ನೋಡಿ ಮೇರಿಗೆ “ನನ್ನ ಅನಧಿಕಾರ ಪ್ರವೇಶಕ್ಕಾಗಿ ಕ್ಷಮೆಯಿರಲಿ. ಬರುತ್ತೇನೆ, ನಮಸ್ಕಾರ” ಎಂದು ಹೊರಟುಹೋದ.

* * * * *

ಅಪರಾತ್ರಿಯಲ್ಲಿ ಮೇರಿಗೆ ಎಚ್ಚರಾಯಿತು ವಿದ್ಯುದ್ದೀಪಗಳು ಕಣ್ಣು-ಕ್ಕಿದವು. ಎಲ್ಲವನ್ನೂ ಆರಿಸಿ ಮಲಗಿದ್ದೆ, ಯಾರು ಹಚ್ಚಿದರು ಎಂದವಳು ಎದ್ದು ಕುಳಿತಳು. ಕಣ್ಣುಜ್ಜಿಕೊಂಡು ಸುತ್ತಲೂ ನೋಡಿದಾಗ ಸಮೀಪದಲ್ಲಿಯೆ ಬರ್ನಾರ್ಡ್ ಕಂಡ. “ಮಹಾಶಯರೆ, ಇದು ಬಲು ಅನ್ಯಾಯ. ಈ ಅಪರಾತ್ರಿಯಲ್ಲಿ ಮತ್ತೇಕೆ ಬಂದಿರಿ? ಯಾರನ್ನು ಕೇಳಿ ಪ್ರವೇಶಿಸಿದಿರಿ?” ಎಂದು ಸಿಟ್ಟಿನಿಂದ ಕೇಳಿದಳು.

ಬರ್ನಾರ್ಡ್ ನೀರಸಸ್ವರದಲ್ಲಿ ಉತ್ತರವಿತ್ತ: “ಸುಂದರಿ, ನಾನು ಪೋಲಿಸ್ ಪಡೆಯ ಹಿರಿಯ. ಅಗತ್ಯವೆನಿಸಿದರೆ ಎಲ್ಲಿ ಬೇಕಲ್ಲಿ ಹೊಗಬಲ್ಲೆ; ಯಾರ ಒಪ್ಪಿಗೆಯ ಅವಶ್ಯಕತೆಯೂ ನನಗಿಲ್ಲ. ನೀನು ಸಿಟ್ಟಿಗೇಳುವುದು ವ್ಯರ್ಥವೇ ಸರಿ. ಶಾಂತಳಾಗಿ ನನ್ನ ಮಾತನ್ನು ಕೇಳು; ನಾನೊಂದು ಕೆಲಸ-ಕ್ಕಾಗಿ ಬಂದಿದ್ದೇನೆ.”

ಮೇರಿ ಬೆದರಿದಳು ಯಾವುದೋ ಕಠೋರ ಪರೀಕ್ಷೆ ತನ್ನೆದುರು ಬಂದು ನಿಂತಂತೆ ಅವಳಿಗೆನಿಸಿತು ಬರ್ನಾರ್ಡ್ ಏನು ಕೇಳುವನೋ ಏನು ಮಾಡುವನೋ ಎಂದು ಉತ್ಕಂಠಿತೆಯಾದಳು.

“ಸುಂದರಿ, ಅಂಜಬೇಡ. ನಾನು ಕೇಳಿದ ಪ್ರಶ್ನೆಗಳಿಗೆ, ಯಾವುದನ್ನೂ ಬಚ್ಚಿಡದೆ ಸರಿಯಾಗಿ ಉತ್ತರ ಕೊಡು; ಅದಕ್ಕಾಗಿ ನಿನಗೆ ಅಮೌಲ್ಯವಾದ ಮುತ್ತಿನ ಹಾರ ಮೆಚ್ಚಾಗಿ ಸಿಕ್ಕುವುದು. ನಿನ್ನ ಉತ್ತರದಿಂದ ನನ್ನ ಕೆಲಸ ಕೈಗೂಡದಿದ್ದರೂ ಚಿನ್ನದ ಸರ ಸಿಕ್ಕುವುದು.”

ಮೇರಿ ಮಾತನಾಡಲಿಲ್ಲ. ಮುತ್ತಿನ ಹಾರದ ಲೋಭದಿಂದ ಅವಳ ಕಣ್ಣುಗಳು ಮಿನುಗಿದವು. ಅವಳ ಮನದ ಭಾವವನ್ನರಿತು ಬರ್ನಾರ್ಡ್ “ನೀನು ಯುವರಾಜನ ಉಪಪತ್ನಿಯೆ?” ಎಂದು ಮೆಲುನಗೆಯೊಡನೆ ಪ್ರಶ್ನಿಸಿದ.

ಶಿಷ್ಟಾಚಾರಕ್ಕೆ ಒಪ್ಪುವುದಲ್ಲ ಈ ಪ್ರಶ್ನೆ. ಮೇರಿಗೆ ಅತೀವ ಕೋಪ ಬಂದಿತು. ಆದರೂ ಅವಳು ಆ ಮಾತನ್ನು ನಿರಾಕರಿಸಲಿಲ್ಲ. "ಹೀಗೆ ಮೂರ್ಖರಂತೆ ಕೇಳುವ ಅಗತ್ಯವೇನು? ಊರಲ್ಲಿ ಯಾರೂ ಅರಿಯದ ವಿಷಯವೇ?" ಎಂದಳಾಕೆ

"ನನಗೆ ಗೊತ್ತಿದೆ, ಊರ ಜನರೆಲ್ಲರೂ ಇದು ನಿಜವೆಂದೇ ಎನ್ನುತ್ತಾರೆ. ಆದರೂ ನಿನ್ನನ್ನು ಕೇಳುವುದವಶ್ಯವೆಂದೇ ಕೇಳುತ್ತೇನೆ. ಹೇಳು; ಹೌದೋ ಅಲ್ಲವೋ ಎಂದಿಷ್ಟು ಉತ್ತರ ಕೊಡು." ಬರ್ನಾರ್ಡ್ ಧೀರಭಾವದಿಂದ ನುಡಿದ.

"ಹೌದು."

"ಆಗಲೇ ನಾನು ಬಂದಾಗ ಯುವರಾಜರು ಬಂದು ಎಷ್ಟು ಹೊತ್ತಾಗಿತ್ತು?"

"ಎಷ್ಟೋ ಹೊತ್ತಾಗಿತ್ತು. ಬಹಳ ಹೊತ್ತಿನ ಮೊದಲೇ ನಾವು ಕೆಫೆ ಲಿಯೊಡರಿನಲ್ಲಿ ಒಟ್ಟಾಗಿ ಉಂಡು ಇಲ್ಲಿಗೆ ಬಂದೆವು. ಹೋಟೆಲಿನ ೧ ನೆಯ ಕೋಣೆಯನ್ನು ಬಾಡಿಗೆಯಿಂದ ಹಿಡಿದಿದ್ದೆವು ತಮಗೆ ನಂಬುಗೆಯಾಗದಿದ್ದರೆ ಹೋಟೆಲಿನ ಆಡಳಿತಗಾರನನ್ನು ಕೇಳಿಕೊಳ್ಳಬಹುದು. ಅಲ್ಲಿಂದ ಒಂದೇ ಬಂಡಿಯಲ್ಲಿ ನಾವಿಲ್ಲಿಗೆ ಬಂದೆವು. ಆಗ ಸುಮಾರು ರಾತ್ರಿ ೯ ಗಂಟೆ."

"ಯುವರಾಜರು ಇಲ್ಲಿಗೆ ಬಂದ ಬಳಿಕ ಸ್ವಲ್ಪ ಹೊತ್ತು ಹೊರಗೆ ಹೋಗಿರಲಿಲ್ಲವೇನು?" ಸ್ವಲ್ಪ ಯೋಚಿಸಿ ಬರ್ನಾರ್ಡ್ ಕೇಳಿದ.

"ಹೊರಗೇತಕ್ಕೆ ಹೋಗುತ್ತಾರೆ? ಇಲ್ಲಿಯೇ ಇದ್ದರು."

"ಏನು ಮಾಡುತ್ತಿದ್ದರು?"

"ಅದನ್ನೂ ಹೇಳಬೇಕೆ? ಮದ್ಯಪಾನ ಮಾಡುತ್ತಿದ್ದರು, ಹೊಗೆಸೊಪ್ಪು ಸೇದುತ್ತಿದ್ದರು, ನಡುನಡುವೆ ನನ್ನೊಡನೆ ಮಾತನಾಡುತ್ತಿದ್ದರು." ಮೇರಿ ಭ್ರೂಭಂಗಿಯೊಡನೆ ನುಡಿದಳು.

ಬರ್ನಾರ್ಡ್ ಇನ್ನೇನು ಕೇಳುವುದೆಂದು ಯೋಚಿಸಿದ. ಒಂದೆರಡು ನಿಮಿಷಗಳ ತರುವಾಯ "ಇಲ್ಲಿಗೆ ಮತ್ತೆ ಯಾರೂ ಬರಲಿಲ್ಲವೆ?" ಎಂದು ಪ್ರಶ್ನಿಸಿದ.

"ಯುವರಾಜರಿದ್ದ ಹೊತ್ತಿನಲ್ಲಿ ಮತ್ತೊಬ್ಬರು ಬರುವರೆ?" ಸಿಟ್ಟಿನಿಂದ ಮೇರಿ ನುಡಿದಳು.

"ಮತ್ತೇನೂ ಹೇಳುವುದು ಇಲ್ಲವೆ ?"

"ಇನ್ನೇನು ಹೇಳುವುದು? ತಾವು ಕೇಳಿದ್ದಕ್ಕೆಲ್ಲ ಉತ್ತರ ಕೊಟ್ಟಿದ್ದೇನೆ."

"ಯುವರಾಜರು ಒಳ್ಳೇ ರಸಿಕರು, ಮುತ್ತಿನ ಹಾರ ಧರಿಸಿದರೆ ನೀನ-ವರಿಗೆ ಮತ್ತಷ್ಟು ಚೆಲುವೆಯಾಗಿ ಕಾಣುತ್ತೀ." ಬರ್ನಾರ್ಡ್ ತೀಕ್ಷ್ಣ-ದೃಷ್ಟಿಯಿಂದ ಮೇರಿಯ ಮುಖವನ್ನು ನೋಡುತ್ತ ನುಡಿದ:

ಮೇರಿಯ ಹುಬ್ಬುಗಳು ಆಕುಂಚಿತವಾದವು. ಅವಳೆಂದಳು: "ಆದಕ್ಕಾಗಿ ಹಾರದ ಆಶೆಯಿಂದ ಸುಳ್ಳಾಡಲೆ? ಸುಳ್ಳಾಡಲು ನನ್ನ ಅಡಿಯೇನೂ ಇಲ್ಲ. ತಾವು ಕಲಿಸಿದಂತೆ ಹೇಳಲು ನಾನು ಸಿದ್ಧಳಿದ್ದೇನೆ."

"ನಿನಗೆ ಸುಳ್ಳುಮಾತುಗಳನ್ನು ಕಲಿಸಲು ನಾನು ಬಂದಿಲ್ಲ. ದಿಟವನ್ನು ತಿಳಿದುಕೊಳ್ಳಲು ಬಂದಿದ್ದೇನೆ. ನೀನು ಸತ್ಯವನ್ನು ಹೇಳಿದರೆ ದೇಶಕ್ಕೆ ಹಿತವುಂಟು. ಆದರೆ ನನಗೆ ಸಹಾಯ ಮಾಡಲು ನಿನ್ನಿಚ್ಛೆಯಿದ್ದಂತಿಲ್ಲ"

"ತಮಗೆ ಎಂತಹ ಸಹಾಯ ಬೇಕೆಂಬುದನ್ನು ಸ್ಪಷ್ಟವಾಗಿ ಹೇಳದಿದ್ದರೆ ಏನೆಂದು ತಿಳಿದುಕೊಳ್ಳಲಿ ?"

"ವಿದ್ರೋಹಿಗಳ ದಳಪತಿಯನ್ನು ಬಂಧಿಸಬೇಕಾಗಿದೆ. ಈ ಕಾರ್ಯದಲ್ಲಿ ನನಗೆ ನೆರವಾದವರಿಗೆ ಇಪ್ಪತ್ತು ಸಾವಿರರೂಪಾಯಿ ಕೊಡುತ್ತೇನೆ"

ಮೇರಿಯ ಕಣ್ಣುಗಳು ಮತ್ತೆ ಬೆಳಗಿದವು. ಸ್ವಲ್ಪ ಹಿಂದೆ ಮುಂದೆ ನೋಡುತ್ತ ಅವಳೆಂದಳು: "ವಿದ್ರೋಹಿಗಳ ದಳಪತಿ ಇಂದು ರಾತ್ರಿ ನನ್ನ ಕೋಣೆಗೆ ಬಂದಿದ್ದನೆಂದು ತಾವು ನಿಜವಾಗಿ ನಂಬಿರುವಿರಾ ?"

ಬರ್ನಾರ್ಡ್ ಹೇಳಿದ: "ಇಪ್ಪತ್ತು ಸಾವಿರ ರೂಪಾಯಿ ಎಂದರೆ ಕಡಿಮೆಯಾಗಲಿಲ್ಲ. ನಾನು ಆಡಿದಂತೆ ಮಾಡುವ ಮನುಷ್ಯ. ಇಷ್ಟು ಹಣ ಒಮ್ಮೆಲೆ ಸಿಕ್ಕರೆ ಎಷ್ಟು ಅನುಕೂಲ, ವಿಚಾರಮಾಡು. ಇಷ್ಟು ಧನ ಸಿಕ್ಕುವುದು ಮಾತ್ರವಲ್ಲ, ಈ ಕೆಲಸವನ್ನು ಮಾಡಿಕೊಟ್ಟರೆ ಎಷ್ಟೋ ನಿರಪರಾಧಿಗಳ ಜೀವವನ್ನು ಉಳಿಸಿದಂತಾಗುತ್ತದೆ. ಆದರೆ ಇನ್ನೂ ಹಿಂದು ಮುಂದು ನೋಡಿದರೆ ನಡೆಯುವಂತಿಲ್ಲ. ಅವಧಿ ಸ್ವಲ್ಪವಿದೆ. ಇಪ್ಪತ್ತು ನಾಲ್ಕು ಗಂಟೆಗಳಲ್ಲಿ ನನ್ನ ಸೂಚನೆಯನ್ನೊಪ್ಪದಿದ್ದರೆ, ಈ ಹಣವೂ ಕೈಬಿಟ್ಟುಹೋಗುವುದು. ಅನೇಕ ಸದ್ಗೃಹಸ್ಥರ ಪ್ರಾಣಗಳೂ ಸಂಕಟದಲ್ಲಿ ಬೀಳುವವು."

೧೩

ಜಾನ್ ಪಿಟರ್ಸ್ ಮತ್ತು ಅವನ ಕಕ್ಕ ಮಾತನಾಡುತ್ತಿದ್ದರು.

"ಕಕ್ಕಾ, ನಾನೀಗ ಬಹಳ ತೊಡಕಿನಲ್ಲಿ ಬಿದ್ದಿದ್ದೇನೆ."

ಮಗನ ಮಾತನ್ನು ಕೇಳಿ ರಾಜನು ಹುಬ್ಬು ಮುದುರಿಸಿದ. ಮಗ ಪ್ರಜಾತಂತ್ರದ ಪಕ್ಷಪಾತಿಯೆಂದು ಅವನರಿತಿದ್ದ. ಆದುದರಿಂದ ಅವನನ್ನು ಹಚ್ಚಿಕೊಳ್ಳದೆ ಮಾತನಾಡಿದ. "ನಿನ್ನೊಡನೆ ನನ್ನ ವಿಚಾರವೇ ಹೊಂದಿಕೆಯಾಗುವುದಿಲ್ಲ. ನಿನ್ನ ಹುಚ್ಚಾಟವನ್ನು ಕೇಳಲು ನನ್ನ ಮನಸಿಲ್ಲ. ನೀನು ಈ ವಿಷಯವನ್ನು ಬರ್ನಾರ್ಡನೊಂದಿಗೆ ಯೋಚಿಸಿದ ಹಾಗಿದೆ. ಆ ಮನುಷ್ಯ ಮಹಾ ಹುಚ್ಚ. ಆತ ನನಗೆ ಹೇಳಿದ್ದೇನು ಗೊತ್ತೆ? ನಿನ್ನೆ ಅರಮನೆಯ ಬಳಿ ಶ್ರೀಮತಿ ಕ್ಲಾರ್ತುವನ್ನು ಮುತ್ತಿ ಮರ್ಯಾದೆಗೇಡುಮಾಡಿದ ಪುಂಡರನ್ನು ಬಿಟ್ಟುಬಿಡಬೇಕಂತೆ! ನಾನು ಅವರನ್ನು ಬಿಟ್ಟೇನೆ? ಅವರನ್ನು ಗುಂಡಿಟ್ಟು ಕೊಲ್ಲಿಸಿದಾಗ ನನ್ನ ಮೈಯುರಿ ತಣ್ಣಗಾಗುವುದು. ಆ ಹತಭಾಗ್ಯರ ಸಾಹಸವೆಷ್ಟು, ಸ್ಪರ್ಧೆಯೆಷ್ಟು! ರಾಜ ಯಾರೊಡನಾದರೂ ವಿಹಾರ ಮಾಡುತ್ತಾನೆ, ವಿಲಾಸವಾಡುತ್ತಾನೆ; ಅದಕ್ಕೆ ಈ ಮಕ್ಕಳೇಕೆ ಅಡ್ಡಬರಬೇಕು?"

"ಆ ಜನರನ್ನು ಬಿಡಬೇಕೆಂಬುದು ಕೇವಲ ಬರ್ನಾರ್ಡರ ಅಭಿಪ್ರಾಯವಲ್ಲ; ಸುತ್ತುಮುತ್ತಲಿನ ಪರಿಸ್ಥಿತಿಯನ್ನು ನೋಡಿದರೆ ನನಗೂ ಅದು ಸರಿಕಾಣುತ್ತದೆ ಪಾರ್ಲಿಮೆಂಟ್ ಸದಸ್ಯರ ಆಯ್ಕೆಯ ಫಲಿತಾಂಶ ಹೇಗಾಗಿದೆ ಬಲ್ಲಿರೇನು?"

"ಹೌದು, ಕೇಳಿದ್ದೇನೆ. ಸಾಧಾರಣತಂತ್ರವಾದಿಗಳ ಪಕ್ಷ ಬಲಿತಿದೆ, ಸಂಖ್ಯೆಯಲ್ಲಿ ನಮಗಿಂತ ಅವರು ಗಟ್ಟಿಗರಾಗಿದ್ದಾರೆ. ಆದರೆ ರಾಜನಿಂದ ನಿಯುಕ್ತರಾಗಬೇಕಾದ ಸದಸ್ಯರು ಸೇರಿದರೆ ನಮ್ಮ ಪಕ್ಷವೇ ಬಲಿಷ್ಠವಾಗುವುದು."

ಒಂದು ಸಿಗಾರೇಟನ್ನು ಹೊತ್ತಿಸಿ ಸೇದುತ್ತ ಪಿಟರ್ಸ್ ಉತ್ತರಿಸಿದ: "ಖಂಡಿತ ಹಾಗಾಗುವುದಿಲ್ಲ,—ಪಣತೊಟ್ಟು ಹೇಳಬಲ್ಲೆ. ತಮ್ಮ ನಿಯೋಜನೆಯಾದನೇಲೂ ಸಾಧಾರಣ ತಂತ್ರವಾದಿಗಳ, ಎಂದರೆ ತಮ್ಮ ಅಭಿಪ್ರಾಯದಲ್ಲಿ ಕ್ರಾಂತಿಕಾರಕರ ಸಂಖ್ಯೆಯೇ ಹೆಚ್ಚಾಗುವುದು. ಮತಾಧಿಕ್ಯದಿಂದ ಅವರು ಹೇಗೆ ಬೇಕೋ ಹಾಗೆ ಮಾಡುವರು; ಅದನ್ನು ತಾವೆಂತು ತಡೆಯುವಿರಿ?"

" ಪಾರ್ಲಿಮೆಂಟನ್ನು ಮುರಿದು ಬಿಡುತ್ತೇನೆ."

" ಅದರ ಫಲವೇನಾದೀತೆಂದು ಬಲ್ಲಿರಾ ? ನಾವು ರಾಜ್ಯಭ್ರಷ್ಟರಾಗುವುದು. ಪ್ರಜಾವಿಪ್ಲವ ತಪ್ಪಿದ್ದಲ್ಲ."

ರಾಜನಿಗೆ ಸಿಟ್ಟೇರಿ ಕಣ್ಣುಗಳು ಕೆಂಪಾದವು. ಮುಪ್ಪಿನಿಂದ ಜೀರ್ಣವಾದ ಅವನ ಮೈಯಲ್ಲಿ ಹರಯದ ಹುರುಪು ಮರಳಿ ಬಂದಿತು. " ತಮ್ಮಾ, ರಾಜವಂಶದಲ್ಲಿ ಹುಟ್ಟಿ ಹೀಗೆ ಕಾಪುರುಷನಂತೆ ಮಾತನಾಡುವೆಯಾ ? ನಮ್ಮ ಪಿತ್ರಾರ್ಜಿತ ಸಿಂಹಾಸನವನ್ನು ಪ್ರಜೆಗಳು ಕಿತ್ತುಕೊಳ್ಳಬೇಕೆ ? " ಎಂದು ಗುಡುಗಿದ.

ಪಿಟರ್ಸ್ ತನ್ನ ಧೀರತೆಯನ್ನು ಬಿಡಲಿಲ್ಲ. " ಸುತ್ತುಮುತ್ತ ಕಾಣುತ್ತಿರುವುದನ್ನೇ ನಾನು ತಮಗೆ ಹೇಳಿದೆ. ಇದಕ್ಕಾಗಿ ನನ್ನನ್ನು ಕಾಪುರುಷನೆಂದು ಬಯ್ದರೆ ಉಪಾಯವಿಲ್ಲ. ಈ ತಿರಸ್ಕಾರವನ್ನು ನಾನು ಶಿರಸಾವಹಿಸುವೆ; ಆದರೆ ಇಲ್ಲದ್ದನ್ನು ಹೌದೆನ್ನುವುದು ನನ್ನಿಂದಾಗದು. ಪ್ರಜೆಗಳು ನಮ್ಮನ್ನು ಕಂಡರೆ ಅಸಹ್ಯಪಡುವರೆಂಬುದನ್ನು, ಹೇಗೆ ಅಲ್ಲಗಳೆಯಲಿ ? " ಎಂದ.

" ಅಸಹ್ಯಪಡುತ್ತಾರೆಯೆ ? ಅವರನ್ನು ಹೆದರಿ ಬಗ್ಗಿ ಬರುವಂತೆ ವ್ಯವಸ್ಥೆ ಮಾಡಲೇಬೇಕು. ನಮ್ಮ ಕೈಯಲ್ಲಿ ಚಮ್ಮಟಿಗೆ ಉಂಟೆಂಬುದನ್ನು ಮರೆತು ಬಿಟ್ಟೆಯಾ ? "

" ಎಂಥ ಚಮ್ಮಟಿಗೆ ಕಕ್ಕ ?"

" ಬುದ್ಧಿಯೇ ಕೊಂಚ ಕಡಿಮೆ ನಿನಗೆ ! ಚಮ್ಮಟಿಗೆ ಯಾವುದೆಂದು ಗೊತ್ತಿಲ್ಲವೆ ? ದಂಡು. ನಮ್ಮ ಕೈಯಲ್ಲಿ ದಂಡಿದೆ. ಸೇನಾಪತಿ ಗೋಬಿನರರಿಂದ ನಿನ್ನೆ ರಾತ್ರಿ ವರದಿ ಬಂದಿದೆ; ಶಿಬಿರದಲ್ಲಿ ಏಳುಸಾವಿರದ ಆರುನೂರು ಸುಸಜ್ಜಿತ ಸೈನಿಕರಿದ್ದಾರಂತೆ."

" ಅದರಿಂದೇನೂ ವಿಶೇಷ ಲಾಭವಾಗಲಾರದು. ಅವರು ವಿದೇಶೀಯ ಶತ್ರುಗಳೊಡನೆ ಕಾದಾಡಲು ಸಿದ್ಧರಿದ್ದಾರೆ, ದೇಶದ ಜನರ ಮೇಲೆ ಗುಂಡು ಹಾರಿಸಲು ಅವರೆಂದೂ ಒಪ್ಪಲಾರರು."

" ರಾಜನ ಬೆನ್ನುಕಟ್ಟಿ ಅವರು ರಾಜನ ಶತ್ರುಗಳೊಡನೆ ಅವರು ಯಾರೇ ಇರಲಿ ಕಾದಲು ಸಿದ್ಧರಿದ್ದಾರೆ. ಪ್ರಜೆಗಳು ರಾಜನ ಶತ್ರುಗಳಾಗಿ ನಿಂತಾಗಲೂ ಅವರು ಯುದ್ಧಕ್ಕೆ ಒಲ್ಲೆನ್ನುವುದಿಲ್ಲ."

"ನನ್ನ ಮಾತಿನಲ್ಲಿ ವಿಶ್ವಾಸವಿಲ್ಲದಿದ್ದರೆ ಪ್ರಮಾಣಿಸಿ ನೋಡಬಹುದು. ರಾಜದ್ರೋಹಿಗಳು ಅವರನ್ನು ಒಡೆದುಕೊಂಡಿದ್ದಾರೆ."

"ನಿನ್ನ ಮಾತು ಸತ್ಯವಿದ್ದರೆ ನಾಳೆಯೆ ನಾನು ಜರ್ಮನಿಗೆ ದೂತ ನನ್ನು ಕಳಿಸುವೆ."

"ಶಕ್ತಿಶಾಲಿಗಳಾದ ನೆರೆಹೊರೆಯವರು ದುರ್ಬಲರ ಬೆನ್ನು ಕಟ್ಟಿ ನಷ್ಟಕ್ಕೀಡಾಗಲು ಒಪ್ಪಿಯಾರೆಂದು ನನಗೆನಿಸುವುದಿಲ್ಲ. ಒಂದುವೇಳೆ ಅವರು ಸಹಾಯಕ್ಕೆ ಬಂದರೂ ಪರಕೀಯರ ಅನುಗ್ರಹದಿಂದ ಸಿಂಹಾಸನದಲ್ಲಿ ಕುಳಿತಿರುವುದು ಲಾಂಛನಾಸ್ಪದವೆಂದು ಎನಿಸುವುದಿಲ್ಲವೆ?"

"ಭಾವುಕತೆಯಿಂದ ಕಾರ್ಯವು ಯಾವಾಗಲೂ ಸಫಲವಾಗುತ್ತಿರುವುದಿಲ್ಲ. ಯುಕ್ತಿಚಾತುರ್ಯಗಳಿಂದ ಕೆಲಸಮಾಡಿಕೊಳ್ಳುವುದೇ ಬುದ್ಧಿವಂತಿಕೆ. ಜರ್ಮನಿಯ ನೆರವಿನಿಂದ ಗದ್ದುಗೆಯನ್ನು ಸ್ಥಿರಪಡಿಸಿಕೊಂಡರೆ ನಷ್ಟವೇನು ? ಗಂಡಾಂತರ ಬೇಗನೆ ದೂರಾಗುವುದು ; ಪ್ರಜೆಗಳು ಚೆನ್ನಾಗಿ ಅಂಕೆಯಲ್ಲಿ ಬರುವರು."

"ಹೇಗೆ ಹೇಳಿದರೂ ತಮಗೆ ತಿಳಿಯದಿದ್ದರೆ ಇನ್ನೇನು ಹೇಳಲಿ? ನಮ್ಮ ಅದೃಷ್ಟದಲ್ಲಿ ದುಃಖವೇ ಬರೆದಿದೆ. ಪ್ರಜೆಗಳು ಕ್ಷೋಭೆಗೊಂಡು ನಮ್ಮನ್ನು ಕೊಲ್ಲದೆ ಬಿಟ್ಟರೆ ಪುಣ್ಯ."

ರಾಜನು ಬೇಸರದಿಂದ ನುಡಿದ : "ಜಾನ್, ನೀನು ಹುಚ್ಚುಚ್ಚಾರ ಮಾತನಾಡಿದರೆ ನಾನು ಬಾಯಿಮುಚ್ಚಿಕೊಳ್ಳದೆ ವಿಧಿಯಿಲ್ಲ. ಈ ಹುಚ್ಚುತನವನ್ನು ಬಿಟ್ಟುಬಿಡು. ನಮ್ಮ ಕೆಟ್ಟನಡತೆಯಿಂದಲೇ ಪ್ರಜೆಗಳು ಅಸಂತುಷ್ಟರಾಗಿ ಉದ್ರೇಕಗೊಂಡಿದ್ದಾರೆಂದು ಹೇಳುತ್ತೀ. ಅದು ನಿಜವಿದ್ದರೆ ತಪ್ಪು ಯಾರದು? ಪ್ರಜೆಗಳಿಗೆ ಹೆಚ್ಚು ಅಪ್ರಿಯರು ಯಾರು? ನಾನೋ ನೀನೋ? ನಾವು ಯಾರೂ ಸಜ್ಜನರಲ್ಲ, ಇಬ್ಬರೂ ದುರಾಚಾರಿಗಳೆ. ಆದರೆ ನಾನು ಮಾಡಿದ ಕುಕರ್ಮವನ್ನು ಬಚ್ಚಿಡಬಲ್ಲೆ, ನಿನಗದು ಗೊತ್ತಿಲ್ಲ. ನೀನೊಂದು ಹೇಸಿಕೆಲಸ ಮಾಡಿದರೆ ಅದು ಎಲ್ಲರಿಗೂ ಗೊತ್ತಾಗಿಬಿಡುತ್ತದೆ. ಹಾದಿಯೊಳಗೆ ಬಟ್ಟೆಯೊಳಗೆ ಎಲ್ಲೆಲ್ಲಿಯೂ ಅದರ ಚರ್ಚೆ ನಡೆಯುವುದು. ಅದೇ ನನ್ನ ವಿಷಯ ನರಪ್ರಾಣಿಗೂ ತಿಳಿಯುವುದಿಲ್ಲ. ನಾನು ಬದುಕಿರುವಷ್ಟು ದಿನವೂ ದೇಶದಲ್ಲಿ ಅರಾಜಕತೆಯ ಭಯವಿಲ್ಲ. ನೀನು ಸಾವಧಾನ

ಸಾಗದೆ ಹೋದರೆ, ನನ್ನ ತರುವಾಯ ಭಯಂಕರ ಗಂಡಾಂತರಕ್ಕೆ ಸಿಲುಕುವೆ."

ಕನ್ಯನ ಉಪದೇಶಕ್ಕೆ ಪಿಟರ್ಸ್ ಏನೂ ಉತ್ತರಕೊಡಲಿಲ್ಲ. ನಿಧಾನವಾಗಿ ಕಿಡಿಕಿಯ ಹತ್ತಿರಹೋಗಿ ಹೊರಗೆ ನೋಡತೊಡಗಿದ. ಇದಿರಿಗೆ ಗಟ್ಟಿಯಾದ ಕಬ್ಬಿಣದ ಬಾಗಿಲು. ದ್ವಾರರಕ್ಷಕರು ಶಸ್ತ್ರಪಾಣಿಗಳಾಗಿ ನಿಂತಿದ್ದರು. ಹತ್ತಿರವೆ ರಾಜ ಪಥ. ಜನರು ಅಡ್ಡಾಡುತ್ತಿದ್ದರು, ಕೂಗಾಡುತ್ತಿದ್ದರು, ಆಗಾಗ ಅರಮನೆಯ ಕಡೆ ಕೆಟ್ಟಗಣ್ಣಿಂದ ನೋಡುತ್ತಿದ್ದರು. ಪಿಟರ್ಸ್ ಎಷ್ಟೋ ಹೊತ್ತು ಅತ್ತ ನೋಡುತ್ತಿದ್ದು, ರಾಜನ ಕಡೆಗೆ ಹೊರಳಿದಾಗ, ಆತನು ತನ್ನ ಕಾರ್ಯದರ್ಶಿಯೊಡನೆ ಮಾತನಾಡುತ್ತಿದ್ದ. ಕಾರ್ಯದರ್ಶಿಯನ್ನು ಕಳಿಸಿಕೊಟ್ಟು ರಾಜ ಪಿಟರ್ಸನಿಗೆಂದ : " ಬರ್ನಾರ್ಡ್ ನನ್ನನ್ನು ಕಾಣಲು ಹೊರಗೆ ಕಾದಿದ್ದನಂತೆ. ಅವನನ್ನೀಗ ಕಾಣಲು ನಿನಗೇನಾದರೂ ಅಡ್ಡಿಯುಂಟೊ ?"

" ಇಲ್ಲ ಯಾವ ಅಡ್ಡಿಯೂ ಇಲ್ಲ. ಅವರ ಮಾತನ್ನು ಕೇಳಿಕೊಳ್ಳುವುದರಿಂದ ನಷ್ಟವೇನು ?"

ಅರಸನ ಅಪ್ಪಣೆಯಂತೆ ಬರ್ನಾರ್ಡ್ ಒಳಗೆ ಬಂದ. ಅಲ್ಲಿ ಪಿಟರ್ಸನನ್ನು ಕಂಡು ಅವನು ಮುಗುಳ್ನಕ್ಕ. ಇಬ್ಬರ ಕಡೆಗೂ ನೋಡಿ ಅರಸನೆಂದ: " ಇಂದು ಮುಂಜಾನೆ ನಿಮ್ಮಿಬ್ಬರ ಭೆಟ್ಟಿಯಾಗಿತ್ತೇನು ?"

" ಇಲ್ಲ ಮಹಾರಾಜರೆ, ನಿನ್ನೆ ರಾತ್ರಿ ಆಗಿತ್ತು." ಬರ್ನಾರ್ಡ್ ಹೇಳಿದ.

" ಎಲ್ಲಿ ಭೆಟ್ಟಿಯಾಗಿತ್ತೆಂಬುವನ್ನು ತಿಳಿದುಕೊಳ್ಳಬೇಕೆಂದು ನನಗೆ ಹಟವಿಲ್ಲ. ಆಗಿರಬಹುದು, ಎಲ್ಲಿಯಾದರೂ ಅಯೋಗ್ಯಸ್ಥಳದಲ್ಲಿ. ಇರಲಿ. ಏನಾದರೂ ಹೊಸ ಸುದ್ದಿ ಉಂಟೆ, ಮಿ. ಬರ್ನಾರ್ಡ್ ?"

ಬರ್ನಾರ್ಡ್ ಹಿಡಿದುಬಿಟ್ಟಂತೆ ಉತ್ತರವಿತ್ತ : " ವಿಶೇಷವೇನೂ ಹೊಸಸುದ್ದಿಯಿಲ್ಲ. ನಿನ್ನೆ ರಾತ್ರಿ ನನ್ನ ಅನುಚರರು ವಿದ್ರೋಹಿಗಳ ಗುಪ್ತ ಸಭೆಯನ್ನು ಮುತ್ತಿದ್ದರು. ಅದರಿಂದೇನೂ ಪ್ರಯೋಜನವಾಗಲಿಲ್ಲ"

ದೊರೆ ಹುಬ್ಬುಗಂಟಿಕ್ಕಿದ: " ಈ ಸಲವೂ ಸೋತಿರಾ? ಅದನ್ನು ಹೇಳುವುದಕ್ಕಾಗಿ ಕಷ್ಟಪಟ್ಟು ಇಲ್ಲಿಯವರೆಗೆ ಬಂದಿರಾ ?"

ಬರ್ನಾರ್ಡ್ ಮುಖಭಂಗಿತನಾಗಿ ಹೇಳಿದ : "ಮಹಾರಾಜ, ನಾನು ಸೋಲನ್ನು ಒಪ್ಪಿಕೊಳ್ಳುತ್ತೇನೆ. ಆದರಿಂದ ನನಗೆ ವ್ಯಸನವಾಗುವುದಿಲ್ಲ. ಎಳೆ ಸಿದ್ಧವಾಗಿದೆ, ಕಾರ್ಯ ಕೈಗೂಡುವಲ್ಲಿ ಸಂದೇಹವಿಲ್ಲ. ಸ್ವಲ್ಪ ವಿಲಂಬವಾದೀತು ಅಷ್ಟೆ."

ದೊರೆ ಅಸಹಿಷ್ಣುಭಾವದಿಂದ ಮಾತನಾಡಿದ : "ಬರ್ನಾರ್ಡ್, ಕಾರ್ಯ ಈಡೇರುವುದಕ್ಕೆ ತಡವುಂಟೆಂದು ಎಂದಿನಿಂದಲೂ ಹೇಳುತ್ತಿದ್ದೀರಿ. ಮತ್ತೆ ಮತ್ತೆ ಸಮಯ ತೆಗೆದುಕೊಳ್ಳುತ್ತಿದ್ದೀರಿ. ಈಗ ಇನ್ನೆಷ್ಟು ಸಮಯ ಬೇಡಲು ಬಂದಿರುವಿರಿ ? ನಗರದ ಇಂದಿನ ಸ್ಥಿತಿ ಹೇಗಿದೆ ?"

ಈ ತಿರಸ್ಕಾರದಿಂದ ಬರ್ನಾರ್ಡ್ ಗಂಭೀರನಾದ. "ನಾನು ಎಂತಹ ವಿಷಮಪರಿಸ್ಥಿತಿಯಲ್ಲಿ ಕೆಲಸಮಾಡುತ್ತಿದ್ದೇನೆಂಬುದರ ಕಲ್ಪನೆ ತಮಗಿದ್ದರೆ, ನನ್ನ ವಿಷಯದಲ್ಲಿ ತಾವು ಇಷ್ಟೊಂದು ಅಸಂತುಷ್ಟರಾಗುತ್ತಿದ್ದಿಲ್ಲ ; ತಿರಸ್ಕಾರ ತೋರುತ್ತಿದ್ದಿಲ್ಲ. ಇನ್ನೂ ಕ್ಷೋಭದ ಮಾತೆಂದರೆ, ನಗರದ ಸ್ಥಿತಿಯನ್ನು ಕಂಡು ನಾನು ಅತ್ಯಂತ ಉತ್ಕಂಠಿತನಾಗಿದ್ದೇನೆ. ಕೆಲದಿನಗಳಲ್ಲಿಯೇ ಪ್ರಜೆ ಬಂಡೇಳುವಂತೆ ಕಾಣುತ್ತಿದೆ ; ಶೀಘ್ರವೇ ಅವರನ್ನು ಹತ್ತಿಕ್ಕುವುದು ಅಗತ್ಯ. ಆ ಬಗ್ಗೆ ಪ್ರಭುಗಳು ವಿಚಾರವಿನಿಮಯಕ್ಕಾಗಿ ಸೇನಾಪತಿಯನ್ನು ಕರೆಸಿದರೆ ಅನುಕೂಲ. ಸೈನಿಕರ ಮನೋಭಾವವನ್ನು ಅರಿತುಕೊಳ್ಳುವುದು ಅವಶ್ಯ."

ಈ ಮಾತನ್ನು ಕೇಳಿ ರಾಜನ ಮುಖವು ಅತ್ಯಂತ ಗಂಭೀರವಾಯಿತು. ತೀಕ್ಷ್ಣದೃಷ್ಟಿಯಿಂದ ಬರ್ನಾರ್ಡನ ಮುಖವನ್ನು ನೋಡುತ್ತ ಬೇಸರದಿಂದ ಕೇಳಿದ: "ನೀವು ಈ ಯುವರಾಜನೊಡನೆ ಮಾತಾಡಿಕೊಂಡಿರುವಿರೇನು ?"

ಬರ್ನಾರ್ಡನೆಂದ: "ಇಲ್ಲ ಮಹಾರಾಜರೆ, ಇವರೊಡನೆ ನಾನು ಯಾವ ಆಲೋಚನೆಯನ್ನೂ ಮಾಡಿಲ್ಲ."

"ಒಳ್ಳೇದು, ಸೇನಾಪತಿಯನ್ನು ಈಗಲೇ ಕರೆಸುತ್ತೇನೆ. ಪ್ರಜೆಗಳು ವಿದ್ರೋಹವೆಸಗಿದರೆ, ಚೆನ್ನಾಗಿ ಹಣಿದುಬಿಡಬೇಕು.-ಇನ್ನೊಮ್ಮೆಂದೂ ತಲೆಯೆತ್ತಿರಬಾರದು" ಎಂದು ರಾಜ ರಾಯರ್ದರ್ಶಿಯನ್ನು ಕರೆದು ಸೇನಾಪತಿಯನ್ನು ಕರೆತರುವಂತೆ ಹೇಳಿ ಕಳಿಸಿಕೊಟ್ಟ. ಬಳಿಕ ಮತ್ತೆ ಬರ್ನಾರ್ಡನಿಗೆಂದ:

"ಪ್ರಜೆಗಳು ಏಕೆ ವಿದ್ರೋಹಿಗಳಾಗಿದ್ದಾರೆ? ಮೂರು ವರುಷಗಳ ಹಿಂದೆ ಅವರಿಗೆ ಯಾವ ಅಸಂತೋಷವೂ ಇರಲಿಲ್ಲ. ಈಗ ಈ ಪರಿವರ್ತನೆಗೆ ಕಾರಣವೇನು?"

"ಮಹಾರಾಜ, ಒಬ್ಬ ದುಷ್ಟ ಅವರನ್ನು ಕುಣಿಸುತ್ತಿದ್ದಾನೆ. ಅವನೇ ವಿದ್ರೋಹೀದಳದ ನಾಯಕ. ಪ್ರಜೆಗಳ ಬಂಡಾಯಕ್ಕೆ ಅವನೇ ಮೂಲ."

"ಕಳೆದ ಮೂರು ವರ್ಷಗಳಿಂದಲೂ ಅವನು ಜನರನ್ನು ಉತ್ತೇಜನಗೊಳಿಸುತ್ತಿದ್ದಾನೆ; ನಾಡಿಗೆ ಕೇಡು ಮಾಡುತ್ತಿದ್ದಾನೆ; ಆದರೂ ಇಷ್ಟು ದೀರ್ಘಕಾಲದಲ್ಲಿಯೂ ಅವನನ್ನು ಹಿಡಿಯುವುದು ನಿಮ್ಮಿಂದಾಗಲಿಲ್ಲ. ನಿಮ್ಮೀ ಅಕ್ಷಮತೆ ಲಜ್ಜಾಸ್ಪದವಲ್ಲವೆ?"

"ಮಹಾರಾಜ, ಹೌದು ನೀವೆನ್ನುವ ಹಾಗೆಯೇ ಆಗಿದೆ ಈ ಅಕ್ಷಮತೆಯ ಚಿಂತೆ ಹಗಲಿರುಳೂ ನನ್ನೆದೆಯನ್ನು ಕಿವುಚುತ್ತಿದೆ; ಯಾವ ಕಠಿನ ಶಿಕ್ಷೆಯೂ ಇಷ್ಟು ಅಸಹನೀಯವಿರಲಾರದು."

ರಾಜನಿಗೆ ಸಿಟ್ಟುಬಂದಿತು. "ನೀವು ನಿರುಪಯೋಗಿ! ನಮ್ಮ ರಾಜ್ಯವೇನೂ ದೊಡ್ಡದಲ್ಲ; ಬಹುಸಂಖ್ಯ ಪೋಲಿಸರು ನಿಮ್ಮ ಕೈಯೊಳಗಿದ್ದಾರೆ; ನಿಮ್ಮಲ್ಲಿ ಪತ್ತೆದಾರರಿಗೂ ಪುಂಡರಿಗೂ ಕೊರತೆಯಿಲ್ಲ. ಆದರೂ ಸಂಕೋಚವಿಲ್ಲದೆ ಹೇಳುತ್ತಿದ್ದೀರಿ– ವಿದ್ರೋಹಿಗಳ ದಳಪತಿಯನ್ನು ಹಿಡಿಯುವುದು ಕಠಿನವೆಂದು!"

"ಮಹಾರಾಜರೆ, ನಿಜ, ಇದು ಬಲು ಲಜ್ಜೆಯ ವಿಷಯ. ಆದರೆ ಅವನು ಎಂಥ ಧೂರ್ತ, ಅವನ ಕಾರ್ಯಪ್ರಣಾಲಿ ಎಂಥ ಅಸಾಧಾರಣ ಎಂಬುದನ್ನು ದಯವಿಟ್ಟು ಮರೆಯಬೇಡಿರಿ ಅವನು ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಪ್ರಚುರಪಡಿಸಿ ಜನರ ತಲೆತಿರುಗಿಸುತ್ತಿದ್ದಾನೆ; ಅತ್ಯಂತ ವ್ಯವಸ್ಥಿತವಾಗಿ ದಳವನ್ನು ಸಂಘಟಿಸುತ್ತಿದ್ದಾನೆ. ನನ್ನನ್ನು ಬಿಡಿರಿ, ಹಿರಿಯ ವಿದ್ರೋಹಿಗಳಿಗೂ ಅವನು ಯಾರು, ಇರುವುದೆಲ್ಲಿ ಎಂಬುದು ತಿಳಿದಿಲ್ಲ. ಆರು ಸಲ ವಿದ್ರೋಹಿಗಳ ಸಭೆಗೆ ಅವನು ಬಂದಿದ್ದ; ಒಮ್ಮೆಯೂ ಒಬ್ಬರೂ ಅವನ ಮೋರೆಯನ್ನು ನೋಡಿಲ್ಲವೆಂದರೆ! ಜನರಲ್ಲಿ ಅವನು ದ್ವಿರೂಪಿಯಾಗಿ ವ್ಯವಹರಿಸುತ್ತಿದ್ದಾನೆ. ಅವನೀಗಲೂ ಈ ನಗರದಲ್ಲಿಯೆ ಇದ್ದಾನೆ, ಸಂದೇಹವಿಲ್ಲ."

“ ಇದೇ ನಮಗೆ ದೊಡ್ಡ ಲಾಭ! ನಗರದಲ್ಲಿಯೇ ಇದ್ದಾನೆನ್ನುತ್ತೀರಿ, ಆದರೆ ಹಿಡಿಯುವುದು ಕೈಲಾಗಲೊಲ್ಲದು. ನಿಮ್ಮ ದೌರ್ಬಲ್ಯವನ್ನು ಮುಚ್ಚಿಕೊಳ್ಳುವುದಕ್ಕೆ ಅವನ ಚಾತುರ್ಯವನ್ನು ಹೊಗಳುತ್ತಿರುವಿರಿ. ಹೇಳಿರಿ, ಇಂದು ಹಿಡಿಯಬಲ್ಲಿರಾ ?”

ಬರ್ನಾರ್ಡ್ ಗೋಣುಹಾಕಿ ಉತ್ತರವಿತ್ತ : “ ಇಲ್ಲ, ಮಹಾರಾಜ, ಇಂದು ಸಾಧ್ಯವಿಲ್ಲ. ಅವನು ಯಾರೆಂಬುದನ್ನು ಮಾತ್ರ ನಾಡದಿನೊಳಗೆ ಗೊತ್ತುಹಚ್ಚೇನು ”

“ ನಾಡದಿನವರೆಗೆ ಏಕೆ ಅವಧಿ ಬೇಕು ?” ಪಿಟರ್ಸ್ ಕೇಳಿದ.

“ ಶ್ರೀಮತಿ ಕ್ಲಾರ್ಕಳನ್ನು ಸುಲಿದುಕೊಂಡ ಜನರನ್ನು ಫೌಜದಾರಿಗೆ ಗುರಿಪಡಿಸಿದರೆ, ವಿದ್ರೋಹಿಗಳ ದಳಪತಿ ಲಕ್ಷ ಜನರೊಂದಿಗೆ ಅರಮನೆಯನ್ನು ಮುತ್ತುವನೆಂದು ವದಂತಿಯಿದೆ. ಅದು ನಿಜವಾದರೆ ಆಗ ದಳಪತಿ ಯಾರೆಂದು ಗೊತ್ತಾಗುವುದು.” ಎಂದ ಬರ್ನಾರ್ಡ್.

“ ಲಕ್ಷಜನರು ! ಅಷ್ಟು ಜನ ವಿದ್ರೋಹಿಗಳು ರಾಜಧಾನಿಯಲ್ಲಿದ್ದಾರೆಯೆ ?” ರಾಜ ಬೆರಗಾಗಿ, ಸ್ವಲ್ಪ ಗಾಬರಿಯಿಂದಲೇ ಕೇಳಿದ.

ಬರ್ನಾರ್ಡ್ ಹೇಳಿದ : “ ಮಹಾರಾಜ, ಇಲ್ಲಿಯೇ ಅಷ್ಟಿಲ್ಲ ನಿಜ. ಮುಫಃಸ್ಸಲದಲ್ಲಿ ಮತ್ತು ಇತರ ಜಿಲ್ಲೆಗಳಲ್ಲಿ ಇದ್ದಾರೆ; ಅವರೆಲ್ಲರ ಸಂಖ್ಯೆ ಒಟ್ಟು ಲಕ್ಷಕ್ಕೆ ಕಡಿಮೆಯಾಗಲಾರದು. ಮುಫಃಸ್ಸಲದಲ್ಲಿ ಸಣ್ಣ ಸಣ್ಣ ಊರುಗಳಲ್ಲಿದ್ದ ವಿದ್ರೋಹಿಗಳ ಎಲ್ಲ ಕೇಂದ್ರಗಳಲ್ಲಿ ಅವರು ಯಥಾಕ್ರಮದಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ಅವರ ಕಾರ್ಯಪ್ರಣಾಲಿಯಲ್ಲಿ ಯಾವ ದೋಷವೂ ಇಲ್ಲ. ರಾಜಧಾನಿಗೆ ಬರುವುದಕ್ಕಾಗಿ ಅವರು ಮೊದಲೇ ಸ್ಪೆಶಲ್ ಟ್ರೇನಿನ ಏರ್ಪಾಡು ಮಾಡಿಕೊಂಡಿದ್ದಾರೆ. ನಾವು ಮುಂಚೆಯೇ ರೇಲ್ವೆ ನಿಲ್ದಾಣಗಳನ್ನು ಆಕ್ರಮಿಸಿಕೊಳ್ಳದಿದ್ದರೆ, ಒಂದೇಕೆ ಎರಡುಮೂರು ಲಕ್ಷ ಜನರು ರಾಜಧಾನಿಯಲ್ಲಿ ಸೇರಬಹುದು.”

“ ನಿಮ್ಮ ಆಡಳಿತದಲ್ಲಿಯ ಸಡಿಲುತನದಿಂದಾಗಿ ವಿದ್ರೋಹಿಗಳು ಇಷ್ಟು ಬಲಿತು ಮಲೆತು ಕೂತಿದ್ದಾರೆ. ಅಂತೂ ನೀವೇ ಹೊಣೆಗಾರರು.”

"ಮಹಾರಾಜರೆ, ಇದರಲ್ಲಿ ನನ್ನ ತಪ್ಪೇನು ? ಆದರು ಯಾವುದಾದರೂ ಶಾಸನಬಾಹಿರ ಕೆಲಸಮಾಡಿದರೆ ನಾನು ಹಿಡಿಯದೆ ಬಿಡುತ್ತಿರಲಿಲ್ಲ. ಅವರೆಂದೂ ವಿಧಿಯನ್ನು ಉಲ್ಲಂಘಿಸಲಿಲ್ಲ; ಕಾಯದೆಯ ಚೌಕಟ್ಟಿನಲ್ಲಿಯೇ ನಡೆಯುವ ಕೆಲಸವನ್ನು ನಾನೆಂತು ತಡೆಯಬಲ್ಲೆ? ಈ ಸೋಶಾಲಿಸ್ಟರು ನಡೆಸುತ್ತಿರುವ ಚರ್ಚೆಗಳು ಪ್ರಚಲಿತ ಶಾಸಕ್ಕೆ ನಿಷಿದ್ಧವಾಗಿಲ್ಲ. ವಿದ್ರೋಹಿಗಳ ಹಿರಿಯರು ಮಾತ್ರ ಆವಾಗೀವಾಗ ವಿಧಿಭಂಗ ಮಾಡುತ್ತಾರೆ. ಆದರೆ ಅವರೆಲ್ಲರೂ ಪ್ರಬಲರು ಮತ್ತು ಪ್ರಖ್ಯಾತರು. ಇಂತಹ ಜನನಾಯಕರನ್ನು ನಾಚಿಕೆಗೀಡುಮಾಡುವುದು ಯುಕ್ತವೋ ಹೇಗೆಂಬುದನ್ನು ಕುರಿತು ಮಹಾರಾಜರ ಮಂತ್ರಿಸಭೆಯಲ್ಲಿ ಎಷ್ಟೋ ಸಲ ವಾದ-ತರ್ಕ ನಡೆದಿವೆ.."

"ಆದರೆ ವಿದ್ರೋಹಿಗಳ ಪ್ರಧಾನನಾಯಕನನ್ನು ಬಂಧಿಸುವುದು ಅತ್ಯಂತ ಅವಶ್ಯವೆಂಬುದನ್ನು ಹೇಗೆ ನಿರಾಕರಿಸುವಿರಿ ? ಏನಾದರೂ ಮಾಡಿ ಅವನನ್ನು ಶೀಘ್ರವೇ ಬಂಧಿಸಿರಿ. ಬೆಳಗಾಗುವುದರೊಳಗೆ ಅವನನ್ನು ಇಲ್ಲಿ ನಿಲಿಸಬೇಕು; ನಗರದಲ್ಲಿ ಮತ್ತೆ ವಿದ್ರೋಹಿಗಳ ಸದ್ದೇ ಕೇಳಿರಬಾರದು."

"ಮಹಾರಾಜರೆ, ಅವನನ್ನು ಹಿಡಿಯುವುದಕ್ಕೆ ಪೂರಾ ಪ್ರಯತ್ನಪಡುತ್ತಿದ್ದೇನೆ; ಆದರೂ ಸಲ ಸಿಕ್ಕದಾಗಿದೆ. ನೀವೆಂದಂತೆ ನಾನೀ ಹೊಣೆಗಾರಿಕೆಯ ಪದಕ್ಕೆ ಸರ್ವಥಾ ಅಯೋಗ್ಯ. ನಾನು ತ್ಯಾಗಪತ್ರ ಕೊಡುತ್ತೇನೆ, ಮುಕ್ತಮಾಡಿರಿ."

"ಹುಚ್ಚರ ಹಾಗೆ ಮಾತಾಡಬೇಡಿರಿ ಬರ್ನಾರ್ಡ್. ತ್ಯಾಗಪತ್ರ ಕೊಡಲು ಇದು ಸಮಯವಲ್ಲ; ನಾಲ್ಕೂಕಡೆಗಳಿಂದ ಗಂಡಾಂತರ ಕವಿದು ಬರುತ್ತಿವೆ.– ವಿದ್ರೋಹಿಗಳ ದಳಪತಿ ಯಾರೆಂಬುದು ನಿಮ್ಮ ಅನುಮಾನಕ್ಕೂ ಸಿಕ್ಕಿಲ್ಲವೆ ?" ಎಂದ ರಾಜ.

ಬರ್ನಾರ್ಡ್ ಹಿಂಜರಿಯುತ್ತ ಉತ್ತರವಿತ್ತ : "ನಿನ್ನೆ ರಾತ್ರಿ ವಿದ್ರೋಹಿಗಳ ಗುಪ್ತಸಭೆಗೆ ಮುತ್ತಿಗೆ ಹಾಕಿದ್ದೆನಷ್ಟೆ ಆ ಶೋಧನೆಯಲ್ಲಿ ನನ್ನ ಮನದಲ್ಲಿ ಹಲವು ಸಂದೇಹ ಮೂಡಿವೆ." ಎಂದು ಒಮ್ಮೆ ಪಿಟರ್ಸನ ಮೊಗವನ್ನು ನೋಡಿದ.

ಅದೇ ಹೊತ್ತಿಗೆ ದ್ವಾರಪಾಲಕನು ಸೇನಾಪತಿ ಬಂದ ಸುದ್ದಿಯನ್ನು ತಂದ. ರಾಜನು ಅತ್ತ ಲಕ್ಷ್ಯಗೊಟ್ಟಾಗ ಪಿಟರ್ಸ ಬರ್ನಾರ್ಡನ ಕಿವಿಯೊಳಗೆ

ಉಸುರಿದ: “ ತಿಳಿದುಕೊಂಡು ಮಾತನಾಡಿರಿ, ಹೆಡ್ಡರಂತೆ ತಟ್ಟನೆ ಏನಾದರೂ ಹೇಳಬೇಡಿರಿ;-ಹಿಂದುಗಡೆ ಪಶ್ಚಾತ್ತಾಪಪಾಡೀತು.”

ಬರ್ನಾರ್ಡ್ ಮೆಲ್ಲಮೆಲ್ಲನೆ ರಾಜನಿಗೆ ಹೇಳಿದ. “ನಿನ್ನಿನ ಸಭೆಯಲ್ಲಿ ವಿದ್ರೋಹಿಗಳ ದಳಪತಿ ಭಾಗವಹಿಸಿದ್ದ, ನನ್ನ ಸುಳಿವು ಕಂಡು ಅದೃಶ್ಯನಾಗಿ ಬಿಟ್ಟ. ಅವನು ಆ ಮನೆಯಲ್ಲಿಯೇ ಅಡಗಿದ್ದನೆಂಬುದರಲ್ಲಿ ನನಗೆ ಸಂಶಯವೇ ಇಲ್ಲ.”

“ ಮೇರಿಯ ವಿಷಯದಲ್ಲಿ ನಿಮಗೆ ಸಂದೇಹವಲ್ಲವೆ ? ” ನಗುತ್ತ ಪಿಟರ್ಸ್ ಕೇಳಿದ.

“ ಸಂದೇಹ ಏಕೆ ಬರಬಾರದು ? ತಮಗೆ ಗೊತ್ತಿರಬೇಕಲ್ಲ, ಅವಳಿಗೆ ಉಪಪತಿ ಒಬ್ಬನೇ ಇಲ್ಲ.”

“ ನಾನು ಆಣೆಮಾಡಿ ಹೇಳಬಲ್ಲೆ—ನಿನ್ನೆ ರಾತ್ರಿ ನನ್ನ ಹೊರತು ಯಾರೂ ಅವಳ ಮನೆಗೆ ಬಂದಿಲ್ಲ.” ಎಂದ ಪಿಟರ್ಸ್.

“ ಈಗೊಬ್ಬ ಬುದ್ಧಿವಂತರನ್ನು ಕಂಡಂತಾಯಿತು. ಸೇನಾಪತಿ ತಮ್ಮ ಸೈನಿಕರು ವಿಶ್ವಾಸಾರ್ಹರೆಂಬ ಬಗ್ಗೆ ಪೂರ್ಣ ಭರವಸೆ ಕೊಡುತ್ತಾರೆ. ಅವರು ಕರ್ತವ್ಯಕ್ಕಾಗಿ ಪ್ರಾಣ ದಾನಮಾಡಲು ಸಿದ್ಧರಿರುವರೆಂಬುದನ್ನು ಸೇನಾಪತಿ ನಿರಾಕರಿಸುವುದಿಲ್ಲ.” ಎಂದು ದೊರೆಯೆಂದ.

“ ತಮ್ಮ ಅಭಿಪ್ರಾಯವೇನು ಸೇನಾಪತಿಗಳೆ ?” ಬರ್ನಾರ್ಡ್ ಕೇಳಿದ.

“ ನನ್ನ ಸೈನಿಕರೆಂದೂ ಅವಿಧೇಯರಾಗಿ ನಡೆಯರು. ವಿದ್ರೋಹಿಗಳಿಗೆಲ್ಲೋ ಭ್ರಮೆ ಅದರ ಫಲವನ್ನು ಅವರುಣ್ಣುತ್ತಾರೆ.”

“ಹಾಗಾದರೆ ನಾಡದು ಅವರ ಕವಾಯತು ಆರಂಭಿಸಿರಿ.” ಬರ್ನಾರ್ಡ್ ಹೇಳಿದ.

“ ಅದಕ್ಕೆ ನನ್ನದೇನೂ ಆಕ್ಷೇಪವಿಲ್ಲ. ಮಹಾರಾಜರ ಒಪ್ಪಿಗೆಯಿದ್ದರೆ ಅವಶ್ಯವಾಗಿ ಆಗಲಿ ”

“ ಅರಮನೆಯ ಅಂಗಳದಲ್ಲಿ ಸಶಸ್ತ್ರ ಸೈನಿಕನ್ನಿರಿಸಿರಿ. ನಾಲ್ಕಾರು ಬಂದೂಕಿನ ಶಬ್ದಗಳನ್ನು ಕೇಳಿದರೆ ಸಾಕು, ವಿದ್ರೋಹಿಗಳು ತಣ್ಣಗಾಗುತ್ತಾರೆ. ನೀನೇನೆನ್ನುತ್ತೀ ತಮ್ಮಾ ?” ಎಂದು ರಾಜ ಸೇನಾಪತಿಗೆ ಹೇಳಿ, ಪಿಟರ್ಸ್‌ನ ಕಡೆ ನೋಡಿದ

“ ಸೇನಾಪತಿಗಳದೂ ನನ್ನದೂ ಒಮ್ಮತವಾಗಿದ್ದರೆ ಸಂತೋಷವಿತ್ತು. ಆದರೆ ನನ್ನ ನಂಬುಗೆ ಬೇರೆಯಾಗಿದೆ. ಮಹಾರಾಜ, ನಾಳೆ ಮುಂಜಾನೆ ಸ್ಪೆಶಲ್ ಟ್ರೇನನ್ನು ಏರ್ಪಡಿಸಲು ಅಪ್ಪಣೆಯಿತ್ತರೆ ನೆಟ್ಟಗಾದೀತು.” ಎಂದ ಪಿಟರ್ಸ್.

“ ಏತಕ್ಕೆ ? ” ರಾಜ ಪ್ರಶ್ನಿಸಿದ.

“ ತಾವು ಶ್ರೀಮತಿ ಕ್ಲಾರ್ತುವಿನೊಂದಿಗೆ ಪ್ಯಾರಿಸಿಗೆ ತೆರಳಬೇಕು.”

ರಾಜನು ಅತಿಕೋಪದಿಂದ ನೆಲಕ್ಕೆ ಕಾಲಪ್ಪಳಿಸಿದ. “ ಏನು ? ನೀನು ನನಗೆ ಸಿಂಹಾಸನವನ್ನು ತೊರೆದು ಓಡೆನ್ನುವೆಯಾ ? ಜೀವವಿರುವವರೆಗೂ ಅದು ಸಾಧ್ಯವಿಲ್ಲ. ವಿದ್ರೋಹಿಗಳ ಕೈಯಲ್ಲಿ ಜೀವ ಕೊಟ್ಟೇನೇ ವಿನಾ ಓಡಿ ಹೋಗುವುದಿಲ್ಲ.” ಎಂದ.

“ ನಮ್ಮ ಹಣೆಯಲ್ಲಿ ಹಾಗೆಯೇ ಬರೆದಿದೆಯೋ ಏನೋ ! ” ಎಂದು ಮೆಲ್ಲಮೆಲ್ಲನೆ ಪಿಟರ್ಸ್ ಉಸುರಿದ.

೧೪

ಇಳಿಹೊತ್ತಿನಲ್ಲಿ ಪೆನಿಸರ್ ತನ್ನ ಮನೆಯ ಮೊಗಸಾಲೆಯಲ್ಲಿ ಕುಳಿತಿದ್ದಳು. ಹಠಾತ್ ಜಾನ್ ಪಿಟರ್ಸ್ ಅವಳೆದುರು ಒಡಮೂಡಿದ. ಈ ಕಾಲದಲ್ಲಿ ಅವನನ್ನು ಲಂಡನಿನಲ್ಲಿ ಕಂಡೇನೆಂದು ಅವಳು ಬಗೆದಿರಲಿಲ್ಲ. “ ತಾವಿಲ್ಲಿ ? ” ಎಂದು ಅಚ್ಚರಿಯಿಂದ ಕೇಳಿದಳು.

“ ಆಶ್ಚರ್ಯವೇಕೆ ? ನಾನಿಲ್ಲಿಗೆ ಬರುವುದು ಅಸಂಭವವೆ ?” ಪಿಟರ್ಸ್ ಎಂದ.

“ ಅದೇನು ಗೊತ್ತಿಲ್ಲ. ತಮ್ಮ ದೇಶದ ಸ್ಥಿತಿ ಈಗ ಬಹಳ ಜಟಿಲವಾಗಿದೆ, ರಾಜಪರಿವಾರದ ಸಮಸ್ಯೆ ಅತಿಸೂಕ್ಷ್ಮಕ್ಕೆ ಬಂದಿದೆ ಎಂದು ಪತ್ರಿಕೆಗಳಲ್ಲಿ ಓದಿದ್ದೆ. ಇಂಥ ಪರಿಸ್ಥಿತಿಯಲ್ಲಿ ತಾವು ಸ್ವದೇಶವನ್ನು ಬಿಟ್ಟು ಬರುವಿರೆಂದು ನನಗೆನಿಸಿದ್ದಿಲ್ಲ.”

ಪಿಟರ್ಸ್ ಸತೃಷ್ಣದೃಷ್ಟಿಯಿಂದ ಪೆನಿಸರಳ ಮೋರೆಯನ್ನು ನೋಡಿದ. “ ಲಂಡನ್ನೆಂದರೆ ನನಗೆ ಬಲುಮೆಚ್ಚು. ನೀನಿಲ್ಲಿ ಕುಳಿತು ಏನು ಮಾಡುತ್ತಿದ್ದೀ ? ” ಎಂದ.

" ಈವೊತ್ತು ಮಧ್ಯಾಹ್ನ ನಮ್ಮ ಅಭಿನಯವಿತ್ತು. ಅದನ್ನು ಮುಗಿಸಿಕೊಂಡು ಇದೀಗ ಬಂದು ವಿರಮಿಸಿದ್ದೆ. ನಡೆಯಿರಿ ಒಳಗೆಹೋಗುವಾ." ಇಬ್ಬರೂ ಒಳಗೆ ಹೋಗಿ ಮೇಜಿನ ಪಕ್ಕದಲ್ಲಿ ಕುಳಿತ ಬಳಿಕ ಪೆನಿಸರ್ ಮತ್ತೆಂದಳು: "ತಾವೇಕೋ ಈಗ ವ್ಯತ್ಯಾಸವಾಗಿದ್ದೀರಿ. ಮೈಯಲ್ಲಿ ನೆಟ್ಟಗಿಲ್ಲವೆ ?"

" ದಿನಗಳು ಬಹಳ ಕೆಟ್ಟ ಬಂದಿವೆ. ಮನಸಿಗೆ ನೆಮ್ಮದಿಯಿಲ್ಲ. ಶ್ರಮವೂ ಹೆಚ್ಚಾಗಿದೆ."

" ಅದಕ್ಕೇ ಇಷ್ಟು ಬದಲಾಗಿದ್ದೀರೇನು ? ತಾವು ಅವರಲ್ಲವೆಂಬಂತಾಗಿದ್ದೀರಿ."

ಹೀಗೆ ಕೆಲವಾರು ಮಾತುಕತೆಗಳಾದ ಮೇಲೆ ಪಿಟರ್ಸ್ ಅಲ್ಲಿಂದೆದ್ದ. ಅವನನ್ನು ಕಳಿಸಿ ಬಂದು ಪೆನಿಸರ್ ಬಾಗಿಲಿಕ್ಕಿ ಒಳಗಣಿಂದ ಭದ್ರಪಡಿಸಿದಳು. ಅವಳು ಬಟ್ಟೆಗಳನ್ನು ಬದಲಿಸುವುದರೊಳಗೇ ಮತ್ತೆ ಯಾರೋ ಬಾಗಿಲನ್ನು ತಟ್ಟಿದರು. " ಯಾರು ನೋಡು, ಅಪರಿಚಿತರಾಗಿದ್ದರೆ ಒಳಗೆ ಬರುವ ಅಗತ್ಯವಿಲ್ಲ" ಎಂದು ಅವಳು ತನ್ನ ತೊತ್ತಿಗೆ ಹೇಳಿದಳು.

" ಸರ್ ಜಿಲ್ಬರ್ಟ್ ಬಂದಿದ್ದಾರೆ" ತೊತ್ತು ಬಾಗಿಲನ್ನು ತೆರೆದು ನೋಡಿ ಹೇಳಿದಳು

ಪೆನಿಸರ್ ಹೋಗಿ ಕೈನೀಡಿ ಜಿಲ್ಬರ್ಟನನ್ನು ಸ್ವಾಗತಿಸಿದಳು. " ಬರ್ರಿ. ತಮ್ಮನ್ನು ಕಂಡು ಸಂತೋಷವಾಯಿತು. ಬರುವಾಗ ಯಾರನ್ನಾದರೂ ಇದಿರಿಗೆ ಕಂಡಿರೇನು ?" ಎಂದು ಪ್ರಶ್ನಿಸಿದಳು.

" ಹೂಂ. ನಿನ್ನೊಬ್ಬ ಮಿತ್ರ ಇಳಿದುಹೋದ. ಏಕೋ ವಿಷಣ್ಣನಾಗಿದ್ದ "

" ಅವರು ನನ್ನನ್ನು ಕಾಣಲು ಬಂದಿದ್ದರು ಐದಾರು ನಿಮಿಷ ಮಾತ್ರ ಇದ್ದರು. ಅವರ ಮನೋಭಾವವೇನೂ ಗೊತ್ತಾಗಲಿಲ್ಲ."

" ಇಷ್ಟು ಬೇಗ ಅವನಿಂದ ನೀನು ಬಿಡುಗಡೆ ಹೊಂದಿದ್ದೇ ಸಂತೋಷದ ಸಂಗತಿ. ಅವನು ಮಹಾದುಶ್ಚರಿತ್ರನೆಂಬು ಕೇಳಿದ್ದೇನೆ. ಈ ಮನೆಯಲ್ಲಿ ನೀನು ಒಬ್ಬೊಂಟಿಗಳಾಗಿ ಇರುವುದು ಸರಿಯಲ್ಲ "

" ಏನು ಮಾಡಬೇಕೆಂದು ತಮ್ಮ ಅಭಿಪ್ರಾಯ ?" ನಗೆಗೂಡಿ ಕೇಳಿದಳು ಪೆನಿಸರ್.

" ಈ ಮನೆಯನ್ನು ಬಿಟ್ಟುಬಿಡು. ಥೇಟರಿನ ಗೊಡವೆ ಬಿಟ್ಟು ನನ್ನನ್ನು ಮದುವೆಯಾಗು. ನಾನು ನಿನಗಾಗಿ ಲಂಡನ್ ನಗರದಲ್ಲಿ ಒಂದು ಉತ್ಕೃಷ್ಟ ಮನೆಯನ್ನು ಹಿಡಿಯುತ್ತೇನೆ."

" ಇದು ತಮ್ಮ ಮನದ ಮಾತು ತಾನೆ ? "

" ನಾನೇನು ನಗೆಚಾಟಿಕೆ ಮಾಡುತ್ತಿದ್ದೇನೆಯೆ ? ನಿನಗೆ ನನ್ನ ಮಾತಿನಲ್ಲಿ ಭರವಸೆಯಾಗಲೊಲ್ಲದು ;– ನಾನು ಎರಡುತಿಂಗಳಿಂದ ನಿನ್ನೊಡನೆ ಮದುವೆಯಾಗುವ ಇಚ್ಛೆಯನ್ನು ವಾರವಾರವೂ ವ್ಯಕ್ತಪಡಿಸುತ್ತಿದ್ದೇನೆ."

" ನನ್ನ ಮೇಲೆ ತಮ್ಮ ಕೃಪೆ ಬಹಳವಾಯಿತು. ಆದರೆ ಒಂದು ಮಾತೆಂಪರೆ, ಥೇಟರ್ ಕಂಪನಿಯೊಡನೆ ಅಭಿನಯಕ್ಕಾಗಿ ದೇಶಾಂತರಕ್ಕೆ ಹೋಗಬೇಕಾಗಿದೆ ; ಹಾಗೆ ಮಾತು ಕೊಟ್ಟಾಗಿದೆ."

" ಯಾವಾಗ ಹೋಗುತ್ತೀ ?"

" ಒಂದೆರಡು ವಾರದೊಳಗೇ ಇಲ್ಲಿಯ ಕಾರ್ಯಕ್ರಮಗಳು ಮುಗಿಯುವವು. ಇಲ್ಲಿಂದ ನಮ್ಮ ಮಂಡಲಿ ಜರ್ಮನಿಗೆ ಹೊರಡುವುದು. ದಾರಿಯಲ್ಲಿ ಕೆಲವು ಕಡೆ ಅಭಿನಯಿಸುವ ವಿಚಾರವೂ ಇದೆ."

" ನಿನ್ನ ಮಾತನ್ನು ಕೇಳಿ ದುಃಖವಾಗುತ್ತಿದೆ."

" ಏಕೆ ?"

" ನೀನು ಲಂಡನಿನಲ್ಲಿಯೆ ಇರಬೇಕೆಂದು ನನ್ನಿಚ್ಛೆ. ನೀನು ಥೇಟರಿನಲ್ಲಿ ಕೆಲಸಮಾಡುವುದು ನನಗೆ ಅಸಹ್ಯವಾಗಿದೆ."

" ಒಂದು ಜೀವನೋಪಾಯವಂತೂ ಬೇಕಲ್ಲ," ನಗುತ್ತ ಪೆನಿಸರ್ ನುಡಿದಳು.

" ಹೊಟ್ಟೆಬಟ್ಟೆಗಿಲ್ಲದವರು ಥೇಟರಿನಲ್ಲಿ ಕುಣಿಯಬೇಕು ; ನಿನಗೇನು ಕೊರತೆ ? ನಿನ್ನಲ್ಲಿ ಸಾಕಷ್ಟು ದುಡ್ಡಿದೆ; ಮೇಲೆ ಒಬ್ಬ ದೊಡ್ಡ ಮನುಷ್ಯ ನಿನ್ನನ್ನು ವರಿಸಲು ಹುರಿಯಾಳಾಗಿದ್ದಾನೆ. ಥೇಟರಿನಲ್ಲಿ ನಿನ್ನ ಯಾವ ಉಚ್ಚಾಭಿಲಾಷೆ ಪೂರ್ಣವಾಗುವುದು ? ನೀನು ಮೊದಲ ತರಗತಿಯ ಅಭಿನೇತ್ರಿಯೆನಿಸಿಲ್ಲ ; ಎಂದಾದರೂ ಆ ಗೌರವ ನಿನಗೆ ಸಿಕ್ಕೀತೆಂಬ ಆಶೆಯೂ ಇಲ್ಲ. ನೀನು ಸುಂದರಿ, ಬುದ್ಧಿಮತಿ, ಸುರಸಿಕಳು,– ಈ ಗುಣಗಳಿಂದಾಗಿ

ನೀನು ಥೇಟರಿನ ಹೊರಗೂ ಆದರಣೀಯಳಾಗಬಲ್ಲೆ. ನೀನು ಮೊದಲು ಯಾವ ಅಪೇಕ್ಷೆಯಿಂದ ಥೇಟರನ್ನು ಸೇರಿದೆಯೆಂಬುದನ್ನರಿತುಕೊಳ್ಳಲು ನನ್ನ ಮನಸು ಬಹಳ ತವಕಿಸುತ್ತಿದೆ."

"ಏನಾದರೂ ಉದ್ಯೋಗ ಮಾಡಲಿಕ್ಕಂತೂ ಬೇಕು. ಏನೋ ಒಂದು ಹೊಸ ವಿಷಯ, ಹೊಸ ಪ್ರಪಂಚ– ಎಂದು ನಾನು ಥೇಟರ್ ಸೇರಿದ್ದು."

"ಮತ್ತೆ ಯಾವ ವಿಷಯದಲ್ಲಿಯೂ ಹೊಸತನವಿದ್ದಿಲ್ಲವೆ? ನಿನ್ನ ಸಾಥಿನ ಅಭಿನೇತ್ರಿಗಿಂತಲೂ ಉಚ್ಚವಾದದ್ದು. ನಿನ್ನಲ್ಲಿದ್ದ ಸಾಹಿತ್ಯಾನುರಾಗದ ಪರಿಚಯ ಇನ್ನೂ ಜನಕ್ಕೆ ಆಗಿಲ್ಲ. ಸಮಾಜನೀತಿಯಲ್ಲಿಯೂ ನಿನಗೆ ಯಥೇಷ್ಟ ಜ್ಞಾನವಿದ್ದಿತು. ಫೋರ್ಟ್ ನೈಟ್ಲಿ ಪತ್ರಿಕೆಯಲ್ಲಿ ನೀನು ರಾಜದ್ರೋಹಿಗಳನ್ನು ಸಮರ್ಥಿಸಿ ಬರೆದ ಪ್ರಬಂಧ ಅನೇಕರನ್ನು ಬೆರಗುಗೊಳಿಸಿದೆ. ನಿನ್ನ ರಾಜಕೀಯ ಆದರ್ಶ ಬಲು ಭಯಂಕರ. ಈ ಆದರ್ಶಾನುಸಾರವಾಗಿ ರಾಜನೀತಿಯನ್ನು ಚರ್ಚಿಸಿದರೆ, ರಕ್ತಪಿಪಾಸು ದುರ್ದಾಂತ ಮಹಿಲಾಸಮಾಜದಲ್ಲಿ ನೀನು ಪ್ರತಿಷ್ಠೆ ಪಡೆಯಬಹುದಿತ್ತೆಂದು ನನ್ನ ಆಶೆ. ಆದರೆ ನೀನು ಆ ದಾರಿಯನ್ನು ಬಿಟ್ಟು ಥೇಟರನ್ನು ಹೊಕ್ಕೆ. ನಿನ್ನ ಈ ವೃತ್ತಿಯನ್ನು ಕಂಡು ಅನೇಕರು ಅಚ್ಚರಿಗೊಂಡರು. ನಿನ್ನಲ್ಲಿ ಈ ಪ್ರವೃತ್ತಿ ಏಕುಂಟಾಯಿತೋ ನನಗಂತು ತಿಳಿಯಲೊಲ್ಲದು."

"ಅವಶ್ಯವಾಗಿ ಏನೋ ಕಾರಣವಿತ್ತು. ಆ ಕಾರಣವನ್ನು ತಮಗೆ ಹೇಳುವುದು ಸಾಧ್ಯವಿಲ್ಲ."

"ನಿಜವಾಗಿಯೂ ಹೇಳುವುದಿಲ್ಲವೆ?"

"ಇಲ್ಲ."

"ನನ್ನ ಮುಂದೆ ಹೇಳಿದರೆ ತಪ್ಪೇನು?"

"ವಿಶೇಷ ತೊಂದರೆ ಇಲ್ಲದೆ ಹೋಗಿದ್ದರೆ, ಮತ್ತೆ ಯಾರಿಗೆ ಹೇಳದಿದ್ದರೂ ತಮಗೆ ಹೇಳಿಯೇ ಹೇಳುತ್ತಿದ್ದೆ. ತಾವು ನಂಬಿದರೆ ನಂಬಿರಿ, ಬಿಟ್ಟರೆ ಬಿಡಿರಿ, ನನ್ನ ಬಾಳು ನಿಜವಾಗಿಯೂ ಅಸಹ್ಯವಾದದ್ದು. ಮುಂದಿ ಎನ್ನುವುದೇನು, ನನಗೇ ಒಳಗೊಳಗೆ ಚುಚ್ಚುತ್ತಿದೆ. ಆದರೆ ಹಿಡಿದ ಹಾದಿಯಲ್ಲಿ-ಅದು ಒಳ್ಳೆಯದಿರಲಿ ಕೆಟ್ಟದಿರಲಿ-ನಡೆಯಲೇ ಬೇಕಾಗಿದೆ. ನನ್ನ ದಿನಗಳು ಒಂದು ರೀತಿಯಿಂದ ಸಾಗಿರುತ್ತವೆ."

"ಯಾರ ದಿನಗಳು ನಿಲ್ಲುತ್ತವೆ ? ಎಲ್ಲರವೂ ಸಾಗಿಯೇ ಸಾಗಿರುತ್ತವೆ. ಆದರೆ ಉದ್ದೇಶಹೀನವಾಗಿ ಜೀವನದ ದಿನಗಳನ್ನು ನೂಕುವ ಹತಭಾಗ್ಯರ ಭವಿಷತ್ತಿನಲ್ಲಿ ಅಂಧಕಾರವೇ ತುಂಬಿರುವುದು. ಯಾವ ಮಹತ್ ಸಂಕಲ್ಪದ ಉಜ್ವಲ ಪ್ರದೀಪವೂ ಅವರ ಬಾಳಹಾದಿಯನ್ನು ಬೆಳಗಲಾರದು. ನೀನು ಯಾವುದೊ ಉಚ್ಚಾಕಾಂಕ್ಷೆಯಿಂದ ಥೇಟರನ್ನು ಪ್ರವೇಶಿಸಿದೆಯೆಂದು ನಂಬಲು ನನ್ನ ಮನಸೊಪ್ಪದು. ಆದರೂ ಮದುವೆಯಾಗಲು ನಿನಗೆ ಮನಸಿಲ್ಲವೆನ್ನುತ್ತೀ. ಎಷ್ಟೋ ಜನ ಯಾವೊಂದು ಗೊತ್ತುಗುರಿಯಾಗಿ ಇಲ್ಲದೆ ಜೀವನವನ್ನು ಸಾಗಿಸಿರುತ್ತಾರೆ; ಸಾವು ಬರಲಿಲ್ಲವೆಂದೇ ಅವರು ಬದುಕಿರುತ್ತಾರೆ; ನೀನು ಮಾತ್ರ ಆ ಗುಂಪಿಗೆ ಸೇರಿದವಳಲ್ಲವೇ ಅಲ್ಲವೆಂದು ನನಗೆನಿಸುತ್ತದೆ."

"ನನ್ನ ಹೊರಗಿನ ಭಾವಭಂಗಿಗಳನ್ನು ನೋಡಿಯೇ ನನ್ನನ್ನು ಇಂಥ ಗುಂಪಿನವಳೆಂದು ತಾವು ಹೇಗೆ ತಿಳಿಯುವಿರಿ ? ಮನುಷ್ಯನೊಡನೆ ನಾಲ್ಕು ಮಾತುಗಳನ್ನಾಡಿದ ಮಾತ್ರಕ್ಕೆ ಅವನ ಜೀವನದ ಗತಿಯನ್ನು ಅರಿಯುವುದು ಸಾಧ್ಯವೆ ?"

"ನೀನು ನನ್ನನ್ನು ಬಹಳ ಗೊಂದಲದಲ್ಲಿ ತಳ್ಳಿದೆ. ನಿನ್ನ ಜೀವನ ರಹಸ್ಯನ್ನರಿಯಲು ನನ್ನ ಮನಸು ಬಹಳ ಆತುರವಾಗಿದೆ. ನನ್ನನ್ನು ಕತ್ತಲಲ್ಲಿರಿಸಬೇಡ"

ಸರ್ ಜಿಲ್ಬರ್ಟನ ಮಾತು ಮುಗಿಯುವಷ್ಟರೊಳಗೇ ಒಬ್ಬ ಮನುಷ್ಯ ಬಾಗಿಲನ್ನು ತಳ್ಳಿಕೊಂಡು ಒಳಗೆ ಬಂದ. ಹೀಗೆ ಸಂಕೋಚವಿಲ್ಲದೆ ಒಮ್ಮೆಲೆ ಪ್ರವೇಶಿಸಿದ ಅವನ ಅಶಿಷ್ಟ ವರ್ತನೆಯಿಂದ ಜಿಲ್ಬರ್ಟ್ ಸ್ವಲ್ಪ ಅಸಂತುಷ್ಟನಾದ. ಪೆನಿಸರ್ ಬಂದವನ ಕಡೆ ನೋಡಿ "ಯಾರು ಡಾಲ್ಮಾನೇ ? ಕೂತುಕೋ, ಆ ಕುರ್ಚಿಯನ್ನೆಳೆದುಕೋ." ಎಂದಳು. ಬಳಿಕ ಅವಳು ಅವರಿಬ್ಬರಿಗೆ ಪರಸ್ಪರ ಪರಿಚಯ ಮಾಡಿಕೊಟ್ಟಳು. ಶಿಷ್ಟಾಚಾರವೆಂದು ಇಬ್ಬರೂ ಒಂದೆರಡು ಮಾತುಗಳನ್ನಾಡಿದರು. ಡಾಲ್ಮಾ ಏನೋ ವಿಶೇಷ ಕಾರ್ಯಕ್ಕಾಗಿ ಬಂದಿರಬೇಕು, ಬೇರೆಯವರಿದ್ದಾರೆಂದು ಮಾತನಾಡಲೊಲ್ಲ ಎಂದು ಜಿಲ್ಬರ್ಟ್ ಅರಿತುಕೊಂಡ. ಅವನು ಹೊರಡಬೇಕೆಂದಾಲೋಚಿಸಿ

ಆಸನದಿಂದೇಳುತ್ತ, "ನಾನಿಂದು ರಾತ್ರಿ ಥೇಟರ್ ನೋಡಲು ಹೋಗುವೆ. ನೀನು ಅಭಿನಯಕ್ಕೆ ಯಾವಾಗ ಬರುವೆ?'' ಎಂದ.

"ಇಂದು ರಾತ್ರಿ ಇನ್ನು ಹೋಗುವುದಿಲ್ಲ. ಅಪರ್ರಾಹ್ನದ ಅಭಿನಯದ ತರುವಾಯ ನನಗೆ ಬಹಳ ದಣಿವಾಗಿದೆ. ಅವಕಾಶವಾದಾಗ ಮತ್ತೊಮ್ಮೆ ಬರ್ರಿ.'' ಎಂದಳು ಪೆನಿಸರ್.

ಜಿಲ್ಬರ್ಟ್ ಹೊರಟುಹೋದ ಬಳಿಕ ಡಾಲ್ಮಾ ಸಿಗಾರೇಟನ್ನು ಸೇದುತ್ತ ನುಡಿದ : "ಗ್ರೇಸ್, ನಿನ್ನ ಈ ಸರಸದ ಗೆಳೆಯರೆಲ್ಲ ನನ್ನ ಕಣ್ಣಿಗೆ ನಂಜು."

ಗ್ರೇಸ್ ಪೆನಿಸರ್ ಉಪೇಕ್ಷಾಪೂರ್ಣ ದೃಷ್ಟಿಯಿಂದ ಡಾಲ್ಮಾನ ಮೋರೆಯನ್ನು ನೋಡಿ, ಮೆಲ್ಲ ಮೆಲ್ಲನೆ ಹೇಳಿದಳು : "ಜಿಲ್ಬರ್ಟ್ ಕೇರಿಂಗ್‌ಹಲ್ಲರು ನನ್ನ ಒಳ್ಳೇ ವಿಶ್ವಾಸದ ಮಿತ್ರರು ನನಗೆ ಅವರ ಭೆಟ್ಟಿಯಿಂದಾಗುವಷ್ಟು ಆನಂದ ಮತ್ತೆ ಯಾತರಿಂದಲೂ ಆಗುವುದಿಲ್ಲ."

"ಈ ಪೋಲಿಜನರೊಡನೆಲ್ಲಾ ಸಂಬಂಧ ಬೆಳಸಬೇಡ ; ನಿನ್ನ ಮನಸು ಬೇರೆ ಕಡೆ ಹರಿದೀತು." ಎಂದು ಡಾಲ್ಮಾ ಎಚ್ಚರಿಸಿದ.

ಗ್ರೇಸ್ ನಿಡಿದಾಗಿ ಉಸಿರುಗರೆದಳು. "ನಡುನಡುವೆ ಮನಸು ಬೇರೆ ಕಡೆ ಹರಿದರೆ ಕೆಟ್ಟೇನು? ಮುಖ ಬದಲಿಸಿಕೊಳ್ಳದಿದ್ದರೆ ಸಾಗೀತೆ?" ಎಂದಳು.

ಡಾಲ್ಮಾ ಹುಬ್ಬು ಕೊಂಕಿಸಿ ಅವಳ ಕಡೆ ನೋಡಿ ಗಂಭೀರವಾಗಿ ನುಡಿದ : "ಗ್ರೇಸ್, ಹೀಗೆಲ್ಲ ಮಾತನಾಡಬೇಡ."

"ಯಾವಾಗಲೂ ನಿಮ್ಮ ಮನಸಿನಂತೆಯೆ ಬಾಯಿಂದ ಮಾತು ಎಲ್ಲಿ ಹೊರಡುತ್ತವೆ? ಸರಸ-ಹಾಸ-ಪರಿಹಾಸಗಳು ಒಂದಿಷ್ಟೂ ಇಲ್ಲದೆ ಮನುಷ್ಯ ಬಾಳಬಲ್ಲನೆ?'' ಗ್ರೇಸ್ ಅನ್ಯಮನಸ್ಕ ಭಾವದಿಂದ ನುಡಿದಳು.

ಡಾಲ್ಮಾ ಬಲಗೈಯನ್ನೆತ್ತಿ ಉತ್ತೇಜಿತ ಸ್ವರದಲ್ಲಿ ನುಡಿದ : "ಹೆಂಗುಸರ ಹಾಗೆಯೆ ಮಾತನಾಡಿದೆ ನೀನು! ಇರಲಿ, ನಿನ್ನ ಸರಸಗಿರಸ ನನಗೆ ಬೇಕಾಗಿಲ್ಲ. ನಾಳೆಯ ವಾರ, ಹೆಚ್ಚೆಂದರೆ ಅದರ ಮುಂದಿನ ವಾರ, ನೀನು ಮೂರು ರಾತ್ರಿ ಬರ್ಲಿನಿನಲ್ಲಿ, ಮೂರು ರಾತ್ರಿ ವ್ಹೆರಿಯದಲ್ಲಿ ಇರಬೇಕಾಗುವುದು.''

"ಏನು ಸಮಾಚಾರ ?"

"ಯಾವುದೊ ದೊಡ್ಡ ಕಾರ್ಯಭಾರ ಬಿದ್ದಿರುವಂತಿದೆ ನಿನ್ನ ಮೇಲೆ."

ಇದನ್ನು ಕೇಳಿ ಗ್ರೇಸಳ ಕಣ್ಣುಗಳಲ್ಲಿ ಭಯ ಹಣಿಕಿಕ್ಕಿತು. "ಆತನೆಲ್ಲಿ?" ಅವಳು ಅಸ್ಫುಟಸ್ವರದಲ್ಲಿ ಕೇಳಿದಳು.

"ವೈರಿಯಾದಲ್ಲಿ."

ಈಗಲಂತೂ ಗ್ರೇಸಳ ಮುಖಕ್ಕೆ ಧೂಳಿಯ ಬಣ್ಣ ಬಂದಿತು.

ಅವಳ ಭಾವವನ್ನರಿತು ಡಾಲ್ಮಾ ಅವಜ್ಞೆಯಿಂದ ಮಾತನಾಡಿದ: "ನೀನು ಇತ್ತೀಚೆ ತೀರ ಅಧೋಗತಿಗಿಳಿದಿದ್ದೀ. ನಿನ್ನ ಹೃದಯ ವಿಶೇಷ ಪರಿವರ್ತನೆ ಹೊಂದಿದೆಯೆಂದು ನಿಚ್ಚಳವಾಗಿ ಕಾಣುತ್ತಿದೆ. ಈಗ ನಿನ್ನಲ್ಲಿ ವಿಶ್ವಾಸವಿಡಬಹುದೋ ಹೇಗೆಂಬುದು ತಿಳಿಯದಾಗಿದೆ."

ಈ ತಿರಸ್ಕಾರದಿಂದ ಪೆನಿಸಲಳ ಮೋರೆ ಕೆಂಪಾಯಿತು. ಅವಳು ಡಾಲ್ಮಾನ ಮುಖವನ್ನು ದುರುದುರು ನೋಡಿದಳು.

ತತ್ಕ್ಷಣವೆ ಡಾಲ್ಮಾ ಹೇಳಿದ: "ಕೆಟ್ಟ ವಿಚಾರದಿಂದ ನಾನು ಈ ಮಾತನಾಡುತ್ತಿಲ್ಲ. ನಿನ್ನಲ್ಲೀಗ ಮೊದಲಿನ ಸಾಹಸವುಳಿದಿಲ್ಲವೆಂದು ನನ್ನ ಅಭಿಪ್ರಾಯ."

"ನನ್ನಲ್ಲಿ ಅಂದಿದ್ದ ಸಾಹಸ ಇಂದೂ ಇದೆ. ವಹಿಸಿಕೊಂಡ ಕೆಲಸವನ್ನು ಪೂರ್ತಿಗೊಳಿಸಲು ನಾನು ಎಂದೂ ಕುಂಠಿತಳಾಗಿಲ್ಲ, ಮುಂದೆಯೂ ಆಗುವುದಿಲ್ಲ. ಆಡುವುದು ಸಹಜ, ಮಾಡುವುದು ಅಷ್ಟು ಸಹಜವಲ್ಲ, ನೋಡು. ಅದಕ್ಕೆ ಕೆಲಸವನ್ನು ಕೈಕೊಳ್ಳುವ ಮೊದಲು ಸ್ವಲ್ಪ ಹಿಂದು, ಮುಂದು ನೋಡಬೇಕಾಗುವುದು. ಇದು ಅಸ್ವಾಭಾವಿಕವಲ್ಲವೆಂಪೆನಿಸುತ್ತದೆ."

ಡಾಲ್ಮಾ ನೀರಸಸ್ವರದಲ್ಲಿ ಹೇಳಿದ: "ಈ ಸಲ ನಿನಗೆ ಯಾವ ಭಯಾವಹ ಕಾರ್ಯವನ್ನೂ ಹೇಳುವುದಿಲ್ಲ. ಬರ್ಜಿಲಂಡಿನ ಪ್ರಕೃತ ಶಾಸನಕರ್ತರ ಕಡೆ ಒಂದು ಗುಪ್ತಸಂವಾದವನ್ನು ನೀನೊಯ್ಯಬೇಕಾಗಿದೆ."

"ಬರ್ಜಿಲಂಡಿನ ಪ್ರಕೃತ ಶಾಸನಕರ್ತರು ಯಾರು ಮತ್ತೆ ?"

"ಅಲ್ಲಿಯ ಸಾಧಾರಣ ತಂತ್ರವಾದಿಗಳ ಅಧಿನಾಯಕ. ರಾಜಪಕ್ಷದವರು ಅವನಿಗೆ ವಿದ್ರೋಹಿಗಳ ದಳಪತಿ ಎನ್ನುತ್ತಾರೆ."

## ೧೫

ಜಾನ್ ಪಿಟರ್ಸ್ ಬೀದಿಯ ಬದಿಯಲ್ಲಿ ನಿಂತಿದ್ದ. ಅದೊಂದು ಪ್ರಶಸ್ತ ರಾಜಪಥವಾದರೂ ಬೆಳಕಿನ ವ್ಯವಸ್ಥೆ ಸರಿಯಾಗಿರಲಿಲ್ಲ. ವಿರಳ-ವಿರಳವಾದ ದೀಪಗಳು ಕತ್ತಲೆಯನ್ನು ತೊಲಗಿಸಲು ಅಸಮರ್ಥವಾಗಿದ್ದವು. ಅವನು ತೀಕ್ಷ್ಣ ದೃಷ್ಟಿಯಿಂದ ಸುತ್ತಲೂ ನೋಡಿದ. ಯಾರೋ ತನ್ನನ್ನು ಅನುಸರಿಸುತ್ತಿರುವಂತೆ ಅವನಿಗೆ ಸಂದೇಹವುಂಟಾಗಿತ್ತು. ಯಾರದೋ ಹೆಜ್ಜೆಯ ಸದ್ದು ಅಸ್ಪಷ್ಟವಾಗಿ ಕೇಳಿಸಿದಂತಾಗಿತ್ತು. ತಾನು ನಿಂತುದನ್ನರಿತು ಅವನು ಎಲ್ಲಿಯೋ ಕತ್ತಲೆಯಲ್ಲಿ ಅವಿತಿರಬೇಕು. ಎಂದು ಪಿಟರ್ಸ್ ಭಾವಿಸಿದ. ಕೆಲಹೊತ್ತಿನ ತರುವಾಯ ಪಿಟರ್ಸ್ ರಾಜಪಥವನ್ನು ಬಿಟ್ಟು ಕಿರಿಯಗಲಾದ ಸಂದಿಯನ್ನು ಸೇರಿದ. ಎಡಬಲದ ಯಾವ ಮನೆಯಲ್ಲಿಯೂ ದೀಪಿಗೆ ಕಾಣುತ್ತಿರಲಿಲ್ಲ. ನಗರದ ಆ ಭಾಗ ಅತಿ ನಿರ್ಜನವಾದದ್ದು.

ಮೆಲ್ಲ ಮೆಲ್ಲನೆ ನಡೆದು ಹೋಗಿ ಪಿಟರ್ಸ್ ಒಂದು ಮನೆಯ ಬಾಗಿಲನ್ನು ತಟ್ಟಿದ. ಬಾಗಿಲು ತೆರೆಯಿತು ಅವನು ಒಳಗೆ ಹೋಗಿ ಒಂದು ಕೋಣೆಯನ್ನು ಪ್ರವೇಶಿಸಿದ. ಅಲ್ಲಿ ಒಬ್ಬ ದರಿದ್ರ ದನಕ್ಕು ಪಿಯಾನೋ ಬ ರಿಸತ್ತಿದ್ದ! ಕೆಂಪುಡುಗೆಯ ಒಬ್ಬ ನಾರಿ ಸೋಫಾದಲ್ಲಿ ವಿರಮಿಸಿದ್ದಳು. ಪಿಟರ್ಸ್ ಬೇರೊಂದು ಕೋಣೆಯೊಳಗೆ ಹೋಗಿ ಮನೆಯೊಡೆಯನನ್ನು ಕರೆದ. ಅವನ ಹೆಸರು ಜೋಹಾನ್. ಅದು ಅವನ ಭೋಜನಾಲಯ. ಪಿಟರ್ಸ್ ಅವನಿಗೆಂದ: "ಇಲ್ಲಿ ನೋಡು ಜೋಹಾನ್, ನಾನು ನಿನಗೆ ಒಂದಕ್ಕೇ ಹೇಳಿದ್ದೇನೆ—ನಾನು ಇಲ್ಲಿಗೆ ಬರಲಿದ್ದಾಗ, ಅದಕ್ಕೆ ಮೊದಲೇ ನಿನ್ನ ಹೋಟೆಲಿನಿಂದ ಅಪರಿ-ಚಿತರನ್ನೆಲ್ಲ ಹೊರಗೆ ಹಾಕಬೇಕೆಂದು. ದೇಶದಲ್ಲೆಲ್ಲ ನನ್ನ ಬಗ್ಗೆ ಚರ್ಚೆ ನಡೆಯುತ್ತಿದೆ. ನಿನ್ನ ಭೋಜನಾಲಯದಲ್ಲಿ ನಾನಾಡಿದ ಮಾತುಗಳು ಗೌಪ್ಯವಾಗಿ ಉಳಿಯುತ್ತಿಲ್ಲ; ಇದು ಬಲು ಅನ್ಯಾಯ.

"ಮಹಾಶಯರೆ, ಇಲ್ಲಿ ಒಬ್ಬನ ಹೊರತು ಯಾರೂ ಹೊರಗಿನವರಿಲ್ಲ. ಅವನು ಅಪರಿಚಿತನೇನೋ ಹೌದು. ಆದರೆ, ವಿಪದ್ಗ್ರಸ್ತನಾಗಿ ಇಲ್ಲಿ ಆಸರೆ ಹೊಂದಿದವನು. ತಾವು ಮೆಲ್ಲಗೆ ಮಾತನಾಡಿರಿ, ಅವನಿಗೆ ಕೇಳಿಸೀತು—ತಾವು ಯಾರೆಂಬುದು ತಿಳಿದೀತು." ಎಂದ ಜೋಹಾನ್.

ಸಮುಮನಿಸಿನಿಂದ ಪಿಟರ್ಸ್ ನುಡಿದ: "ನಾನು ಯಾರೆಂಬುದು ಅವನಿಗೆ ಗೊತ್ತಾದರೆ ಬಾಧಕವೇನೂ ಇಲ್ಲ. ಊರ ಮಂದಿ ನನ್ನ ಬಗ್ಗೆ ಬೇಕಾದಷ್ಟು ಹರಲಿ ಮಾಡುತ್ತಿದ್ದಾರೆ; ನಾನದನ್ನು ಲೆಕ್ಕಿಸುವೆನೆ? ಬೇಕಾದಲ್ಲಿ ತಿರುಗುತ್ತೇನೆ, ಮನಸ್ಸಿಗೆ ಸೊಗಸೆನಿಸಿದ್ದನ್ನು ಮಾಡುತ್ತೇನೆ. ಹಿಂಜರಿಯುವವನಲ್ಲ. ಕೊಂಚ ಮದ್ಯಸೇವನೆ ಮಾಡಿ, ಕೊಂಚ ಆಮೋದಪಟ್ಟು ಹೋಗಬೇಕೆಂದು ಇಲ್ಲಿಗೆ ಬಂದಿದ್ದೇನೆ. ಈ ಅಪರಿಚಿತನು ನನ್ನ ವಿಷಯವಾಗಿ ಮಾತನಾಡಿದರೆ, ನಾನೇನು ಮಾಡುವೆನೆಂಬುದನ್ನು ಕದ್ದು ನೋಡಿದರೆ, ಅವನ ಕತ್ತು ಹಿಸುಕಿಬಿಡುತ್ತೇನೆ."

ಆಗ ಆ ಅಪರಿಚಿತ ಮನುಷ್ಯನು ಪಿಟರ್ಸನೆದುರಿಗೇ ಬಂದು ಮಾತನಾಡಿದ: "ಮಹನೀಯರೇ, ತಾವು ಯಾರೋ ನಾನರಿಯೆ, ಅರಿತುಕೊಳ್ಳುವ ಇಚ್ಛೆಯೂ ಇಲ್ಲ. ಮದ್ಯಪಾನದ ಚಟವಾದುದರಿಂದ ಇಲ್ಲಿ ಬಂದೆ. ಇದಕ್ಕೆ ತಮ್ಮ ಆಕ್ಷೇಪವಿದ್ದರೆ ಈಗಲೇ ಹೊರಟುಹೋಗಲು ಸಿದ್ಧನಿದ್ದೇನೆ. ಆದರೆ ತಾವು ಮರೆಯಬಾರದು—ಇದು ಸಾರ್ವಜನಿಕ ಭೋಜನಾಲಯ. ಇಲ್ಲಿಗೆ ಬರಲು ಎಲ್ಲರಿಗೂ ಅಷ್ಟೆ ಅಧಿಕಾರವಿದೆ; ಇಲ್ಲಿ ಎಲ್ಲರೂ ಸಮಾನರು."

ವಿಷಯ ಜಗಳಕ್ಕೇ ಬಂದುದನ್ನು ಕಂಡು, ಅದನ್ನು ನಿವಾರಿಸಲೆಂದು ಜೋಹಾನ್ ಹೇಳಿದ: "ಮಹಾಶಯರೆ, ನಾನು ಇಬ್ಬರನ್ನೂ ವಿನಯದಿಂದ ಬೇಡಿಕೊಳ್ಳುತ್ತೇನೆ— ದಯವಿಟ್ಟು ಜಗಳಾಡಬೇಡಿರಿ, ತಮ್ಮ ಬಾಯಿ ಕೇಳಿ ಪೋಲಿಸರು ಬಂದೆರಗಿದರೋ ನಾನು ಸತ್ತೆ. ಕಳೆದವಾರ ನಾನೊಂದು ಫೌಜದಾರೀ ಕಟ್ಲೆಗೆ ಗುರಿಯಾಗಿದ್ದೇನೆ. ಈಗ ಮತ್ತೇನಾದರೂ ನನ್ನ ವ್ಯವಸಾಯಕ್ಕೇ ಕೊಡಲಿ ಬೀಳುವುದು."

ಇದರಿಂದ ಪಿಟರ್ಸ್ ಶಾಂತನಾಗುವ ಬದಲು ಮತ್ತಷ್ಟು ಕೆರಳಿದ. ಜೋಹಾನನನ್ನು ದಬ್ಬಿದ. ಆ ಆಘಾತಕ್ಕೆ ಅವನು ಹತ್ತು ಮೊಳ ದೂರಕ್ಕೆ ಹೋಗಿ ಜೋಲಿ ಸಾವರಿಸಿಕೊಂಡು ನಿಂತ. ಪಿಟರ್ಸ್ ಅಪರಿಚಿತನನ್ನೆದುರಿಸಿ "ಹುಡುಗಾ, ನಾನು ಕೇಳುವುದಕ್ಕೆ ಸರಿಯಾಗಿ ಉತ್ತರ ಕೊಡು, ಸುಳ್ಳಾಡಬೇಡ. ನಾನು ಯಾರೆಂದು ಗೊತ್ತಿದೆಯೇನು?" ಎಂದು ಕೇಳಿದ.

"ಇಲ್ಲ ಮಹಾಶಯ"

"ತಿಳಿದುಕೊಳ್ಳುವ ಇಚ್ಛೆಯಿದೆಯೇನು?"

" ನನಗಾ ಆಗ್ರಹವಿಲ್ಲ. "

ಜಾನ್ ಪಿಟರ್ಸ್ ಒಮ್ಮೆಲೆ ಮುಂಬರಿದು. ಆ ಮನುಷ್ಯನ ಕೆನ್ನೆಗೆ ಚೆನ್ನಾಗಿ ಒಂದೇಟು ಕೊಟ್ಟು– "ಎಲಾ ಸುಳ್ಳಾ, ನೀನು ನನ್ನ ಬೆನ್ನುಹತ್ತಿದ್ದು ನನಗೆ ಗೊತ್ತಾಗಿಲ್ಲವೆಂದೆಯಾ? ನಾನು ಇಲ್ಲಿಗೆ ಹೊರಟದ್ದನ್ನರಿತು ನೀನೂ ಸದ್ಗೃಹಸ್ಥನಂತೆ ಇಲ್ಲಿ ಬಂದು ಸೇರಿದೆ ನಾನು ಮಾಡುವುದನ್ನೆಲ್ಲ ಅರಿತು-ಕೊಳ್ಳುವುದು, ರಾಜದ್ವೇಷಿ ಪತ್ರಿಕೆಗಳಲ್ಲಿ ಅದನ್ನು ವಿವೇಚಿಸುವುದು, ಇದೇ ನಿರುದ್ಯೋಗಿಗಳ ತಂಡಕ್ಕೆ ಒಂದುದ್ಯೋಗವಾಗಿದೆ. ನೀನು ಅದೇ ತಂಡದವ-ನೆಂದು ಖಂಡಿತ ಗೊತ್ತಾಗಿದ್ದರೆ ನಿನ್ನ ತಲೆಯನ್ನೇ ತೆಗೆದುಕೊಳ್ಳುತ್ತಿದ್ದೆ " ಎಂದ.

ಆ ಮನುಷ್ಯನು ತಲೆದಿಮ್ಮೆಂದು ಬೀಳುವವನು; ಸಾವರಿಸಿಕೊಂಡು ಬಲಗೈಯಿಂದ ಕೆನ್ನೆಯನ್ನು ಸವರಿಕೊಳ್ಳುತ್ತ, ಎಡಗೈಯನ್ನು ಜೇಬಿನಲ್ಲಿ ಸೇರಿಸಿದ, ಆದರೆ ಆ ಕೈ ಹೊರಗೆ ಬರುಬರುತ್ತಲೆ ಪಿಟರ್ಸ್ ಅವನ ಮುಂಗ-ಯ್ಯನ್ನು ಬಲವಾಗಿ ಹಿಡಿದು ಹಿಸುಕಿದ ಆ ಮನುಷ್ಯ ನೋವನ್ನು ತಾಳ-ಲಾರದೆ ಚೀರಿದ; ಅವನ ಕೈಯೊಳಗಿನ ಸಣ್ಣ ಪಿಸ್ತೂಲು ಕೆಳಕ್ಕೆ ಬಿತ್ತು.

ಪಿಟರ್ಸ್ ಎಂದ: "ಈಗ ತಿಳಿಯಿತು, ನೀನು ಪತ್ತೇದಾರ, ಜೋಹಾನ್ ಕೋಣೆಯ ಬಾಗಿಲಿಕ್ಕು ಇವನಿಗೆ ಚೆನ್ನಾಗಿ ಬುದ್ಧಿಗಲಿಸುತ್ತೇನೆ— ಈ ಪತ್ತೇದಾರಿಕೆ ಎಂದಿಗೂ ಬೇಡಪ್ಪ ಎನ್ನುವ ಹಾಗೆ, ಇನ್ನು ಮುಂದೆ ಯಾವ ಸದ್ಗೃಹಸ್ಥರನ್ನೂ ಅನುಸರಿಸದ ಹಾಗೆ ಮಾಡುತ್ತೇನೆ. "

ಆ ಮನುಷ್ಯ ಹೆದರಿ ನಡುಗಹತ್ತಿದ. ಪಿಟರ್ಸ್ ಅವನ ಕತ್ತನ್ನು ಒತ್ತಿಹಿಡಿದ. ಇನ್ನು ಸ್ವಲ್ಪ ಸತುವು ಹಾಕಿದರೆ ಮೇಲಿನ ಉಸಿರು ಮೇಲೆ, ಕೆಳಗಿನ ಉಸಿರು ಕೆಳಗೆ ಆಗಿ ಸಾಯುವೆನೆಂದು ಅವನಿಗೆನಿಸಿತು. ಕುತ್ತು ಸುರು ಬಡುತ್ತ ಅವನೆಂದ: " ಬಿಡಿರಿ ಮಹಾಶಯ, ನಾನು ಯಾರೆಂಬುದನ್ನು ಹೇಳುತ್ತೇನೆ. ನಿಮ್ಮ ದಮ್ಮಯ್ಯ, ಕೊಲ್ಲಬೇಡಿ ನಾನು ನನ್ನ ಕರ್ತವ್ಯ ಪಾಲನೆಗಾಗಿಯೆ ಇಲ್ಲಿಗೆ ಬಂದದ್ದು, ಮತ್ತೇತಕ್ಕೂ ಅಲ್ಲ. "

ಪಿಟರ್ಸ್ ಗರ್ಜಿಸಿದ : " ಈಗ ಹೇಗೆ ಹೊರಬಿತ್ತು ನೋಡು ಸತ್ಯ. ನನ್ನ ಗುರುತಿಲ್ಲವೆಂದು ಆಗಲೇ ಸುಳ್ಳು ಹೇಳಿದೆಯಾ? "

" ಹೌದು ಮಹಾಶಯ, ಸುಳ್ಳೇ ಹೇಳಿದೆ "

"ಈಗ ಹೇಳು– ನೀನು ಯಾರು? ನನ್ನ ಬಗ್ಗೆ ಏನೇನು ಬಲ್ಲೆ?"

"ತಾವು ಬರ್ಜಿಲ್ಯಾಂಡಿನ ಯುವರಾಜರು, ಜಾನ್ ವ್ಹಾಲಂಟಾಯಿನ್"

"ಸರಿ, ಇದೀಗ ಸತ್ಯ. ನನ್ನನ್ನನುಸರಿಸಲು ನಿನ್ನನ್ನು ಕಳಿಸಿದವರು ಯಾರು? ನೀನು ಯಾರ ಗುಪ್ತಚಾರ?"

"ಯಾರ ಗುಪ್ತಚಾರನೂ ಅಲ್ಲ. ತಾವು ಕತ್ತಲೆಯ ರಾತ್ರಿಯಲ್ಲಿ ಹೊರಟಿದ್ದಿರಿ. ಏನಾದರೂ ಸಂಕಟ ಬರದೇತೆಂದು ದೂರದೂರದಿಂದ ಕಾಯುತ್ತಿದ್ದೆ."

ಆವನ ಮಾತನ್ನು ಕೇಳಿ ಪಿಟರ್ಸ್ ಗಹಗಹನೆ ವಿಕಟವಾಗಿ ನಕ್ಕ. ನಗೆ ನಿಂತಮೇಲೆ, "ನೀನು ಬರ್ನಾರ್ಡ್‌ರ ಅನುಚರನಲ್ಲವೆ?" ಎಂದು ಕೇಳಿದ.

"ಹೌದು ಒಡೆಯಾ. ಅವರೇ ತಾವು ಎಲ್ಲೆಲ್ಲಿ ಹೋಗುವಿರೆಂದು ನೋಡುವುದಕ್ಕೆ, ತಮಗೆ ಸಂಕಟವೊದಗಿದರೆ ರಕ್ಷಿಸಲಿಕ್ಕೆ ಅಪ್ಪಣೆಕೊಟ್ಟು ಕಳಿಸಿದ್ದರು."

ಪಿಟರ್ಸ್ ಹತ್ತಿರವಿದ್ದ ಭೋಜನಾಲಯದ ಆಳಿಗೆ ಹೇಳಿದ: "ಬೇಗನೆ ಒಂದು ಸೀಸೆ ಮದ್ಯವನ್ನು ತಾ. ಪೋಲಿಸ್ ಮುಖ್ಯಾಧಿಕಾರಿಯ ಸಜ್ಜನಿಕೆಗಾಗಿ ಸಂತೋಷವನ್ನು ವ್ಯಕ್ತಗೊಳಿಸುವ; ನನ್ನ ಮಂಗಲದ ಚಿಂತೆ ಬಹಳ ಅವರಿಗೆ!" ಎಂದು ಆ ಮನುಷ್ಯನ ಕಡೆಗೆ ಹೊರಳಿ "ತಮ್ಮಾ, ಹೊಟ್ಟೆತುಂಬ ಮದ್ಯ ಕುಡಿದು ಹೋಗು. ನಿನ್ನ ದೈವ ಒಳ್ಳೇದು, ಉಳಿದುಕೊಂಡೆ. ಬರ್ನಾರ್ಡ್‌ರ ಗುಪ್ತಚಾರನಾಗದೆ ಪ್ರಂಡ ರಾಜದ್ರೋಹಿ ಪತ್ರಿಕಾಕರ್ತರ ಸುದ್ದಿಗಾರನಾಗಿದ್ದರೆ, ಇಷ್ಟೊತ್ತಿಗೆ ನಿನ್ನ ತಲೆ ನಿನ್ನ ಹೆಗಲಮೇಲಿರುತ್ತಿರಲಿಲ್ಲ. ಮದ್ಯವನ್ನು ಕುಡಿದು ಹೋಗಿ ನಿಮ್ಮ ಕರ್ತವ್ಯಪರಾಯಣ ಬರ್ನಾರ್ಡ್‌ರಿಗೆ ಎಲ್ಲವನ್ನೂ ಹೇಳು."

ಆದರೆ ಆ ಮನುಷ್ಯನು ಮದ್ಯದಾಸೆಯಿಂದ ನಿಲ್ಲದೆ ವ್ಯಗ್ರಭಾವದಿಂದ ಹೊರಡಲುದ್ಯುಕ್ತನಾದ. ಪಿಟರ್ಸ್ ಅವನನ್ನು ಕೂಗಿ, "ತಡೆ ತಡೆ, ಒಬ್ಬನೇ ಹೋಗಬೇಡ. ನನ್ನೊಂದಿಗೆ ಬಾ, ಬರ್ನಾರ್ಡ್ ಬಲು ಧೂರ್ತರು, ಚೆನ್ನಾಗಿ ತಿಳಿದು ನೋಡಿಯೆ ನಿನ್ನನ್ನು ನನ್ನ ಪ್ರೈಗಾವಲಿಗಟ್ಟಿದ್ದಾರೆ. ನಿನ್ನನ್ನು ಒಬ್ಬನನ್ನೇ ನಾನು ಬಿಡಲಾರೆ. ಜೋಹಾನ್, ನನಗೆ ಬಹಳ ದಣಿವಾಗಿದೆ, ಒಂದು ಗಾಡಿಯನ್ನು ತರಿಸು, ಮನೆಗೆ ಹೋಗುತ್ತೇನೆ."

ಆಳು ಬಾಡಿಗೆಯ ಬಂಡಿಯನ್ನು ತಂದ. ಪಿಟರ್ಸ್ ಮತ್ತು ಬರ್ನಾರ್ಡರ ಮನುಷ್ಯ ಇಬ್ಬರೂ ಹೊರಟರು. ಹೋಗು ಹೋಗುತ್ತ ಪಿಟರ್ಸ್ ಕೇಳಿದ: "ನಿನ್ನ ಹೆಸರೇನು?"

"ಹಾವರ್ಡ್ಯಾನ್,"

"ಹಾವರ್ಡ್ಯಾನ್, ನನ್ನನ್ನು ಅನುಸರಿಸಲು ಯಾವಾಗಲೂ ನಿನ್ನನ್ನೇ ಕಳಿಸುವಂತೆ ಬರ್ನಾರ್ಡರಿಗೆ ಹೇಳು: ನೀನು ಬಲು ಒಳ್ಳೇ ಮನುಷ್ಯ. ನಿನಗಿಷ್ಟವಿದ್ದರೆ ನನ್ನೊಂದಿಗೆ ಊರೊಳಗಿನ ಬೇರೆ ಬೇರೆ ಮಂದಿರಗಳಲ್ಲಿ ಆಮೋದ ಸೂರೆಗೊಳ್ಳಬಹುದು. ಎಲ್ಲಾ ಆಮೋದ ಮಂದಿರಗಳು ನನಗೆ ಗೊತ್ತಿವೆ. ನನಗೀಗ ನಿದ್ದೆ ಬರುತ್ತಿದೆ. ನನ್ನನ್ನು ಅರಮನೆಗೆ ಮುಟ್ಟಿಸಿ ನೀನು ನಿನ್ನ ಒಡೆಯನ ಕಡೆ ಹೋಗು."

ಪಿಟರ್ಸ್ ಎರಡು ಕೈಗಳನ್ನೂ ಜೇಬಿನಲ್ಲಿ ಸೇರಿಸಿ ಕಣ್ಣು ಮುಚ್ಚಿದ. ಸ್ವಲ್ಪ ಹೊತ್ತಿನಲ್ಲಿ ಅವನ ಮೂಗು ದನಿಗೈಯತೊಡಗಿತು. ಅದನ್ನು ಕೇಳಿ ಹಾವರ್ಡ್ಯಾನ್ ಸಮಾಧಾನಗೊಂಡು ಕೊಂಚ ಸಮಯ ಅವನ ಮೊಗವನ್ನು ನೋಡುತ್ತಿದ್ದ. ಬಳಿಕ ಮೆಲ್ಲನೆ ಬಂಡಿಯ ಬಾಗಿಲನ್ನು ತೆರೆದುಕೊಂಡು ಜಿಗಿದು ಓಡಿದ.

## ೧೬

ಹೊಳೆಯಲ್ಲಿ ತರುಬಿದ್ದ ನೌಕೆಯೊಂದರಲ್ಲಿ ಒಬ್ಬನು ಒರಗಿಕೊಂಡು ಮುಂಜಾವದ ಎಳೆಬಿಸಿಲಿನ ಸುಖವನ್ನು ಅನುಭವಿಸುತ್ತಿದ್ದ. ಜಾನ್ ಪಿಟರ್ಸ್ ಅಶ್ವಾರೋಹಿಯಾಗಿ ಹೊರಬಿದ್ದವನು, ಹಸ್ತಗಳೆರಡನ್ನು ಜೋಡಿಸಿ ಶಂಖಧ್ವನಿಗೈದ. ಸ್ವಲ್ಪ ದೂರದಲ್ಲಿ ಹೋಗುತ್ತಿದ್ದ ಇನ್ನೊಬ್ಬ ಅಶ್ವಾರೋಹಿಯನ್ನು ಕುರಿತು ಸಂಜ್ಞೆಯಾಗಿತ್ತು ಆ ಧ್ವನಿ. ದೋಣಿಯಲ್ಲಿ ಮಲಗಿದ್ದವನು ಬೆಚ್ಚಿಬಿದ್ದು ಎದ್ದುಕುಳಿತ. ಮುಂದಿದ್ದ ಅಶ್ವಾರೋಹಿ ತನ್ನ ಕುದುರೆಯನ್ನು ತಿರುಗಿಸಿ ನಿಂತ ಪಿಟರ್ಸ್ ವೇಗದಿಂದ ಕುದುರೆಯನ್ನು ನಡೆಸಿ ಹತ್ತಿರ ಬರುತ್ತಲೇ ಅವನೆಂದ: "ತಮ್ಮ ಅಭಿಪ್ರಾಯವೇನು? ಇಷ್ಟೇಕೆ ಉತ್ಸಾಹ? ಎಲ್ಲಿಂದ ಬಂದಿರಿ?"

"ಬೆಳಗಿನ ಸಂಚಾರಕ್ಕೆ ಹೊರಟಿದ್ದೆ. ದೂರದಿಂದಲೇ ನೋಡಿ ನಿಮ್ಮನ್ನು ಗುರುತಿಸಿದೆ. ಬರ್ನಾರ್ಡ್ ತಮ್ಮೊಡನೆ ತುಸು ಮಾತನಾಡುವುದಿತ್ತು. ನಿಮ್ಮ ಚಾವಡಿಯಲ್ಲಿ ಅದು ಸಾಧ್ಯವಿರಲಿಲ್ಲ. ಅದು ಚಾವಡಿಯಲ್ಲ, ಸಂತೆ. ಅದಕ್ಕೆ ದಾರಿಯಲ್ಲಿಯೇ ಮಾತನಾಡುವ."

"ನನ್ನನ್ನು ಹುಡುಕಿಕೊಂಡೇ ಹೊರಬಿದ್ದಿರೇನು ?"

"ಹೌದು. ಗುಟ್ಟಿನ ಮಾತುಗಳನ್ನಾಡಲು ಇಂತಹ ಸುಯೋಗ ಮತ್ತೆಲ್ಲಿ ?"

ಕುದುರೆಗಳು ಸಾವಕಾಶವಾಗಿ ಸಾಗಿದ್ದವು. "ಬರ್ನಾರ್ಡ್, ಇಂದು ಬೆಳಿಗ್ಗೆ ನೀವು ಚಾವಡಿಗೆ ಹೋಗಿದ್ದಿರೋ ?" ಪಿಟರ್ಸ್ ಕೇಳಿದ.

"ಇಲ್ಲ"

"ಹಾಗಾದರೆ ನೀವು ಅಲ್ಲಿಗೆ ಹೋದಾಗ ನಿಮ್ಮ ಗುಪ್ತಚಾರನೊಬ್ಬ ನಿಮಗಾಗಿ ಕಾದಿರುವ. ನಿನ್ನೆ ರಾತ್ರಿ ಅವನು ನನ್ನ ಬೆನ್ನು ಹತ್ತಿದ್ದ; ನಾನು ಅವನನ್ನು ಹಿಡಿದು ಬಿಟ್ಟೆ."

"ನಿನ್ನೆ ತಮಗೆ ಪೈಮೇಲೆ ಎಚ್ಚರವಿತ್ತೆನ್ನಿರಿ ಹಾಗಾದರೆ."

"ನಾನು ಯಾವಾಗಲೂ ಮದಮತ್ತನಾಗಿಯೇ ಇರುವೆನೆಂದು ತಿಳಿದಿದ್ದೀರೇನು?" ಸುತ್ತಲೂ ಏನು ನಡೆಯುತ್ತಿದೆ ಎಂಬುದು ಕಾಣದಷ್ಟು ಮತ್ತ ನನಗೆಂದೂ ಏರಿರುವುದಿಲ್ಲ. ಪುಣ್ಯಕ್ಕೆ ನಿನ್ನೆ ನನ್ನ ಪ್ರಕೃತಿ ಚೆನ್ನಾಗಿತ್ತು; ಇಲ್ಲದಿದ್ದರೆ ನೀವು ಅವನನ್ನು ಆಸ್ಪತ್ರೆಯಲ್ಲಿ ಕಾಣಬೇಕಾಗುತ್ತಿತ್ತು."

"ಅವನಿಂದ ತಮಗೆ ತ್ರಾಸವಾಯಿತೆಂದು ಕೇಳಿ ನನಗೆ ವ್ಯಸನವಾಗುತ್ತದೆ."

'ನಟ್ಟ ನೋಟದಿಂದ ಬರ್ನಾರ್ಡನ ಮುಖವನ್ನು ನೋಡುತ್ತ ಪಿಟರ್ಸ್ ಎಂದ : "ಯಾವ ಧೈರ್ಯದಿಂದ ನನ್ನ ಬೆನ್ನಿಗೆ ಆಳನ್ನಂಟಿಸಿದ್ದಿರಿ ? ನಾನು ಎಲ್ಲೆಲ್ಲಿ ತಿರುಗಾಡುತ್ತೇನೆ ಎಂಬುದನ್ನು ಅರಿತುಕೊಳ್ಳಬೇಕೆನ್ನುವಿರೊ? ನನ್ನ ಕೂಡ ಕಣ್ಣುಮುಚ್ಚಾಟ ಆಡುವುದು ಯಾರಿಗೂ ಅಷ್ಟು ಸಹಜವಲ್ಲ."

ಬರ್ನಾರ್ಡ್ ಅಡ್ಡಗೋಣು ಹಾಕಿ ಉತ್ತರವಿತ್ತ: "ಇಲ್ಲ ಯುವರಾಜ ತಾವು ಹಾಗೇಕೆ ಕಲ್ಪಿಸುತ್ತೀರಿ ? ಅಂಥ ಕೆಟ್ಟ ಉದ್ದೇಶ ನನ್ನಲ್ಲಿಲ್ಲ. ನಾನು ದೇಶದ ಪೋಲಿಸ್ ಕಮಿಶನರ್; ಈಗಿನ ಪರಿಸ್ಥಿತಿಯಲ್ಲಿ ಯುವರಾಜ-

ರೊಬ್ಬರೇ ರಾತ್ರಿಹೊತ್ತು ತಿರುಗುತ್ತಿರುವುದನ್ನು ಕಂಡೂ ಹೇಗೆ ಸುಮ್ಮನಿರಲಿ? ತಮ್ಮ ಬೆಂಗಾವಲಿಗಾಗಿ ಒಬ್ಬನನ್ನು ನಿಯಮಿಸಿದೆ. ನಮ್ಮ ಪೋಲಿಸ್ ವಿಭಾಗದಲ್ಲಿ ಕೌತೂಹಲವೆಂಬ ಶಬ್ದವಿಲ್ಲ, ಕೌತೂಹಲ ವಶದಿಂದ ನಾವು ಯಾವ ಕೆಲಸವನ್ನೂ ಮಾಡುವುದಿಲ್ಲ. ನಾವು ಮಾಡುವುದೆಲ್ಲ ಕರ್ತವ್ಯ-ದೃಷ್ಟಿಯಿಂದಲೇ. ತಾವು ಯುವರಾಜರಲ್ಲದಿದ್ದರೆ ಪೋಲಿಸರು ತಮ್ಮ ಹಿಂದಿರುತ್ತಿರಲಿಲ್ಲ. ”

ಪಿಟರ್ಸ್ ಚಮ್ಮಟಿಗೆಯನ್ನು ಮುಂದಿಟ್ಟು ಕತ್ತು ಹೊರಳಿಸಿ ಕೇಳಿದ: “ಇದು ನಿಜವೆ ? ”

“ ಸಂಪೂರ್ಣ ನಿಜ. ಪೋಲಿಸರು ಸುಳ್ಳಾಡಿದರೆ ನಡೆಯದು.”

“ನಿಮ್ಮ ಮಾತಿನಲ್ಲಿ ಮಿಥ್ಯೆಯ ಗಂಧವೂ ಇಲ್ಲವೆ? ಯಾವ ಮಾತನ್ನೂ ಬಚ್ಚಿಡುವುದಿಲ್ಲವೆ ? ”

“ ಯಾವುದನ್ನೂ ಬಚ್ಚಿಡದೆ ಎಲ್ಲವನ್ನೂ ಪ್ರಕಾಶಪಡಿಸುವ ಮನುಷ್ಯ ಪ್ರಪಂಚದಲ್ಲಿ ಯಾವನಾದರೂ ಉಂಟೆ ? ”

“ ಅಂಥವರು ಇರಲಿ ಬಿಡಲಿ, ಅದರಿಂದ ನನಗೇನಾಗಬೇಕಾಗಿಲ್ಲ. ಆದರೆ ನಿಮ್ಮಿಂದ ನಾನು ಎಲ್ಲವನ್ನೂ ತಿಳಿದುಕೊಳ್ಳಬೇಕಾಗಿದೆ, ನೀವು ಹೇಳಲೇಬೇಕು. ನನ್ನ ಹಿಂದೆ ಗುಪ್ತಚಾರನನ್ನು ಅದೇಕೆ ಅಟ್ಟಿದಿರೆಂಬು-ದನ್ನು ತಿಳಿಸಿರಿ. ”

ಬರ್ನಾರ್ಡ್ ನಸುನಕ್ಕ. ನಯಭಾವದಿಂದ ಪಿಟರ್ಸನ ಮುಖದ ಕಡೆ ನೋಡಿ ಹೇಳಿದ: ನನ್ನ ಮನದ ಮಾತನ್ನೇ ತಮಗೆ ಹೇಳುತ್ತೇನೆ; ತಾವು ನನ್ನ ಮಾತನ್ನು ಪೂರ್ಣ ನಂಬುವಿರಾದರೆ, ನನ್ನ ವಿಚಾರವನ್ನು ಗ್ರಹಿಸುವಿ-ರಾದರೆ, ಈಗಲೂ ರಾಜ್ಯವನ್ನು ರಕ್ಷಿಸಬಲ್ಲೆವು. ”

“ ನನ್ನದೇನೋ ಒಳಸಂಚಿದೆಯೆಂದು ತಮ್ಮ ಗ್ರಹಿಕೆಯೊ? ” ಪಿಟರ್ಸ್ ತೀಕ್ಷ್ಣದೃಷ್ಟಿಯಿಂದ ಬರ್ನಾರ್ಡನನ್ನು ನೋಡುತ್ತ ಕೇಳಿದ.

“ ಪ್ರತಿಯೊಬ್ಬನಿಗೂ ಒಂದಿಲ್ಲೊಂದು ಒಳಸಂಚು ಇದ್ದೇ ಇರುತ್ತದೆ.”

ಬರ್ನಾರ್ಡನ ಮಾತನ್ನು ಕೇಳಿ ಪಿಟರ್ಸ್ ಗಹಗಹಿಸಿ ನಕ್ಕ. ಬಳಿಕ ಅತ್ಯಂತ ಸಂತುಷ್ಟಭಾವದಿಂದ ನುಡಿದ: “ಬರ್ನಾರ್ಡ್, ನೀವು ಒಳ್ಳೇ ಚಾಣಾಕ್ಷರು ಪೋಲಿಸ್ ವಿಭಾಗಕ್ಕೆ ತಕ್ಕವ್ಯಕ್ತಿ. ನನ್ನ ಮನೋಭಾವ

ನಿಮಗೆ ತಿಳಿಯದುಳಿಯಲಿಲ್ಲ. ನೀವು ನನ್ನನ್ನು ಮಕ್ಕಳ ಕೈಯೊಳಗಿನ ಮೋದಕವೆಂದು ಭಾವಿಸಿದ್ದೀರಿ. ನಿಜಕ್ಕೂ ನನ್ನದೊಂದು ಗುಪ್ತ ಅಭಿಸಂಧಿಯಿದೆ. ”

“ ಅದು ನನಗೆ ಗೊತ್ತಾಗಿತ್ತು. ಅಲ್ಲದೆ ತಾವು ನನ್ನೊಡನೆ ಎಷ್ಟು-ನಯವಾಗಿ ನಡೆದುಕೊಳ್ಳುತ್ತಿದ್ದರೂ ಆ ಗುಟ್ಟನ್ನು ಹೇಳುತ್ತಿಲ್ಲವೆಂದೂ ತಿಳಿದಿತ್ತು. ”

“ ನಾನು ಹೇಳಿದರೆ ನೀವು ನಂಬುವಿರೋ ? ”

“ ಏಕೆ ನಂಬುವುದಿಲ್ಲ ? ತಮ್ಮಂಥ ಜನರು ಏನು ಹೇಳಿದರೂ ನಂಬು-ತ್ತೇನೆ. ತಮಗೆ ಅಸಾಧ್ಯವೆಂಬುದು ಯಾವುದಾದರೂ ಇದೆಯೆ ? ತಾವು ರಾಜರು, ನಾಳೆ ರಾಜರಾಗುವವರು, ಜನರೆದುರಿನಲ್ಲಿ ಅನೇಕ ಹೇಯ ಕರ್ಮ-ಗಳನ್ನು ಮಾಡುವಿರಿ. ನಗರದ ವೇಶ್ಯಾಲಯಗಳಲ್ಲಿ ತಮಗೆ ಅಸಾಧಾರಣ ಪ್ರತಿಪತ್ತಿ, ಇಂದ್ರಿಯ ಪರಾಯಣತೆಯಲ್ಲಿ ತಾವೊಂದು ಮಾದರಿ! ಆದರೂ ತಾವು ನಸುಕು ಹರಿಯುವುದರೊಳಗೇ ಎದ್ದು ಇಪ್ಪತ್ತು ಮೈಲು ಪ್ರಯಾಣ ಮಾಡಿದ್ದೀರಿ; ತಮ್ಮ ಮೈಯಲ್ಲಿ ಮದ್ದಾನೆಯ ಬಲವಿದೆ; ಹುಡುಗರಂತೆ ಹುರುಪಿದೆ. ಆದಕ್ಕೇ ತಮಗೆ ಅಸಾಧ್ಯವಾದ ಕೆಲಸವಿಲ್ಲವೆಂದದ್ದು. ”

“ ಮಿತ್ರರೇ, ಇದೆಲ್ಲ ಸುದೃಢಶರೀರದ ಫಲ. ಮೈ ಉಕ್ಕಿನಂತಿದ್ದರೆ ಯಾರ ಕೆಲಸವೂ ತಡೆದುನಿಲ್ಲುವುದಿಲ್ಲ ನಾನು ಈ ಕುದುರೆಯಂತೆಯೆ ಬಲಶಾಲಿ. ಇದು ಗೊತ್ತಿದ್ದೂ ನನ್ನ ಹಿಂದೆ ಗುಪ್ತಚಾರನನ್ನಿಡುವುದೆ ? ವಿದ್ರೋಹಿಗಳ ದಳಪತಿಯನ್ನು ಹಿಡಿಯಲು ನೀವು ಬಹಳ ವ್ಯಸ್ತರಾಗಿದ್ದೀರಿ. ಅವನನ್ನು ನಾನು ಹಿಡಿದುಕೊಡಬಲ್ಲೆ. ”

“ ವಿನೋದಕ್ಕಾಗಿಯೂ ಅನೇಕರು ಸತ್ಯವನ್ನು ನುಡಿಯುವುದುಂಟು. ತಾವು ಯಾವನ ವಿಷಯವಾಗಿ ಮಾತನಾಡುತ್ತಿದ್ದೀರೋ ಅವನಿಗೆ ಅನೇಕ ಶಕ್ತಿಶಾಲಿಗಳಾದ ಮಿತ್ರರಿದ್ದಾರೆಂದು ನಾನು ಕೇಳಿ ಬಲ್ಲೆ. ”

“ ನಿಮ್ಮ ಮಾತಿನ ಅರ್ಥ ನನಗಾಗಲೊಲ್ಲದು ಬರ್ನಾರ್ಡ್. ನಿಮ-ಗೊಂದು ಉಪಯುಕ್ತ ವಿಷಯ ಹೇಳುತ್ತೇನೆ: ನಾನು ಶೀಘ್ರದಲ್ಲಿಯೆ ಪ್ಯಾರಿಸಿಗೆ ಹೋಗಬೇಕೆಂದಿದ್ದೇನೆ. ಇಲ್ಲಿಯ ಗಾಳಿನೀರು ನನಗೆ ಅಸಹ್ಯವಾಗಿ ಬಿಟ್ಟಿದೆ. ” ಎಂದ ಪಿಟರ್ಸ್.

" ಅಂಥ ಅವಸರವೇನು ? ಪಾರ್ಲಿಮೆಂಟು ಸೇರುವವರೆಗೆ ಇಲ್ಲಿ ಇರ್ರಿ "

" ನಿಮ್ಮ ಗುಪ್ತಚಾರರು ಯಾವಾಗಲೂ ನಿಮಗೆ ಸತ್ಯಸಂಗತಿಯನ್ನೇ ಹೇಳುತ್ತಾರೋ ಇಲ್ಲವೋ ಗೊತ್ತಿಲ್ಲ. ಆದರೆ ನಾನು ನಿಮಗೆ ಹೇಳುತ್ತೇನೆ-ಪ್ರಜೆಗಳ ಭಾವಭಂಗಿ ನನಗೆ ಸರಿ ಕಾಣುವುದಿಲ್ಲ. ಹೋಗುತ್ತಿದ್ದರೆ ನನಗೆ ವಂದನೆಯನ್ನು ಕೂಡ ಅವರು ಮಾಡುವುದಿಲ್ಲ ಒಳ್ಳೆಯದೇ ಈ ಲಕ್ಷಣ ? "

" ಇದರಲ್ಲಿ ತಪ್ಪು ತಮ್ಮದೇ. ತಮ್ಮ ಬಗ್ಗೆ ಅವರಿಗೆ ಉಮೇದೇ ಇಲ್ಲ. ನಾನು ನೋಡಿದ್ದೇನೆ, ಕುದುರೆಯೇರಿಕೊಂಡು ತಾವು ಹೊರಟಿದ್ದಿರೆಂದರೆ ಯಾರಾದರೂ ಅಭಿವಂದಿಸಿದರೆ ತಾವು ತಿರುಗಿ ಅಭಿವಂದಿಸುವುದೇ ಇಲ್ಲ. ನಮ್ಮ ದೊರೆಗಳೂ ನಿರ್ದೋಷಿಗಳಲ್ಲ. ಆದರೆ ಅವರು ಶಿಷ್ಟಾಚಾರವನ್ನು ಉಪೇಕ್ಷಿಸಿದ್ದು ಮಾತ್ರ ಎಂದೂ ಕಂಡಿಲ್ಲ. ತಮ್ಮ ಭಾವವನ್ನು ನೋಡಿದರೆ ಪ್ರಜೆಗಳನ್ನು ವಿಕ್ಷುಬ್ಧಗೊಳಿಸುವುದೇ ಉದ್ದೇಶವೆಂದು ತೋರುತ್ತದೆ."

" ಹಾದಿಯಲ್ಲಿ ಹೋಗುವವರಿಗೆಲ್ಲ ಶರಣುಹೊಡೆಯುತ್ತ ಹೋಗಲು ನಾನು ಅಂಗಡಿಕಾರನೇ ? ಆ ಅಭ್ಯಾಸವಿಲ್ಲ ನನಗೆ.....ಐ, ಎಷ್ಟೋ ಪೋಲಿಸರು ನಿಮ್ಮ ಕಡೆ ಬರುತ್ತಿದ್ದಾರೆ." ಪಿಟರ್ಸ್ ಎಂದ.

ಆಗಿಬ್ಬರೂ ಊರನ್ನು ಸಮೀಪಿಸಿದ್ದರು. ಬೀದಿಯ ಎರಡು ಬದಿಗಳಲ್ಲಿಯೂ ಶ್ರಮಜೀವಿಗಳ ಗುಡಿಸಿಲುಗಳು, ದೊಡ್ಡ ದೊಡ್ಡ ಗಿರಣಿಕಾರಖಾನೆಗಳು. ಹತ್ತಿರದ ಸಂಕದ ಬಳಿ ಸುಮಾರ ಎಪ್ಪತ್ತು ಜನ ಪೋಲಿಸರು ನಿಂತಿದ್ದರು. ಬರ್ನಾರ್ಡ್ ಪಿಟರ್ಸ್‌ನಿಗೆಂದ: " ಇಲ್ಲ, ಅವರು ನನ್ನ ಕಡೆ ಬರುತ್ತಿಲ್ಲ ಅವರನ್ನು ಅಲ್ಲಿಯೇ ಕಾವಲಿರಿಸಿದ್ದೇನೆ ಏಕೆಂದು ಕೇಳುವಿರಾ ? "

" ಹೇಳಿರಿ."

" ವಿದೇಶಗಳಿಂದ ಇಲ್ಲಿಗೆ ಗುಪ್ತವಾಗಿ ಶಸ್ತ್ರಾಸ್ತ್ರಗಳು ಬರುತ್ತಿವೆಯೆಂದು ಎಷ್ಟೋ ದಿನಗಳಿಂದ ಸುದ್ದಿ ಇದೆ. ನಾನೂ ಅನುಸಂಧಾನ ಮಾಡಿದ್ದೆ ಅವು ಭೂಮಾರ್ಗದಿಂದ ಬರುತ್ತಿಲ್ಲ. ನದೀಪಥದಿಂದಲೇ ಬರುತ್ತಿರಬೇಕೆಂದು ನನ್ನ ಸಂದೇಹ. ಬರುವ ಎಲ್ಲ ನೌಕೆಗಳನ್ನೂ ಶೋಧಿಸಬೇಕೆಂದು ಪೋಲಿಸರಿಗೆ ವಿಧಿಸಿದ್ದೇನೆ."

" ನಿಮ್ಮ ಬುದ್ಧಿ ಬಲು ಸೂಕ್ಷ್ಮ. ಆದರೆ ಇಲ್ಲಿ ಒಂದೂ ನೌ ಕಾಣುತ್ತಿಲ್ಲ."

"ಈಗೇನೋ ಇಲ್ಲ, ಬರುತ್ತವೆ; ಸ್ವಲ್ಪ ಹೊತ್ತು ನಿಂತರೆ ಕಾಣುತ್ತವೆ."

"ಹಾಗಾದರೆ ಕಾದುಕೊಂಡಿರ್ರಿ, ನಾನು ಹೋಗುತ್ತೇನೆ. ಇಂದು ಅರಮನೆಯಲ್ಲಿ ನಿಮ್ಮ ಭೆಟ್ಟಿಯಾದೀತೆ ?"

"ಬರುತ್ತೇನೆ; ಹನ್ನೊಂದಕ್ಕೆ ನಾನು ರಾಜರನ್ನು ಕಾಣಬೇಕಾಗಿದೆ." ಎಂದ ಬರ್ನಾರ್ಡ್.

ಜಾನ್ ಪಿಟರ್ಸ್ ಒಂದು ಸಿಗಾರೇಟನ್ನು ಹೊತ್ತಿಸಿಕೊಂಡು ಬೇರೆ ಕಡೆ ಕುದುರೆಯನ್ನು ಬಿಟ್ಟ. ತುಸು ದೂರದಲ್ಲಿ ಒಂದು ಪಾಂಥಶಾಲೆಯಿತ್ತು. ಅಲ್ಲಿ ಅವನು ಕುದುರೆಯಿಂದಿಳಿದು ಬಾಗಿಲಲ್ಲಿ ನಿಂತಿದ್ದ ಮನುಷ್ಯನೊಂದಿಗೆ ಒಂದು ಕೋಣೆಯನ್ನು ಪ್ರವೇಶಿಸಿದ. ಅಲ್ಲಿ ಟೆಲಿಫೋನಿನ ಯಂತ್ರವಿತ್ತು. ಪಿಟರ್ಸ್ ಆ ಮನುಷ್ಯನೊಡನೆ ಏನೋ ಮಾತನಾಡಿ, ಬಳಿಕ ಯಾರಿಗೋ ಫೋನ್ ಮಾಡಿ, ಲಗುಬಗೆಯಿಂದ ಹೊರಟುಹೋದ. ಅದನ್ನು ಕಂಡು ಆ ಮನುಷ್ಯ ಸ್ತಂಭಿತನಾಗಿ ನಿಂತುಬಿಟ್ಟ.

ಕೆಲಹೊತ್ತಿನಲ್ಲಿಯೆ ಬರ್ನಾರ್ಡ್ ಪಾಂಥಶಾಲೆಗೆ ಬಂದು, "ಅವನು ಎಷ್ಟನೆಯ ನಂಬರಿಗೆ ಫೋನ್ ಮಾಡಿದ ?" ಎಂದು ಆ ಮನುಷ್ಯನನ್ನು ವಿಚಾರಿಸಿದ.

ಅವನು ಅನುಮಾನಿಸುತ್ತ "ನಾನು ಹೇಳಲಾರೆ, ಹೇಳುವುದು ನಿಷಿದ್ಧ." ಎಂದ.

"ಹೇಳಲೇ ಬೇಕು. ನಾನು ಯಾರು ಗೊತ್ತುಂಟೆ ? ಪೋಲಿಸ್ ಕಮಿಶನರ್ ಬ್ಯಾರನ್ ಬರ್ನಾರ್ಡ್. ನಿನಗೆ ನಂಬಿಕೆಯಾಗದಿದ್ದರೆ, ಹೊರಗೆ ನನ್ನ ಅನುಚರರಿದ್ದಾರೆ, ಅವರನ್ನು ಕೇಳಿಕೋ."

ಹೆದರಿಕೆಯಿಂದ ಆ ಮನುಷ್ಯನ ಮೋರೆ ಒಣಗಿಬಿಟ್ಟಿತು. "ಮಹಾಶಯರೇ, ಕ್ಷಮಿಸಿರಿ. ಗೊತ್ತಾಗಲಿಲ್ಲ. ಎಲ್ಲವನ್ನು ಹೇಳುತ್ತೇನೆ. ಉದ್ದನೆಯ ಸದ್ಗೃಹಸ್ಥರೊಬ್ಬರು ಬಂದು ಅರಮನೆಗೆ ಫೋನ್ ಮಾಡಿದರು: ಅರ್ಧ ಗಂಟೆಯೊಳಗಾಗಿ ತಮ್ಮ ಊಟದ ಏರ್ಪಾಡು ಮಾಡುವಂತೆ ತಿಳಿಸಿದರು. ಅವರು ಹುಚ್ಚರಿರಬೇಕು. ಹುಚ್ಚರ ಹೊರತು ಅರಮನೆಯ ಸಂಪರ್ಕ ಬೆಳೆಸುವ ಧೈರ್ಯ ಇನ್ನು ಯಾರಿಗಿದ್ದೀತು ?" ಎಂದ.

"ಮತ್ತೇನೂ ಸುದ್ದಿ ಇಲ್ಲವೆ ?"

" ಇಲ್ಲ ಸ್ವಾಮಿ. ನನ್ನ ಮೇಲೆ ಸಂಕಟ ಬರದಹಾಗೆ ಮಾಡಿರಿ."

" ಇಲ್ಲ, ನಿನಗೇನೂ ತೊಂದರೆಯಾಗದು. ಅವರು ತಮ್ಮ ಮನೆಗೇ ಫೋನ್ ಮಾಡಿದ್ದಾರೆ; ಈ ರಾಜ್ಯದ ಯುವರಾಜರವರು."

ಬರ್ನಾರ್ಡ್ ಹೊರಟುಹೋದ. ಆ ಮನುಷ್ಯನಿಗೆ ಎಲ್ಲೆ ಮೀರಿದ ಆಶ್ಚರ್ಯ. 'ನನ್ನ ಮುರಕ ಗುಡಿಸಲಿಗೆ ಯುವರಾಜರೇತಕ್ಕೆ ಬಂದಿದ್ದಾರು?'

೧೭

" ಒಳಗೆ ಬರ್ರಿ "

ಸದ್ದು ಕೇಳಿ ಮೊಗವೆತ್ತಿ ನೋಡುತ್ತಲೆ ಪಿಟರ್ಸ್‌ನನ್ನು ಕಂಡು ಹಾರುವ ಎದೆಯಿಂದ ಗ್ರೇಸ್ ಪೆನಿಸರ್ ಸ್ವಾಗತಿಸಿದಳು. ಹಠಾತ್ ಹೀಗೆ ಅವನನ್ನು ಕಂಡು ಅವಳು ಸ್ತಂಭಿತಳಾಗಿ ಅವನ ಮುಖವನ್ನೇ ನೋಡುತ್ತ ನಿಂತಳು. ಪಿಟರ್ಸ್ ಮಾತನಾಡಲಿಲ್ಲ. ಕೆಲಹೊತ್ತಿನ ಮೇಲೆ ಪೆನಿಸರಳೇ ಕುತೂಹಲ ಚಿತ್ತದಿಂದ ನುಡಿದಳು : " ತಾವು ಯಾವ ವಿಚಾರದಿಂದ ಬಂದಿರೋ ನನಗೆ ಗೊತ್ತಾಗಲಿಲ್ಲ."

ಮೇಜಿನ ಮೇಲೆ ಟೊಪ್ಪಿಗೆಯನ್ನಿಟ್ಟು ಪಿಟರ್ಸ್ ಹೇಳಿದ : " ಆಶ್ಚ-ರ್ಯಕ್ಕೆ ಕಾರಣವೇನು ? ನಿನಗೆ ಗೊತ್ತಿಲ್ಲವೇ,—ಇದು ನಮ್ಮ ದೇಶ, ವೈರಿಯಾ ನಮ್ಮ ರಾಜ್ಯದ ರಾಜಧಾನಿ ಇದು ಲಂಡನಿನಂತೆ ದೊಡ್ಡ ನಗರವಲ್ಲ. ವಿದೇಶಿಗಳು ಇಲ್ಲಿಗೆ ಬಂದರೆ ನಮಗೆ ತಿಳಿಯುವುದು ಕಷ್ಟವಲ್ಲ. ಅದರಲ್ಲಿಯೂ ಈಗ ರಾಜ್ಯದಲ್ಲಿ ನಾನಾ ಸಂಕಟಗಳು ಉಪಸ್ಥಿತವಾಗಿವೆ ಈಗಂತೂ ಯಾವ ಪರದೇಶೀಯ ನರಪ್ರಾಣಿಯ ಆಗಮನವೂ ನಮಗೆ ಗೊತ್ತಾಗದೆ ಉಳಿಯದು. ನೀನು ಬಂದಿರುವೆಯೆಂದು ಕೇಳಿ ಕಾಣಲು ಬಂದೆ. ನಿನಗೇಕೆ ಆಶ್ಚರ್ಯ!"

ಬಲಗೈಯಿಂದ ಹಣೆಯನ್ನು ಮುಚ್ಚಿಕೊಂಡು, " ತಾವು ಇಲ್ಲಿ ಕಂಡೀರೆಂದು ನಾನು ನಿಜಕ್ಕೂ ಭಾವಿಸಿರಲಿಲ್ಲ " ಎಂದು ಅಸ್ಫುಟಸ್ವರದಲ್ಲಿ ನುಡಿದಳು.

" ಬೇರೆ ಯಾರನ್ನೋ ಕಾಣಲು ಆಶಿಸಿದ್ದೆಯೋನೋ ಅಲ್ಲವೆ ? ಕೆಳಗೆ ನಿನ್ನ ಬಗ್ಗೆ ವಿಚಾರಿಸಿದಾಗ ಹಾಗೆಯೇ ನನಗೆನಿಸಿತು. ನಾನು ಬಂದದ್ದು ಕೆಲನಿಮಿಷಗಳ ಮಟ್ಟಿಗೆ ಮಾತ್ರ. ನೀನು ಯಾರಿಗಾಗಿ ಕಾದಿದ್ದೀಯೋ ಅವರು ಬಂದೊಡನೆ ನಾನು ಹೊರಟುಹೋಗುತ್ತೇನೆ."

"ಮೂರು ಗಂಟೆಗೆ ಒಬ್ಬರ ಭೆಟ್ಟಿ ನಿಶ್ಚಿತವಾಗಿದೆ. ಅವರೊಡನೆ ಒಂದು ಗುಟ್ಟಿನ ಮಾತನ್ನು ಆಡುವುದಿದೆ."

"ಅವರು ಬಂದಾಗ ಅವರೊಡನೆ ಮಾತನಾಡಿಕೋ. ಅಷ್ಟರೊಳಗೇ ನಾನು ನಾಲ್ಕು ಮಾತನಾಡಿ ಹೋಗುವೆ."

"ಏನದು ಹೇಳಿರಿ." ಪೆನಿಸರ್ ನಿರುತ್ಸಾಹದಿಂದ ನುಡಿದಳು.

"ಕೇಳು; ನೀನು ಬೇಕಂತಲೇ ಸಿಂಹದ ಗವಿಯೊಳಗೆ ಹೋಗುತ್ತಿದ್ದೀ. ನಾನು ಈ ನಗರದ ಪ್ರಭು; ನನ್ನ ಇಚ್ಛೆಗೆ ಅಡ್ಡ ಬರುವಂಥ ಕಟ್ಟುಕಟ್ಟಳೆ ನಮ್ಮ ದೇಶದಲ್ಲಿಲ್ಲ. ನಾವಿಲ್ಲಿ ಬೇಕಾದ ಹಾಗೆ ವರ್ತಿಸಬಲ್ಲೆವು. ಈಗ ನೀನು ನನ್ನ ಕೈಯಲ್ಲಿ ಸಿಕ್ಕಿದ್ದೀ ಈ ಅವಸ್ಥೆಯಲ್ಲಿ ನಾನು ಹೇಳಿದಂತೆ ನೀನು ನಡೆಯಲೇಬೇಕು."

ಪೆನಿಸರ್ ಮೆಲುನಗೆ ನಕ್ಕಳು. ಪಿಟರ್ಸ್ ತನ್ನನ್ನು ಯಾವ ಸಂಕಟ ದಲ್ಲಿಯೂ ನೂಕಲಾರನೆಂದು ಅವಳಿಗೆ ಭರವಸೆಯಿತ್ತು. "ಒಳ್ಳೇದು, ಹಿಂದುಗಡೆ ಅದನ್ನು ನೋಡೋಣವಂತೆ." ಎಂದಳು.

"ನಿನ್ನ ಮನೆಯಲ್ಲಿ ಆದಿನ ಸಂಭವಿಸಿದ ಅದ್ಭುತ ಘಟನೆಗೆ ಕಾರಣ ವೇನು, ಈಗ ಹೇಳು." ಪಿಟರ್ಸ್ ಕೇಳಿದ.

ಗ್ರೇಸ್ ಪೆನಿಸರ್ ಎರಡೂ ಕೈಗಳಲ್ಲಿ ಮುಖವನ್ನು ಮುಚ್ಚಿಕೊಂಡಳು ಯಾವ ಮಾತನ್ನಾಡುವುದೂ ಅವಳಿಗಾಗಲಿಲ್ಲ. ಅದನ್ನು ಕಂಡು ಪಿಟರ್ಸ್ ನುಡಿದ: "ನಾನು ನಿನ್ನನ್ನು ತಿರಸ್ಕರಿಸಲು ಬಂದಿಲ್ಲ ನನ್ನ ಸಾವಿಗಾಗಿ ಅನೇಕರು ಹಂಬಲಿಸುತ್ತಿರುವಂತೆ ತೋರುತ್ತದೆ: ಕಾರಣವೇನೋ ತಿಳಿಯದು. ನಾನು ಸತ್ತರೆ ಸಂತೋಷ ಪಡುವಂಥವರ ಗುಂಪಿಗೆ ನೀನು ಹೇಗೆ ಸೇರಿದೆ?"

"ಇದಕ್ಕೆ ನಾನು ಉತ್ತರ ಕೊಡಲಾರೆ." ಗ್ರೇಸ್ ಹೇಳಿದಳು

"ನಿನ್ನ ಬಂಧುಬಾಂಧವರ ಮಾತನ್ನು ಮೀರಲಾರದೆ ನೀನು ಈ ಕೆಲಸಕ್ಕೆ ಕೈಹಾಕಿದಂತಿದೆ. ನೀನು ಯಾವುದೊ ಒಂದು ಗುಪ್ತಸಮಿತಿಗೆ ಸೇರಿದವಳು. ಬಾಂಬು, ವಿಷ, ಹಗ್ಗ ಮೊದಲಾದವುಗಳ ಸಹಾಯದಿಂದ ಅತ್ಯಾಚಾರಿಗಳಾದ ರಾಜರನ್ನು ನಿರ್ನಾಮ ಮಾಡುವ ವಿಚಾರವನ್ನಿಟ್ಟು ಕೊಂಡ ರಾಜನೈತಿಕ ಸಂಪ್ರದಾಯಗಳಿಗೆ ಸೇರಿದವಳಿರಬೇಕಲ್ಲವೆ ನೀನು? ಸರಿ, ಹಾಗಿದ್ದರೆ ನಿನ್ನಿಂದ ನನ್ನ ಪ್ರಶ್ನೆಗೆ ಖಂಡಿತ ಉತ್ತರ ಸಿಕ್ಕಲಾರದು."

"ತಾವು ನನಗೆ ಅಪಹಾಸ್ಯಮಾಡಬೇಡಿರಿ."

"ಅಪಹಾಸ್ಯವೆಲ್ಲಿದೆ ? ಪ್ರಪಂಚದಲ್ಲಿ ಅನೇಕ ಗುಪ್ತಸಮಿತಿಗಳುಂಟೆಂಬ ಸತ್ಯವನ್ನು ಅಲ್ಲಗಳೆಯಲಿಕ್ಕೆ ಆಗುವುದಿಲ್ಲ. ಆದರೆ ಬರ್ಜಿಲಂಡ್ ರಾಜ್ಯದಲ್ಲಿ ಅಂಥ ಸಮಿತಿಯ ಅಗತ್ಯವೇ ಇಲ್ಲ. ನಮ್ಮ ದೇಶದಲ್ಲಿಯ ಸಾಧಾರಣ ತಂತ್ರ ವಾದಿಗಳು ಪಾರ್ಲಿಮೆಂಟಿನಲ್ಲಿಯೆ ಪ್ರಕಟವಾಗಿ ರಾಜದ್ರೋಹದ ವಿಚಾರ ಮಾಡುವರು ; ಗುಪ್ತಸಮಿತಿ ಬೇಕೇತಕ್ಕೆ ? ಈ ಸಲ ಪಾರ್ಲಿಮೆಂಟ್ ಸೇರಿ ತೆಂದರೆ, ಸಾಧಾರಣತಂತ್ರವಾದಿಗಳು ಮುಂದೊಂದು ವಾರದಲ್ಲಿಯೆ ನಮ್ಮ ಕಕ್ಕನಿಗೆ ಸಿಂಹಾಸನವನ್ನು ತ್ಯಜಿಸುವಂತೆ ಅಪ್ಪಣೆವಿಧಿಸುವರೆಂದು ನನ್ನ ನಂಬುಗೆ."

"ಈ ಅಪ್ಪಣೆಯನ್ನು ಅವರು ಮನ್ನಿಸುವರೆ ?"

"ಹಾಗೇನೂ ಎನಿಸುವುದಿಲ್ಲ. ಮುದುಕನಾಗಿದ್ದರೂ ರಾಜನಿಗೆ ರಾಜ್ಯ ಭೋಗದಲ್ಲಿ ವಿರಕ್ತಿಯುಂಟಾಗಿಲ್ಲ. ವಿಶೇಷವೆಂದರೆ ಆತನ ವಶದಲ್ಲಿ ಬೇಕಾದಷ್ಟು ಸೈನ್ಯವಿದೆ."

"ತಾವು ಈ ರಾಜ್ಯವನ್ನು ತೊರೆದು ಬಿಡಬೇಕೆಂದು ನನ್ನಿಚ್ಛೆ. ರಾಜನೂ ಇಲ್ಲಿಂದ ಹೊರಟುಹೋಗಬೇಕು. ಯೋಗ್ಯ ವ್ಯಕ್ತಿಗಳು ಯಾರಾದರೂ ರಾಜ್ಯ ಆಳಿಕೊಳ್ಳಲಿ."

ಜಾನ್ ಪಿಟರ್ಸ್ ನಕ್ಕು ಉತ್ತರವಿತ್ತ : "ಕಕ್ಕ ಏನು ಮಾಡುತ್ತಾನೋ ಏನು ಮಾಡುವುದಿಲ್ಲವೋ ನಾನು ಹೇಳಲಾರೆ. ನಾನು ಮಾತ್ರ ರಾಜ್ಯವನ್ನು ಬಿಟ್ಟುಹೋಗಲು ಸಿದ್ಧನಿದ್ದೇನೆ. ಆದರೆ ಒಂದೆರಡು ಕರಾರುಗಳಿವೆ."

"ಏನು ?"

"ನೀನೂ ನನ್ನ ಸಂಗಡ ಬರುವೆಯಾ ?"

"ತಾವು ಈ ರಾಜ್ಯವನ್ನು ತ್ಯಾಗಮಾಡಿರಿ ಎಂಬುದೇ ನನ್ನ ಅನುರೋಧ."

"ಇಲ್ಲ ಗ್ರೇಸ್. ನಾನು ತ್ವರಿತವಾಗಿ ಹೋಗುವುದು ಸಾಧ್ಯವಿಲ್ಲ. ನಿನ್ನ ಹೃದಯ ನನಗೆ ತಿಳಿದಿದೆ. ನೀನು ಏನೇ ಮಾಡು, ನನ್ನಲ್ಲಿ ನಿನಗೆ ಸ್ವಲ್ಪವಿಲ್ಲ ಸ್ವಲ್ಪ ಸ್ನೇಹವಿದೆ. ಆದಕ್ಕೇ ನಾನು ಹೇಳುವುದು,– ನೀನು

ಬರ್ಜಿಲಂಡಿನ ಯುವರಾಜನ ಪತ್ನಿಯಾಗಲು ಬಯಸಬೇಡ, ಶ್ರೀಮತಿ ಜಾನ್ ಪಿಟರ್ಸ್ ಆಗು ಎಂದು."

"ನನ್ನನ್ನು ಮದುವೆಯಾಗಬೇಕೆಂದು ತಮ್ಮ ಮನಸೆ ?"

"ಹಾಂ, ನೀನು ನನ್ನನ್ನು ಮದುವೆಮಾಡಿಕೊಂಡರೆ ನಾನು ಚಿರಕಾಲ ಜಾನ್ ಪಿಟರ್ಸ್‌ನಾಗಿಯೆ ಇರುವೆ."

"ಕೊನೆಯ ಸಲ ತಮ್ಮ ಭೆಟ್ಟಿ ಯಾವ ರೀತಿ ಆಗಿತ್ತೆಂಬುದು ನೆನಪಿದೆಯೆ ?"

"ಚೆನ್ನಾಗಿ ನೆನಪಿದೆ. ಅದು ಎಂದೂ ಮರೆಯಲು ಸಾಧ್ಯವಿಲ್ಲ."

"ಮತ್ತೊಂದು ದಿನ ತಾವು ಹಠಾತ್ತಾಗಿ ನಮ್ಮ ಮನೆಗೆ ಬಂದಿರಿ, ಐದೇ ನಿಮಿಷಗಳಲ್ಲಿ ಹೊರಟುಬಿಟ್ಟಿರಿ ; ಅದು ನೆನಪಿದೆಯೆ ?"

"ಅದು ನೆನಪಾಗಲೊಲ್ಲದು. ನನಗೆ ಎರಡು ವಿಭಿನ್ನ ಚರಿತ್ರಗಳಿವೆಯಂತೆ, ನನಗೆ ಎರಡು ವ್ಯಕ್ತಿತ್ವಗಳಿವೆಯಂತೆ,– ಜನರೆನ್ನುತ್ತಾರೆ. ನೀನು ನನ್ನ ಒಂದು ಬದಿಯನ್ನು ನೋಡಿದ್ದೀ ; ಇನ್ನೊಂದು ಬದಿಯನ್ನು ಎಂದೂ ನೋಡಲಾರೆ. ನನ್ನಲ್ಲಿ ನೀನು ನಂಬಿಗೆ ಇಡಬೇಕು."

"ತಮ್ಮ ಸೂಚನೆ ಸಂಪೂರ್ಣ ಅಸಂಭವ. ತಾವು ಮನಸಿನಿಂದ ಮಾತನಾಡುತ್ತೀರೆಂದೂ ನನಗೆನಿಸುವುದಿಲ್ಲ."

"ಗ್ರೇಸ್, ನಿನ್ನ ಸಂಶಯಕ್ಕೆ ಕಾರಣವೇನು ? ನಾನು ಸತ್ಯವನ್ನೇ ಹೇಳಿದೆ. ನೀನು ನಾಳೆಯೆ ಇಜ್ಲಂಡಿಗೆ ಹೊರಟುಹೊಗು ಇನ್ನಿಲ್ಲಿ ಹೊತ್ತು ಗಳೆಯಬೇಡ. ಇಲ್ಲಿಯ ಪರಿಸ್ಥಿತಿ ತೀರ ಹದಗೆಟ್ಟಿದೆ. ಇಲ್ಲಿ ನಿನಗೆ ಸುಖವಾಗಲಿಕ್ಕಿಲ್ಲ, ನನ್ನ ಮಾತು ಕೇಳು, ಹೊರಟುಹೋಗು. ಶೀಘ್ರದಲ್ಲಿಯೆ ನಾನು ನಿನ್ನನ್ನು ಬಂದು ಸೇರುವೆ ನಾನಿಲ್ಲಿಂದ ಒಮ್ಮೆ ಹೊರಬಿದ್ದೆನೆಂದರೆ ಯುವರಾಜರೂಪದಿಂದ ಈ ದೇಶದೊಳಗೆ ತಿರುಗಿ ಎಂದೂ ಕಾಲಿಡುವುದಿಲ್ಲವೆಂದು ಶಪಥಮಾಡಿ ಹೇಳುತ್ತೇನೆ."

"ತಮ್ಮ ಸೂಚನೆಯನ್ನು ನಡೆಸಲಾಗುತ್ತಿದ್ದರೆ ಖಂಡಿತ ನಡೆಸುತ್ತಿದ್ದೆ."

ಪಿಟರ್ಸ್ ನಗೆಗೂಡಿ ಮಾತನಾಡಿದ : "ಓ, ಹೌದು ; ನಾನು ಮರೆತು ಬಿಟ್ಟಿದೆ. ನೀನು ಸಂಚುಗಾರರ ಕೂಟಕ್ಕೆ ಸೇರಿದವಳಲ್ಲವೆ ? ಅವರ ಕೆಲಸಕ್ಕಾಗಿಯೇ ನೀನಿಲ್ಲಿಗೆ ಬಂದಿದ್ದೀಯೆಂಬುದು ಸುಳ್ಳೆ ?"

“ ತಮ್ಮ ಪ್ರಶ್ನೆಗೆ ಉತ್ತರ ಕೊಡುವುದು ಅಸಾಧ್ಯ ”

“ ನೀನು ಉತ್ತರ ಕೊಡಬೇಡ, ನನ್ನ ಉಪದೇಶವನ್ನು ಕೇಳು, ನಿಮ್ಮ ಮನೆಗೆ ಹೊರಟುಹೋಗು. ರಾಜ್ಯದ ಬಗ್ಗೆ ಒಂದು ಗುಪ್ತವಿಷಯ ಹೇಳುತ್ತೇನೆ ನಿನಗೆ. ಇಲ್ಲಿಯ ವಿದ್ರೋಹಿಗಳು ಪ್ರಚಂಡರಾಗಿದ್ದಾರೆ; ನಮ್ಮ ಸೈನ್ಯದ ಸಹಾಯಪಡೆದರೂ ಒಂದೇ ಒಂದು ತಿಂಗಳಲ್ಲಿ ಪ್ರಜೆಗಳು ನಮ್ಮ ಹುಟ್ಟಡಗಿಸಿಬಿಡುತ್ತಾರೆ.”

“ ತಾವೇನು ಮಾಡುವಿರಿ ?”

“ ಈಸುತ್ತ ಈಸುತ್ತ ಲಂಡನಿನ ದಡವನ್ನು ಸೇರುವೆ.”

ಗ್ರೇಸ್ ವಿಷಣ್ಣಳಾಗಿ ನುಡಿದಳು : “ ತಮ್ಮ ಮಾತೇ ತಿಳಿಯಲೊಲ್ಲವು. ತಮ್ಮ ರೂಪ ಎರಡೆಂದು ಹೇಳುತ್ತೀರಿ; ಅದೆಷ್ಟೋ ಮಟ್ಟಿಗೆ ಸತ್ಯವಾಗಿ ತೋರುತ್ತದೆ. ಸೇಂಟ್‌ಮಾರಿಜ್ನಲ್ಲಿ ಮತ್ತಿಲ್ಲಿ ತಮ್ಮೊಂದು ಮೂರ್ತಿಯನ್ನು ನೋಡಿದ್ದೇನೆ ; ಇನ್ನೊಂದು ರೂಪದಿಂದ ಯುರೋಪಿನ ನಾನಾ ರಾಜಧಾನಿಗಳಲ್ಲಿ ದುಷ್ಕರ್ಮಗಳಲ್ಲಿ ನಿರತರಾಗುತ್ತೀರಿ.”

“ ನನ್ನಲ್ಲಿ ಅನೇಕ ದೋಷಗಳಿವೆ. ಆದರೆ ಗ್ರೇಸ್, ನಿನ್ನಲ್ಲಿ ಒಂದು ವಿಷಯ ಒಪ್ಪಿಕೊಳ್ಳುತ್ತೇನೆ– ನೀನು ನನ್ನನ್ನು ನಂಬು– ಜಾನ್ ಪಿಟರ್ಸ್ ನಿನಗೆಂದೂ ವಿಶ್ವಾಸಘಾತ ಮಾಡಲಾರ, ಅವನ ಯಾವ ಕಾರ್ಯದಲ್ಲಿಯೂ ನಿನಗೆ ಕ್ಷುದ್ರತನ ಕಾಣಲಾರದು. ರಾಜಪುತ್ರ ಜಾನ್ ಪಿಟರ್ಸ್ ವ್ಹರ್ಜ ಲಂಡ್ ರಾಜ್ಯದೊಡನೆಯೇ ವಿಲುಪ್ತನಾಗುತ್ತಾನೆ. ಸಾಧಾರಣ ತಂತ್ರದ ಪಕ್ಷಪಾತಿಯಾದ ಜಾನ್ ಪಿಟರ್ಸ್ ನಿನಗೆ ಅಯೋಗ್ಯ ಪತಿಯಾಗಲಾರ.”

“ ತಮಗೆ ಇದಿಷ್ಟೂ ಗೊತ್ತುಂಟೆ ? ತಮ್ಮ ಮಾತಿನಲ್ಲಿ ನಾನೇನೂ ಅವಿಶ್ವಾಸಪಡುವುದಿಲ್ಲ –ತಮ್ಮ ಮುಖ್ಯ ಶತ್ರುವಿಗಾಗಿ ನಾನಿಲ್ಲಿ ಕಾದಿದ್ದೇನೆ.”

“ ಅವರು ಯಾರು ? ನನಗವನ ಗುರುತಿದೆಯೆ ?”

“ ಇದ್ದರೂ ಇದ್ದೀತು. ತನ್ನ ಶತ್ರುವನ್ನು ಯಾರು ಅರಿಯರು ?”

“ ತಿಳಿಯಿತು, ನೀನು ವಿದ್ರೋಹಿಗಳ ದಳಪತಿಗಾಗಿ ಕಾದಿದ್ದೀ. ಇದು ನಿಜವಿದ್ದರೆ, ನಾನೂ ಅವನಿಗಾಗಿ ಇಲ್ಲಿ ಕಾದಿರುವೆ. ಅವನನ್ನು ಹಿಡಿದುಬಿಟ್ಟರೆ ರಾಜದ್ರೋಹದ ನಿವೃತ್ತಿಯಾಗುವುದೆಂದು ಕೇಳಿದ್ದೇನೆ.”

"ತಮ್ಮಿಚ್ಛೆಯಿದ್ದರೆ ಅವನನ್ನು ನಿರೀಕ್ಷಿಸಿಕೊಂಡಿರಬಹುದು. ಆದರೆ ಏನಾದರೂ ಗೊಂದಲವಾಯಿತೆಂದರೆ ಮಾತ್ರ, ನಾನೆಂದಿಗೂ ಇಜ್ಲಂಡ್ ಕಾಣುವುದಿಲ್ಲ."

"ಇಲ್ಲ, ನೀನೇನೂ ಬೆದರಬೇಕಾಗಿಲ್ಲ. ರಾಜದ್ರೋಹ ನಂದಬೇಕೆಂದು ನನ್ನ ಆಂತರಿಕ ಅಭಿಪ್ರಾಯವಲ್ಲ. ಆದರೆ ನನ್ನ ತಲೆಗೆಟ್ಟ ತಕ್ಕ ನನ್ನು ಸುರಕ್ಷಿತವಾಗಿ ಉಳಿಸಲಿಕ್ಕಾದರೆ, ನಾನು ಯಾವುದನ್ನೂ ಗಣನೆಗೆ ತರುತ್ತಿರಲಿಲ್ಲ."

"ಮಹಾಕಷ್ಟ ರಾಜನ ಅದೃಷ್ಟದಲ್ಲಿದೆ, ಅದಕ್ಕೆ ಅವನೇ ಹೊಣೆ. ಅವನಂಥ ದುರಾಚಾರೀ ರಾಜ ಭೂಮಂಡಲದಲ್ಲಿಯೇ ಇನ್ನೊಬ್ಬನಿಲ್ಲ. ಅವನು ಯಾವ ಸ್ವತಂತ್ರ ಜನಾಂಗವನ್ನಾಳುವುದಕ್ಕೂ ಯೋಗ್ಯನಲ್ಲ."

"ನಿನ್ನ ಮಾತಿಗೆ ನಾನು ಅಲ್ಲೆನ್ನುವುದಿಲ್ಲ. ಇರಲಿ. ನನ್ನ ಬಗ್ಗೆ ನಿನ್ನ ಅಭಿಪ್ರಾಯವೇನು ?"

"ಜನರಲ್ಲಿ ತಮ್ಮ ಬಗ್ಗೆ ಹಬ್ಬಿದ ಸಂಗತಿಗಳಲ್ಲಿ ಅರ್ಧಾಂಶವನ್ನೂ ನಾನು ಸತ್ಯವೆಂದು ನಂಬಿಲ್ಲ. ತಮ್ಮ ಮಾತನ್ನು ಕೇಳುತ್ತಿರುವಾಗ, ಮುಂದೆ ತಾವು ಒಳ್ಳೆಯ ಹಾದಿಯಲ್ಲಿ ನಡೆಯುವಿರೆಂದು ತೋರುತ್ತದೆ."

"ನಿನ್ನ ಮಾತನ್ನು ಕೇಳಿ ನಿಶ್ಚಿಂತನಾದೆ." ಜಾನ್ ಪಿಟರ್ಸ್ ಗ್ರೇಸಳನ್ನಪ್ಪಿಕೊಂಡು ಕೇಳಿದ: "ಊರನ್ನು ನೋಡಲಿಕ್ಕೆ ನೀನು ಯಾವಾಗ ಹೊರಡುತ್ತೀ ?"

"ಬಹಿರಂಗವಾಗಿ ನಾನು ಹೊರಬೀಳುವುದು ಯುಕ್ತವಾದೀತೆ ?"

"ಯುಕ್ತವಾಗಲಿ ಅಯುಕ್ತವಾಗಲಿ, ನೀನು ಹೊರಡಲೇ ಬೇಕು. ನಾಳೆ ಹತ್ತುವರೆಗೆ ನಾನು ನಿನಗೆ ಮತ್ತೆ ಭೆಟ್ಟಿಯಾಗುತ್ತೇನೆ. ಹೊರಬಾಗಿಲಲ್ಲಿಯೇ ನಮ್ಮ 'ಬಂಧು' ಎದುರಾದರೆ ಅವನನ್ನು ಅನುಸರಿಸಿ ಇಲ್ಲಿಗೆ ಬರುವೆ." ಎಂದು ಪಿಟರ್ಸ್ ಗ್ರೇಸಳ ಕೋಣೆಯಿಂದ ಹೊರಬಿದ್ದ.

೧೮

ಅಂದೇ ರಾತ್ರಿ ಅರಮನೆಯಲ್ಲಿ ಕುಣಿತದ ಕಾರ್ಯಕ್ರಮವಿತ್ತು. ಅರಸನಿಂದ ಆವ್ಹಾನ ಹೊಂದಿ ಹಲವು ಮಂದಿ ನೆರೆದಿದ್ದರು. ಅವರ ಅಭ್ಯರ್ಥನೆಗಾಗಿ ಸ್ವಯಂ ರಾಜ ನಿಂತಿದ್ದ; ಯುವರಾಜನು ಸಾಮರಿಕ ವೇಷದಲ್ಲಿ ರಾಜನ

ಬಲಗಡೆ-ನಿಂತು ಅವನಿಗೆ ಸಹಾಯ ಮಾಡುತ್ತಿದ್ದ. ಮಧ್ಯರಾತ್ರಿ ಮೀರಿದ ಮೇಲೆ ಜಾನ್ ಪಿಟರ್ಸ್ ತನ್ನ ಕೆಲವು ಜನ ಅನುಚರರೊಡನೆ ಬೇರೆ ಬೇರೆ ಕೋಣೆಗಳಲ್ಲಿ ಅಡ್ಡಾಡತೊಡಗಿದ. ಎಲ್ಲ ಕೋಣೆಗಳಲ್ಲಿಯೂ ಎಷ್ಟೋ ಮನೆತನಸ್ಥ ಪ್ರೌಢರಮಣಿಯರು ತಮ್ಮ ತಮ್ಮ ಹರಯದ ಕನ್ಯೆಯರೊಂದಿಗೆ ಬಂದು ಸೇರಿದ್ದರು. ಯುವರಾಜನು ದುಶ್ಚರಿತ್ರನಲ್ಲವೇ ? ಅವನು ಬರುವುದನ್ನು ಕಂಡು ಬಹುಜನರು ಬೆದರಿ ಹಿಂದೆ ಸರಿಯುತೊಡಗಿದರು. ಯಾವ ಯುವತಿಯ ಕಡೆಗಾದರೂ ಅವನ ದೃಷ್ಟಿ ಬಿದ್ದರೆ ಸಾಕು, ಅವಳ ತಾಯಿ ಅತ್ಯಂತ ಚಿಂತೆಗೊಳಗಾಗುತ್ತಿದ್ದಳು.

" ಆಲ್ಬರ್ಟ್, ನಿನ್ನ ಸೌಭಾಗ್ಯಕ್ಕಾಗಿ ನಾನು ಹೊಟ್ಟೆಕಿಚ್ಚು ಪಡುತ್ತೇನೆ. ನೀನು ಯಾವಳೊಡನೆ ಕುಣಿಯಲು ಇಷ್ಟಪಟ್ಟರೂ ಅವಳ ತಾಯಿ ನಸುನಗುತ್ತ ಸಮ್ಮತಿಸುತ್ತಾಳೆ. ಅದೇ ನಾನು ಯಾರನ್ನಾದರೂ ಅಪೇಕ್ಷಿಸಿದರೆ ಅವಳ ತಲೆಗೆ ಸಿಡಿಲೇ ಬಿದ್ದಂತಾಗುತ್ತದೆ " ಜಾನ್ ಪಿಟರ್ಸ್ ತನ್ನ ಒಬ್ಬ ಸಂಗಡಿಗನಿಗೆಂದ.

ಆಲ್ಬರ್ಟ್ ನಗುಮೊಗದಿಂದ ಉತ್ತರವಿತ್ತ : " ಯುವರಾಜ, ತಮ್ಮ ಮಾತೇನೂ ಸುಳ್ಳಲ್ಲ. ಊರೊಳಗೆ ತಾವು ಈ ರೀತಿ ಹೆಸರುವಾಸಿಯಾಗಿರುವಾಗ ಇದಕ್ಕಿಂತ ಹೆಚ್ಚಿಗೆ ತಾವೇನು ಅಪೇಕ್ಷಿಸುವಿರಿ ? ತಾವು ಹೋಗುತ್ತಿರುವಾಗ ನವಯುವತಿಯರು ತಮ್ಮ ಕಡೆ ಹೇಗೆ ಓರೆಗಣ್ಣಿನಿಂದ ನೋಡುತ್ತಿರುವರೆಂಬುದನ್ನು ಗಮನಿಸಿದ್ದೀರಾ ? "

" ಅವನ್ನು ನೋಡಿ ಫಲವೇನು ? ನಾನು ಯಾವಳಾದರೂ ವಿವಾಹಿತ ಯುವತಿಯನ್ನು ನನ್ನೊಡನೆ ಕುಣಿಯಲು ಕರೆದರೆ ಅವಳ ಗಂಡ ನನಗೆ ಆಜನ್ಮ ಹಗೆಯಾದಾನು ! "

" ಆ ಪೌರುಷವೇನು ಕಡಿಮೆಯದೆ ? ಅದಕ್ಕೇ ತಮ್ಮ ಸತ್ಕೀರ್ತಿ ಅಸಾಧಾರಣ ಎನ್ನುವುದು ! "

" ಅದು ಸರಿ. ಆದರೆ ಈ ಸುಯೋಗದಲ್ಲಿ ಸ್ವಲ್ಪವಾದರೂ ಸ್ವಾರಸ್ಯ ಅನುಭವಿಸಲಿಕ್ಕಾಗದಿದ್ದರೆ ನನ್ನ ಬಾಳೇ ವ್ಯರ್ಥ. ಆ ಕಡೆ ಬ್ಯಾರಣೆಸ್ ಹೋಲ್ಡ್ ಕಾಣುವುದಿಲ್ಲವೆ ? ಅವರ ಮಗಳು ಬಲು ಚೆಲುವೆ. ನೀನಿಲ್ಲಿಯೆ

ನಿಂತಿರು ಸ್ವಲ್ಪ. ನಾನು ಹೋಗಿ ಬ್ಯಾರೆಣೆಸಳೊಡನೆ ಸ್ವಲ್ಪ ನಗೆಯಾಡಿ ಬರುತ್ತೇನೆ."

ಪಿಟರ್ಸ್ ತನ್ನ ಸಂಗಡಿಗನನ್ನು ಬಿಟ್ಟು, ಒಬ್ಬ ಸ್ಥೂಲಕಾಯದ ಪ್ರೌಢೆಯ ಹತ್ತಿರ ಹೋದ. ಯುವರಾಜನು ಬಂದುದನ್ನು ಕಂಡು ಅವಳು ಸಂಭ್ರಮದಿಂದ ಹಸ್ತಾಂದೋಲನಕ್ಕಾಗಿ ಬಲಗೈಯನ್ನು ನೀಡಿದಳು. ಪಿಟರ್ಸ್ ಅವಳಿಗೆಂದ : "ಬ್ಯಾರಣೆಸ್, ತಾವು ಗಾಬರಿಗೊಳ್ಳಬೇಡಿರಿ. ತಾವು ಈ ಉತ್ಸವಕ್ಕೆ ಬಂದುದರಿಂದ ನನಗೆಷ್ಟು ಸಂತೋಷವಾಗಿದೆಯೆಂದು ಹೇಳಲಾರೆ. ತಾವು ತಮ್ಮ ಮಗಳನ್ನು ಕರೆದುಕೊಂಡು ಬಂದದ್ದೂ ಬಲು ಸಂತೋಷ; ಅವಳಂಥ ಸುಂದರಿಯರು ತೀರ ವಿರಳ.''

ಯುವರಾಜನ ಬಾಯಲ್ಲಿ ತನ್ನ ಮಗಳ ಚೆಲುವಿಕೆಯ ಹೊಗಳಿಕೆಯನ್ನು ಕೇಳಿ ಬ್ಯಾರಣೆಸಳ ಎದೆಯೊಳಗೆ ಡವ ಡವ ಎನ್ನಲಾರಂಭಿಸಿತು. ಅವಳ ಮಗಳು ಪಕ್ಕದಲ್ಲಿಯೆ ನಿಂತಿದ್ದಳು. ಅವಳು ನಿಜಕ್ಕೂ ಅತ್ಯಂತ ಸುಂದರಿ. ಅವಳು ಮೊಗವೆತ್ತಿ ಪ್ರಶಂಸಕನೇತ್ರದಿಂದ ಯುವರಾಜನ ಕಡೆ ನೋಡಿದಳು. ಇಬ್ಬರ ನೋಟಗಳೂ ಕೂಡಿದವು. ಕೂಡಲೆ ಯುವತಿ ನೋಟವನ್ನು ತಗ್ಗಿಸಿದಳು. ನಾಚಿಕೆಯಿಂದ ಅವಳ ಮೊಗ ಕೆಂಪಾಯಿತು.

"ಚೆನ್ನೆ, ನಿನ್ನೊಂದಿಗೆ ನಾನು ನೃತ್ಯಾನಂದವನ್ನು ಅನುಭವಿಸಲಾರೆನೆ?'' ಪಿಟರ್ಸ್ ಕೇಳಿದ.

ಯುವರಾಜನು ಅತಿಶಯ ಸುಂದರ; ಅವನ ಕೋರಿಕೆಯನ್ನು ಅಲ್ಲಗಳೆಯುವುದೂ ಅಸಂಭವವಾಗಿತ್ತು ; ಯುವತಿಯ ಇಚ್ಛೆಯೂ ಹಾಗಿರಲಿಲ್ಲ. ಅವನ ಕೋರಿಕೆಯನ್ನು ಈಡೇರಿಸಲು ಅವಳು ಮುಂದಾದಳು. ಅದನ್ನು ಕಂಡು ಅವಳ ತಾಯ ಮುಖ ಭಯದಿಂದ ಒಣಗಿಬಿಟ್ಟಿತು. ತನ್ನ ಅಸಂತೋಷವನ್ನು ಬಹುಪ್ರಯಾಸದಿಂದ ನುಂಗಿಕೊಂಡು ಅವಳೆಂದಳು : "ಯುವರಾಜ, ತಮ್ಮ ಕೋರಿಕೆ ಇವಳಿಗೆ ಒಳ್ಳೇ ಗೌರವದ ವಿಷಯವಾದರೂ ಇವಳ ಮೈಯಲ್ಲಿ ಅಷ್ಟು ಚೆನ್ನಾಗಿಲ್ಲ. ಜಡ್ಡಿನಿಂದ ಮೊನ್ನೆ ಮೊನ್ನೆ ಎದ್ದಿದ್ದಾಳೆ. ಇನ್ನೂ ಯಾರೊಡನೆಯೂ ಕುಣಿದಿಲ್ಲ.''

ಪಿಟರ್ಸ್ ಒಮ್ಮೆಲೆ ಕೆಪ್ಪನಾಗಿಬಿಟ್ಟಿದ್ದ. ಬ್ಯಾರೆನೆಸಳ ಮಾತನ್ನು ಗಮನಿಸದೆ ಅವನು ಯುವತಿಯ ಕೈಹಿಡಿದುಕೊಂಡು ಆ ಕೋಣೆಯಿಂದ

ಹೊರಟುಹೋದ. ಯುವರಾಜನೊಡನೆ ಕುಣಿಯುವೆನೆಂದು ಅವಳ ಮನಸು ಆನಂದದಿಂದ ಅರಳಿತ್ತು. ನೃತ್ಯದಲ್ಲಿಯೂ ಅವಳಿಗೆ ಬಹಳ ಸೊಗಸೆನಿಸಿತು. ನರ್ತನ ಮುಗಿದ ಬಳಿಕ ಪಿಟರ್ಸ್ ಅವಳೊಂದಿಗೆ ಬೇರೊಂದು ಕೋಣೆಗೆ ಹೊರಟಿದ್ದ. ದೂರದಿಂದ ನೋಡುತ್ತಿದ್ದ ಬ್ಯಾರಣೆಸ್ ಮಗಳಿಗೆ ತಿರುಗಿ ಬಾ ಎಂದು ಸನ್ನೆ ಮಾಡುತ್ತಿದ್ದಳು. ಆಗ ಯುವತಿ ಕುಂಠಿತಳಾಗಿ ಪಿಟರ್ಸ್‌ನಿಗೆಂದಳು : "ಅವ್ವ ನನ್ನನ್ನು ಕರೆಯುತ್ತಿರುವಂತೆ ಕಾಣುತ್ತದೆ."

"ಕರೆಯಲಿ, ಸ್ವಲ್ಪ ತಡೆದು ಹೋಗು. ನಾನು ನಿನ್ನನ್ನು ನುಂಗಿಬಿಡುತ್ತೇನೆಂದು ತಿಳಿದಿದ್ದಾಳೇನು, ನಿಮ್ಮವ್ವ? ಇನ್ನು ಮೂರು ನಾಲ್ಕು ನಿಮಿಷ ನನ್ನೊಂದಿಗಿರು. ಅಷ್ಟೆ." ಎಂದ ಪಿಟರ್ಸ್.

ಆ ಕೋಣೆಯಲ್ಲಿ ಬಹಳ ಜನರಿರಲಿಲ್ಲ. ಯುವರಾಜ ಬಂದನೆಂದು ಇದ್ದವರೂ ಎದ್ದು ಹೋದರು. ಯುವತಿಯ ಎದೆ ದ್ರುತವಾಗಿ ಹಾರತೊಡಗಿತು. ತಾನು ಯಾವನ ಕೈಯಲ್ಲಿ ಸಿಕ್ಕುಬಿದ್ದಿರುವೆನೋ ಅವನು ಅನುಪಮ ಸುಂದರನೇನೋ ನಿಜ; ಆದರೆ ಅತ್ಯಂತ ದುಶ್ಚರಿತ್ರ. ಈ ವಿಷಯ ಆ ಯುವತಿಯ ಮನಸಿನಲ್ಲಿ ಕಟಿಯತೊಡಗಿತು. ಯುವತಿ ಆನಂದದಿಂದರ್ಧ, ಭಯದಿಂದರ್ಧ ಪಿಟರ್ಸ್‌ನ ಕಡೆ ನೋಡಿದಳು.

"ನೀನು ಕುಣಿದದ್ದು ಇಂದೇ ಮೊದಲೊ? ಎಂದೂ ಕುಣಿದಿಲ್ಲವೆ?" ಎಂದು ಕೇಳಿದ ಪಿಟರ್ಸ್.

"ಇದು ಎರಡನೆಯ ಸಲ. ಆದರೆ ಅಂದಿಗಿಂತ ಇಂದು ಹೆಚ್ಚು ಸೊಗಸಿತ್ತು." ಗ್ರೇಸ್ ಲಜ್ಜಾಜಡಿತ ಸ್ವರದಲ್ಲಿ ಉತ್ತರವಿತ್ತಳು.

"ಮುಂದೆ ಇದಕ್ಕೂ ಹೆಚ್ಚು ಸೊಗಸಾಗುವುದು." ಪಿಟರ್ಸ್ ನಕ್ಕು ನುಡಿದ.

"ಮುಂದೆ ಮತ್ತೆ ಯುವರಾಜರೊಡನೆ ಕುಣಿಯುವ ಸಂಯೋಗ ಲಭಿಸುವುದೆ?"

ಯುವರಾಜನು ಒಮ್ಮೆಲೆ ಗಂಭೀರನಾದ. "ಈ ಮಾತಿಗೆ ನಿಶ್ಚಿತವಾದ ಉತ್ತರ ಕೊಡಲಾರೆ. ನಿನಗೆ ಪತಿಯಾಗಲು ತಕ್ಕವನಾದ ಯುವಕನೊಡನೆ ಕುಣಿಯುವ ಯೋಗ ಬೇಗನೆ ಬರುವುದೆಂದು ನನ್ನಾಸೆ. ಕೆಲವು ತಿಂಗಳಲ್ಲಿಯೇ ಈ ದೇಶದ ಇತಿಹಾಸದಲ್ಲಿ ನವಯುಗದ ಆರಂಭವಾಗುವುದು;

ಆ ಯುಗದಲ್ಲಿ ನಮ್ಮ ದೇಶದ ಯುವಕಯುವತಿಯರ ಕರ್ತವ್ಯಪರತೆಯನ್ನೇ ದೇಶದ ಆಸೆಭರವಸೆಗಳು ಅವಲಂಬಿಸಿವೆ. ನಿಮ್ಮಂಥ ಸುಶೀಲಬಾಲಿಕೆಯರಲ್ಲಿ ನನಗೆ ಹೆಚ್ಚು ಭರವಸೆಯಿದೆ ರಾಷ್ಟ್ರೀಯ ಜೀವನದ ಉನ್ನತಿಅವನತಿಗಳು ದೇಶದ ಜನರ ಕೈಯಲ್ಲಿಯೇ ಇವೆಯೆಂಬುದನ್ನು ಮರೆಯಬೇಡ. ನಿನ್ನ ಕೈಲಾದುದನ್ನು ನೀನು ಮಾಡುವೆಯಷ್ಟೆ ?"

"ನಾನು ಸಂಪೂರ್ಣವಾಗಿ ಪ್ರಯತ್ನಿಸುವೆ."

"ಸಂತೋಷ. ನಿಮ್ಮೆದುರು ವಿಶಾಲವಾದ ಕಾರ್ಯಕ್ಷೇತ್ರವಿದೆ. ದೇಶವು ನಿಮ್ಮ ನೆರವನ್ನು ಹಾರಯಿಸಿಕೊಂಡಿದೆ ಎಂಬುದು ಸದಾ ಜ್ಞಾಪಕದಲ್ಲಿರಲಿ. ಸ್ವದೇಶವನ್ನೆಂದೂ ಮರೆಯಬೇಡಿರಿ. ಅಕಾ, ನಿಮ್ಮಮ್ಮ ಬಂದಳು, -ಸ್ವಲ್ಪ ವಿಷಣ್ಣಳಾದಂತೆ ಕಾಣುತ್ತದೆ."

ಬ್ಯಾರಣೆಸ್ ಶಿಷ್ಟಾಚಾರವನ್ನು ಮರೆತೇ ಒಳಗೆ ಬಂದು ಅವರೆದುರಿನಲ್ಲಿ ನಿಂತಳು. ಹರಯದ ಮಗಳನ್ನು ಆ ನರರಾಕ್ಷಸನ ಹತ್ತಿರ ಬಿಡಲು ಅವಳಿಗೆ ಧೈರ್ಯವಿರಲಿಲ್ಲ.

"ಇಗಾ, ನಿಮ್ಮ ಮಗಳನ್ನು ನೀವು ಕರೆದುಕೊಂಡು ಹೋಗಿರಿ. ಈಕೆಯೊಡನೆ ಆಡಿ ಮಾತನಾಡಿ ಒಳ್ಳೆ ತೃಪ್ತನಾದೆ. ಕುಮಾರಿ, ಅದಕ್ಕಾಗಿ ನಿನಗೆ ಧನ್ಯವಾದ." ಎಂದು ಪಿಟರ್ಸ್ ಬ್ಯಾರಣೆಸ್ಗೆ ಅಭಿವಂದಿಸಿ ಹೊರಹೊರಟ.

"ಯುವರಾಜರು ನಿನ್ನೊಡನೆ ಪ್ರೇಮದ ಪ್ರಸ್ತಾಪವನ್ನೆತ್ತಿದರೆ, ಸೋಫಿ ?" ಉದ್ವೇಗಪೂರ್ಣ ದೃಷ್ಟಿಯಿಂದ ಮಗಳ ಮೊಗವನ್ನು ನೋಡುತ್ತ ಬ್ಯಾರಣೆಸ್ ಕೇಳಿದಳು.

"ಇಲ್ಲಮ್ಮಾ, ಅವನು ಆಡಿದುದೆಲ್ಲ ಪ್ರೇಮದ ಮಾತುಗಳೆಂದು ತಿಳಿಯುವ ಕಾರಣವಿಲ್ಲ" ಎಂದಳು ಮಗಳು.

"ಮುದ್ದಿಸಿದರೆ ?" ಮತ್ತೆ ಕೇಳಿದಳು ತಾಯಿ.

"ಇಲ್ಲಮ್ಮಾ, ಮುದ್ದಿಸಿದ್ದರೆ ಇನ್ನೂ ಎಷ್ಟು ಆನಂದವಾಗುತ್ತಿತ್ತು !" ಎಂದಳು ಮಗಳು.

ಇಂಥ ಮಾತನಾಡಲೂ ದಿಟ್ಟತನ ಬಂತೇ ನಿನಗೆ? ಈ ಮನುಷ್ಯ ಎಂಥ ದುಶ್ಚರಿತ್ರನೆಂಬುದನ್ನು ತಿಳಿಯದೆ ಮಾತನಾಡುತ್ತೀ." ಎಂದು ಗರ್ಜಿಸಿದಳು ತಾಯಿ.

" ಅವ್ವಾ, ಜನರು ಇವರಿಗೆ ಏಕೆ ಕೆಟ್ಟವರೆನ್ನುವರೋ ತಿಳಿಯದು. ಜನರು ಯಾವುದೂ ಗೊತ್ತಿಲ್ಲದೆ ಆಡಿಕೊಳ್ಳುತ್ತಾರೆಂದು ಕಾಣುತ್ತದೆ."

* * * *

ಪಿಟರ್ಸ್ ಜನರ ಗುಂಪಿನಲ್ಲಿ ನುಗ್ಗಿಕೊಂಡು ಬರ್ನಾರ್ಡರ ಹತ್ತಿರ ಹೋಗಿ, " ಬರ್ನಾರ್ಡ್, ನಡೆಯಿರಿ, ಇಬ್ಬರೂ ಕೂಡಿ ಕೊಂಚ ಪಾನ ಮಾಡುವಾ" ಎಂದ.

" ಯುವರಾಜರ ಅನುಗ್ರಹಕ್ಕಾಗಿ ನಾನು ಕೃತಜ್ಞನಾಗಿದ್ದೇನೆ." ಎಂದು ಬರ್ನಾರ್ಡ್ ಪಿಟರ್ಸ್‌ನೊಡನೆ ಒಂದು ಕೋಣೆಗೆ ಹೋದ.

ಇಬ್ಬರೂ ಮಾತನಾಡುತ್ತ ಬ್ರಾಂಡಿಬಾಟ್ಲಿಯನ್ನು ತೆರವುಮಾಡ ತೊಡಗಿದರು. " ವಿದ್ರೋಹೀ ದಳಪತಿಯ ಶೋಧವಾಯಿತೇ ?" ಪಿಟರ್ಸ್ ಕೇಳಿದ.

" ಇಲ್ಲ ಯುವರಾಜ, ಅವನು ಬಲುಧೂರ್ತ. ಆವರ ಗುಪ್ತಚಾರರು ಯಾವಾಗಲೂ ಎಲ್ಲೆಲ್ಲಿಯೂ ಅಲೆಯುತ್ತಿರುವರೇನೋ. ಕದ್ದುಮುಚ್ಚಿ ಬರುವ ಬಂದೂಕುಗಳ ಶೋಧನೆಗಾಗಿ ಇಂದು ಬೆಳಗಿನ ಹತ್ತು ಹನ್ನೆರಡು ನೌಕೆಗಳಲ್ಲಿ ಹುಡುಕಲಾಯಿತು; ಒಂದೂ ಸಿಕ್ಕಲಿಲ್ಲ ಬಹುಶಃ ನಮ್ಮ ಚಟು ವಟಿಕೆಯ ಸುಳಿವು ಹಿಡಿದು ಮೊದಲೇ ಅಡಗಿಸಿರಬೇಕು."

" ಈಗ ನೀವು ಬಲು ತೊಳಲಾಟದಲ್ಲಿ ದಿನಗಳೆಯುತ್ತಿದ್ದೀರಿ. ನೀವೀಗ ಹುಡುಕಿ ಹಿಡಿಯಲು ಕಷ್ಟಬಡುತ್ತಿರುವ ರೈಫಲುಗಳೇ–ನನಗೆ ಭಯವಿದೆ–ಮುಂದೆ ಒಂದು ದಿನ ನಮ್ಮ ಅರಮನೆಯ ಬಾಗಿಲು ಕಿಡಿಕಿಗಳನ್ನು ಒಡೆಯ ಬಹುದು. ಕೆಟ್ಟಕಾಲ ನಿಮಗೊಬ್ಬರಿಗೇ ಇಲ್ಲ, ನಮಗೂ ಇದೆ."

" ಇಲ್ಲ, ಯುವರಾಜ, ಅಂತಹ ಕೆಟ್ಟದಿನ ಬರಲಾರದೆಂದು ನನ್ನ ನಂಬಿಗೆ."

ಅದಕ್ಕೆ ಪಿಟರ್ಸ್ ನಕ್ಕು ನುಡಿದ: " ಇದು ನಿಮ್ಮ ಒಳಗಿನ ನಂಬಿಗೆಯ ಮಾತಲ್ಲ. ವಿಪತ್ತು ನಮ್ಮಿಂದ ದೂರದಲ್ಲಿಲ್ಲ ಎಂದು ನಿಮ್ಮ ಮನಸು ಚೆನ್ನಾ ಗಿಯೆ ಬಲ್ಲದು ಅದು ನನಗೂ ಗೊತ್ತಿದೆ."

" ಶೀಘ್ರವೇ ಸಂಕಟವೊದಗುವುದೆಂದು ಒಂದು ಕ್ಷಣವೂ ನನಗೆ ತೋರಿಲ್ಲ. ವಿಶೇಷವಾಗಿ ನಾವು ಒಂದು ವಿಷಯವನ್ನು ಯೋಚಿಸಿಯೇ ಇಲ್ಲ."

"ಸೈನ್ಯದ ವಿಷಯ ನೀವು ಹೇಳುತ್ತಿರುವಿರೇನು ?"

"ಅಲ್ಲ" ಎಂದು ನುಡಿದು ಬರ್ನಾರ್ಡ್ ಒಂದು ಕಡೆ ಬೆರಳು ತೋರಿಸಿದ. ಪಿಟರ್ಸ್ ಆ ಕಡೆ ನೋಡಿದ. ಇನ್ನೊಂದು ಕೋಣೆಯೊಳಗೆ ದೊರೆ ಜರ್ಮನ್ ರಾಜದೂತನೊಡನೆ ಮಾತನಾಡುತ್ತ ಕುಳಿತಿದ್ದ.

"ಜರ್ಮನಿಯ ನಿರ್ದೇಶದಂತೆ ನಡೆಯುವುದಕ್ಕಿಂತ ಸಾಧಾರಣ ತಂತ್ರ ಸಾವಿರ ಪಾಲಿಗೆ ಬೇಕು" ಎಂದು ಪಿಟರ್ಸ್ ಅಲ್ಲಿಂದೆದ್ದ.

೧೯

ಜರ್ಮನಿಯ ರಾಜದೂತ ಪ್ರಿನ್ಸ್ ಸುಯೆಸ್ ರಾಜನೊಡನೆ ಒಳ್ಳೇ ಮನಸುಗೊಟ್ಟು ಆಲೋಚನೆ ಮಾಡುತ್ತಿದ್ದ. ಜಾನ್ ಪಿಟರ್ಸ್‌ನ ಆವಿರ್ಭಾವದಿಂದ ಮಾತು ಹರಿಗಡಿಯಿತು ರಾಜನು ಪಿಟರ್ಸ್‌ನಿಗೆಂದ: "ಜಾನ್, ಪ್ರಿನ್ಸ್‌ರೊಡನೆ ನಡೆದ ಮಾತುಕತೆ ಒಳ್ಳೇ ಚಿತ್ತಾಕರ್ಷಕವಾಗಿದೆ. ನೀನೂ ಕೇಳಬಹುದು."

ಪ್ರಿನ್ಸ್ ಸುಯೇಸನ ಬಗ್ಗೆ ಪಿಟರ್ಸ್‌ನಿಗೆ ಅಷ್ಟು ಸದ್ಭಾವನೆಯಿರಲಿಲ್ಲ. ಆವನ ಮಾತನ್ನು ಕೇಳಲು ಅಷ್ಟೊಂದು ಆಗ್ರಹವೂ ಇರಲಿಲ್ಲ. ಶಿಷ್ಟಾಚಾರವೆಂದು ಪಿಟರ್ಸ್ ಒಂದು ಕುರ್ಚಿಯಲ್ಲಿ ಕುಳಿತುಕೊಂಡ. ಜರ್ಮನ್ ರಾಯಭಾರಿ ಮಾತನಾಡತೊಡಗಿದ: "ಇತ್ತೀಚೆಗೆ ಎಲ್ಲ ರಾಷ್ಟ್ರಗಳಲ್ಲಿಯೂ ಪ್ರಜಾತಂತ್ರದ ಕಡೆಗೆ ಜನರೊಲವು ಕಂಡುಬರುತ್ತಿದೆ. ರಾಜತಂತ್ರಕ್ಕೆ ಇದೊಂದು ಮಹಾದುರ್ಲಕ್ಷಣ. ಈಗಿನ ಪಾರ್ಲಿಮೆಂಟಿನ ಆಯಿಕೆಯ ಪರಿಣಾಮವನ್ನು ಕಂಡು ನಿಮ್ಮ ರಾಜರು ಕೊಂಚ ಉತ್ಕಂಠಿತರಾಗಿದ್ದಾರೆ. ನಿಜಕ್ಕೂ ಇದು ಚಿಂತಿಸತಕ್ಕಂಥ ಮಾತೇ. ಪ್ರಜಾತಂತ್ರವನ್ನು ಬಲಿಯಗೊಡವುದು ನನಗಿಷ್ಟವಿಲ್ಲ. ನಮಗೂ ಒಮ್ಮೆ ಇಂಥ ಗಂಡಾಂತರ ಬಂದಿತ್ತೆಂಬುದನ್ನೇ ನಾನು ರಾಜರಿಗೆ ಹೇಳುತ್ತಿದ್ದೆ. ಪಾರ್ಲಿಮೆಂಟ್ ಸಭೆಯಲ್ಲಿ ಸೋಶಾಲಿಸ್ಟರ ಸಂಖ್ಯೆ ಪ್ರಬಲವಾಗಿತ್ತು; ಅವರನ್ನು ಅಂಕೆಗೆ ತರುವುದು ಕಠಿನವಾಗಿತ್ತು. ಚಳವಳಿ ಮಾಡಿಯೂ ಏನೂ ಫಲವಿಲ್ಲವೆಂಬುದನ್ನರಿತು ಮುಂಗಾಣದೆ ಕುಳಿತಿದ್ದೆವು. ಆ ವ್ಯವಸ್ಥೆಯಲ್ಲಿ ರಾಜ್ಯಕ್ಕೆ ಅಹಿತವಾಗುವುದೆಂದು ಸಮ್ರಾಟರಿಗೆ ತೋರಿತು. ಆ ವ್ಯವಸ್ಥೆಯನ್ನು ಬುಡಮೇಲು ಮಾಡಿದರು. ದೊಡ್ಡ ಗಲಭೆಯೆದ್ದಿತ್ತು.

ಪಾರ್ಲಿಮೆಂಟನ್ನು ವಿಸರ್ಜಿಸಲಾಯಿತು. ಕೊನೆಗೆ ಹೊಸ ಆಯಿಕೆಯಲ್ಲಿ ಎಲ್ಲ ಗಲಭೆಯೂ ಶಾಂತವಾಯಿತು. ಇದೇ ಸಮಯವೆಂದು ನಾವೂ ಸೋಶಾಲಿಷ್ಟರನ್ನು ಹಣಿದೆವು ಈಗ ನಮ್ಮ ದೇಶದಲ್ಲಿ ಅವರು ತಲೆಯೆತ್ತುವಂತೆಯೆ ಇಲ್ಲ."

ಪಿಟರ್ಸ್ ಹೇಳಿದ: "ತಮ್ಮ ದೇಶದಲ್ಲಿ ಸಾಧ್ಯವಾದದ್ದು ಎಲ್ಲ ಕಡೆಯೂ ಆದೀತೆಂದು ಭಾವಿಸಬೇಡಿರಿ. ತಮ್ಮ ಸಮ್ರಾಟ್ ಸೇನಾಬಲದಿಂದ ಸಮರ್ಥರಾಗಿದ್ದಾರೆ. ಕೈಯಲ್ಲಿ ಸೈನ್ಯವಿರುವವರೆಗೂ ಅವರು ಜನಸಾಮಾನ್ಯರನ್ನಾಗಲಿ ಸಂಪ್ರದಾಯವಿಶೇಷವನ್ನಾಗಲಿ ಏಕೆ ಗಣನೆಗೆ ತಂದಾರು ? "

ಮುದುಕ ರಾಜನೆಂದ: "ಜರ್ಮನಿಯಲ್ಲಾದ ಹಾಗೆಯೇ ನಮ್ಮಲ್ಲಿ ಅದೇಕೆ ಆಗುವುದಿಲ್ಲ ? ನಮಗೂ ದಂಡಿದೆ. ಸೈನಿಕರು ವಿಶ್ವಾಸಿಕರಾದ ಪ್ರಭುಭಕ್ತರು. ಸಂದೇಹವೇ ಇಲ್ಲ. ಸೇನಾಪತಿ ಗೋಬಿನರ್ ಎದೆಯ ಮೇಲೆ ಕೈಯಿಟ್ಟು ಹೇಳಿದ್ದಾರೆ–ನಾವು ನಮ್ಮ ಸೈನ್ಯವನ್ನು ಸಂಪೂರ್ಣವಾಗಿ ನಂಬಬಹುದು."

"ಗ್ರೋಬಿನರ್ ತಮಗೆ ಸಮಾಧಾನದ ಮಾತನ್ನೇ ಹೇಳಿದ್ದಾರೆ. ಅಲ್ಲದೆ ನಮ್ಮ ದಂಡಾದರೂ ಎಷ್ಟು ? ತೀರ ಹೆಚ್ಚೆಂದರೆ ಹತ್ತು ಸಾವಿರತಾನೆ ? ಐವತ್ತು ಸಾವಿರ ವಿದ್ರೋಹಿಗಳು ಒಟ್ಟಾಗಿ ದಾಳಿಯಿಟ್ಟರೆ ಸೈನ್ಯ ತಡೆಯಬಲ್ಲದೆ? ನಮ್ಮದಂಡಾಳುಗಳು ಸಾಹಸಿಗಳು. ಯುದ್ಧಕುಶಲರು ಎಂದೊಪ್ಪಿಕೊಂಡರೂ– ಒಬ್ಬನು ಇಪ್ಪತ್ತು ಇಪ್ಪತ್ತೈದು ಜನರ ರುಂಡಗಳನ್ನು ಚೆಂಡಾಡಬಹುದೆಂದರೂ-ನಮ್ಮ ನಗರವು ಸ್ವದೇಶೀಯರ ನೆತ್ತರಿನಿಂದ ಕೆಸರಾಗುವುದು ಯೋಗ್ಯವೇ ಎಂಬುದೆ ಯೋಚಿಸತಕ್ಕವಿಷಯ. ನಮ್ಮ ದಂಡು ಜರ್ಮನಿಯ ದಂಡಿನೊಡನೆ ತುಲನೆಗೇ ತಕ್ಕುದಾಗಿಲ್ಲ. ಅವರ ಸಂಖ್ಯೆಯೆಷ್ಟು, ಅವರ ಯುದ್ಧಸಾಮಗ್ರಿಸಂಪತ್ತೆಷ್ಟು ! ಆ ಶಕ್ತಿಶಾಲೀ ಸೈನ್ಯವನ್ನು ಸೋಲಿಸುವ ಕಲ್ಪನೆ ಯಾವ ಸ್ವದೇಶದ್ರೋಹಿಗೂ ಬರಲಾರದು ನಮ್ಮ ದೇಶದಲ್ಲಿ ಪ್ರಜೆಗಳು ಕೆರಳಿ ನಿಂತರೆ ಖಡ್ಗದಿಂದ ನಿಯಂತ್ರಿಸುವುದು ಅಷ್ಟು ಸಹಜವಲ್ಲ" ಎಂದ ಪಿಟರ್ಸ್.

ಜರ್ಮನ್ ರಾಯಭಾರಿ ಹೇಳಿದ: "ಮಹಾಶಯರೆ, ಪ್ರಜಾಶಕ್ತಿ ದುರ್ದಮ್ಯವೆಂದು ತಾವು ಹೆದರಿದಂತೆನಿಸುತ್ತದೆ. ತಮ್ಮ ಪ್ರಜೆಗಳು ತುಂಬಾ

ಬಲವನ್ನು ಸಂಪಾದಿಸಿಕೊಂಡಿರಬಹುದು; ತಮ್ಮ ದಂಡು ಚಿಕ್ಕದು; ಅವನ್ನವರು ತುಚ್ಛೀಕರಿಸಿರಲೂ ಬಹುದು. ಆದರೆ ನಾವು ತಮ್ಮ ನೆರೆಯವರು; ವಿದ್ರೋಹಿಗಳಿಂದ ತಾವು ಸಂಕಟಕ್ಕೊಳಗಾದರೆ ನಾವೇತಕ್ಕಿರುವುದು ? ಕಣ್ಣಿಂದ ನೋಡಿ ಮೋಜುಪಡುವುದಕ್ಕೇ? ಪ್ರಸಂಗ ಬಂದರೆ ಅರ್ಧ ಗಂಟೆಯೊಳಗೇ ಅರ್ಧಲಕ್ಷಸೈನ್ಯವನ್ನು ತಮ್ಮ ದೇಶದಲ್ಲಿ ತಂದು ನಿಲ್ಲಿಸುವೆವು."

ರಾಜನು ಉತ್ಸಾಹಿತನಾಗಿ ಕೇಳಿದ: "ಈ ಮಾತು ನಿಜವೆ? ವಿಪತ್ತು ಬಂದಾಗ ಸರಿದು ನಿಲ್ಲುವುದಿಲ್ಲವಲ್ಲವೆ ? "

ಕಕ್ಕನ ಭಾವವನ್ನು ಕಂಡು ಪಿಟರ್ಸ್‌ನಿಗೆ ತಡೆಯಲಾರದ ನಗೆ ಬಂದಿತು.

ಜರ್ಮನ್ ರಾಯಭಾರಿ ಹೇಳಿದ: "ನನ್ನ ಮಾತನ್ನು ನಂಬದಿರಲು ಕಾರಣವೇನು? ನಮ್ಮ ಸಮ್ರಾಟ್ ಸಾಧಾರಣತಂತ್ರದ ವಿರೋಧಿಗಳು. ತಮ್ಮ ಹಿತ್ತಲ ಬಾಗಿಲಲ್ಲಿ ಸಾಧಾರಣತಂತ್ರದ ಪ್ರತಿಷ್ಠೆಯಾಗುವುದನ್ನು ಅವರೆಂದಿಗೂ ಸೈರಿಸರು. ತಮಗೆ ಅಗತ್ಯವಿದ್ದಾಗ ಅವರು ಸೈನ್ಯವನ್ನು ಕಳಿಸುವರು; ಆ ಬಗ್ಗೆ ಚಿಂತೆಯೇ ಬೇಡ."

ಜಾನ್ ಪಿಟರ್ಸ್ ಎದ್ದು ನೀಟಾಗಿ ಕುಳಿತು ಮಾನಾಡಿದ: "ನಮ್ಮ ರಾಜ್ಯದಲ್ಲಿ ಜರ್ಮನಿಯ ದಂಡು ಒಳಹೊಕ್ಕದಿನವೇ ನಮ್ಮ ಕಕ್ಕ ಎಲ್ಲ ಹೊಣೆಗಾರಿಕೆಯಿಂದ ಮುಕ್ತರಾಗಿ ನಿಶ್ಚಿಂತರಾಗುವರು; ರಾಜ್ಯದ ವಿಚಾರವನ್ನೇ ಮಾಡಬೇಕಾಗುವುದುದಿಲ್ಲ. ಜರ್ಮನಿ ಆ ಚಿಂತೆಯನ್ನೆಲ್ಲ ವಹಿಸಿಕೊಳ್ಳುವುದು. ಬಿಟ್ಟಿ ದಂಡಿನ ನೆರವಿನಿಂದ ಜಯಪಡೆಯಬೇಕೆಂದು ಬಯಸುವ ಹತಭಾಗ್ಯ ದೇಶದಜನಕ್ಕೆ ಮಂಗಳವುಂಟೆ ? "

ಯುವರಾಜನ ಮಾತು ಜರ್ಮನ್ ರಾಯಭಾರಿಗೆ ರುಚಿಸಲಿಲ್ಲ. ಅಸಹನೆಯಿಂದ ಅವನೆಂದ: "ಯುವರಾಜ, ಅನ್ಯಾಯವಾಗಿ ಮಾತಾಡುತ್ತಿರುವಿರಿ. ತಾವು ತೊಂದರೆಯಲ್ಲಿದ್ದೀರೆಂದು ನಾವು ನೆರವಿಗೆ ಬಂದರೆ ನಮ್ಮ ಸೈನ್ಯ ಬಿಟ್ಟಿ ಸೈನ್ಯವೆಂದು ಹೆಸರಿಡುವುದು ಉಚಿತವಲ್ಲ. ಜರ್ಮನ್ ಸಮ್ರಾಟ್ ತಮ್ಮ ಹಿತಚಿಂತಕರಾದ ಮಿತ್ರರು. ಅದೆಲ್ಲ ಇರಲಿ. ತಮ್ಮ ಕೊನೆಯ ಮಾತೇನೆಂಬುದನ್ನು ನನಗೆ ಹೇಳಿರಿ. ಇಂಥ ಕಿರುಕುಳ ವಿಷಯದಲ್ಲಿ ಹಾಳುಮಾಡುವುದಕ್ಕೆ

ನನಗೆ ಸಮಯವಿಲ್ಲ. ನಮ್ಮ ನೆರವಿಲ್ಲದೆ ತಮಗೆ ಸಾಗುವಂತಿದ್ದರೆ ತೀರಿಯೆ ಹೋಯಿತು; ಸಂತೋಷ. ನನಗಿನ್ನು ಅಪ್ಪಣೆ ಕೊಡಿರಿ."

ಎಂದು ಕೋಪದಿಂದ ನುಡಿದು ಜರ್ಮನ್ ರಾಯಭಾರಿ ಹೊರಟು ಹೋದ. ದೊರೆಗೆ ಮಗನ ಮೇಲೆ ಸಿಟ್ಟು ಬಂದಿತು. ಗಂಭೀರಭಾವದಿಂದ ಮಗನ ಮುಖವನ್ನು ನೋಡುತ್ತ "ನಿನ್ನಂಥ ಬುದ್ಧಿಗೇಡಿಯನ್ನೆಂದೂ ನೋಡಲಿಲ್ಲ. ನಮಗೆ ವಿಪತ್ಕಾಲದಲ್ಲಿ ಸಹಾಯಮಾಡುವ ಮನಸಿನಿಂದ ಬಂದವನನ್ನು ಅಸಂತೋಷಗೊಳಿಸಿ ಕಳಿಸಿಬಿಟ್ಟೆಯಲ್ಲ!" ಎಂದ.

ಜಾನ್ ಪಿಟರ್ಸ್ ಎದ್ದು ನಿಂತು "ಕಕ್ಕ, ಎಲ್ಲ ನಿಟ್ಟಿನಿಂದಲೂ ವಿಚಾರ ಮಾಡಿರಿ. ಜರ್ಮನಿಯ ಧಾರಾಳತನದಲ್ಲಿ ತಮಗೆ ಮಿತಿಮೀರಿದ ವಿಶ್ವಾಸ. ಆದರೆ ನಾನು ಕೇಳುತ್ತೇನೆ— ಜರ್ಮನಿ ನಿಃಸ್ವಾರ್ಥಬುದ್ಧಿಯಿಂದ ಯಾರಿಗಾದರೂ ಎಂದಾದರೂ ನೆರವಾಗಿದೆಯೆ ? ನಮ್ಮ ಪ್ರಜೆಗಳು ನಮ್ಮನ್ನು ಗದ್ದುಗೆಯಿಂದ ತಳ್ಳಿ ಆಡಳಿತವನ್ನು ತಮ್ಮ ಕೈಗೆ ತೆಗೆದುಕೊಳ್ಳಲು ಹೋರಾಡುತ್ತಿರುವರು. ಈ ಸಂಧಿಯಲ್ಲಿ ಅವರನ್ನು ವಂಚಿಸಿ ರಾಜ್ಯವನ್ನು ತಾನು ನುಂಗಬೇಕೆಂಬುದು ಜರ್ಮನಿಯ ಅಭಿಪ್ರಾಯ. ಇಂಥ ಸಣ್ಣ ಮಾತೂ ಗೊತ್ತಾಗದೆ ತಾವು ನನ್ನ ಮೇಲೆ ತಪ್ಪು ಹೊರಿಸುತ್ತಿರುವಿರಿ. ಇರಲಿ, ರಾತ್ರಿ ಬಹಳವಾಗಿದೆ ; ತಮ್ಮ ನೈಯಲ್ಲಿ ನೆಟ್ಟಗಿಲ್ಲ ; ಇನ್ನು ವಿರಮಿಸಿರಿ. ನಾನು ಸ್ವಲ್ಪ ಬರ್ನಾರ್ಡ್‌ರನ್ನು ಕಾಣಬೇಕಾಗಿದೆ." ಎಂದು ರಾಜನ ಕೋಣೆಯಿಂದ ಹೊರಟು ಬರ್ನಾರ್ಡನ ಬಳಿಗೆ ಬಂದ. "ಬರ್ನಾರ್ಡ್, ನಾನು ಇಂಗ್ಲಂಡಿನಿಂದ ಬಂದಾಗ, ನೀವು ನನ್ನ ಶತ್ರುಗಳ ಬಗ್ಗೆ ಏನೇನೋ ಹೇಳಿದ್ದಿರಿ, ನೆನಪಿದೆಯೆ ?" ಎಂದು ಕೇಳಿದ ಪಿಟರ್ಸ್.

"ಚೆನ್ನಾಗಿ ನೆನಪಿದೆ. ಅಲ್ಲಿಯು ರಾಜಕೀಯ ಗುಪ್ತಸಮಿತಿಗಳ ಬಗ್ಗೆ ಅನೇಕ ಸಂಗತಿಗಳನ್ನು ಅರಿತುಕೊಂಡಿದ್ದೇನೆ."

"ಏನು ತಿಳಿದಿದೆ ?"

"ಲಂಡನ್ನಿನಲ್ಲಿ ಮಾತ್ರವಲ್ಲ, ವ್ಹಿಯೆನ್ನಾ-ಬರ್ಲಿನುಗಳಲ್ಲಿಯೂ ಅವರ ಮೇಲೆ ಪೋಲಿಸರ ತೀಕ್ಷ್ಣದೃಷ್ಟಿಯಿದೆ. ಕೆಲವೇ ದಿನಗಳಲ್ಲಿ ಏಳು ಜನ ವಿಖ್ಯಾತ ಮನುಷ್ಯರ ಕೊಲೆಯಾಗಿವೆ. ಈ ಕೆಲಸ ಅವರದೇ ಎಂದು ಅನೇಕರ ತಿಳಿವಳಿಕೆ. ಈ ಗುಪ್ತಸಮಿತಿಯ ಸದಸ್ಯರು ಸ್ವೇಚ್ಛಾಚಾರಿಗಳಾದ ಪ್ರಜಾ-

ಪೀಡಕ ಭೂಸ್ವಾಮಿಗಳನ್ನು ಕೊನೆಗಾಣಿಸಲು ಸಂಕಲ್ಪವನ್ನೇ ಮಾಡಿದ್ದಾರೆ. ಈ ದಳದಲ್ಲಿ ಪ್ರತಿಯೊಂದು ದೇಶದ ಮೂವರು ಗಂಡುಸರು, ಒಬ್ಬ ಹೆಂಗುಸು ಇದ್ದಾರೆ ಇಂಗ್ಲಂಡಿನ ಒಬ್ಬ ವ್ಯಾಪಾರಿ ಅವರ ಅಧಿನಾಯಕ. ಅವರು ಒಳ್ಳೇ ಚಾಣಾಕ್ಷತನದಿಂದ ಕೊಲೆ ಮಾಡಿಸುವರು. ಕೊಲೆಗಾರನ ಮೇಲೆ ಆಪಾದನೆ ಹೊರಿಸಲು ಯಾವ ಪ್ರಮಾಣವೂ ಸಿಕ್ಕುವುದಿಲ್ಲ ; ಕೊಂದವರು ಯಾರೆಂದು ಅನೇಕರಿಗೆ ತಿಳಿದಿದ್ದರೂ ಅವನನ್ನು ಶಾಸನಕ್ಕೆ ಗುರಿಪಡಿಸಲಿಕ್ಕೆ ಆಗುವುದಿಲ್ಲ. ತಾವು ಪಕ್ಕನೆ ಈ ಪ್ರಸಂಗವನ್ನು ತೆಗೆದುದಕ್ಕೆ ನನಗೊಳ್ಳೇ ಆಶ್ಚರ್ಯವಾಗಿದೆ. ”

“ ಏಕೆ ? ”

“ ಇದೀಗ ನನಗೆ ಸುದ್ದಿ ಬಂದಿದೆ– ಈ ಸಮಿತಿಯವರೊಬ್ಬರು ಇಲ್ಲಿಗೆ ಬಂದಿದ್ದಾರಂತೆ. ”

“ ತಮ್ಮ ಪೋಲಿಸರ ಕಾರ್ಯಕ್ಷಮತೆ ಹೊಗಳತಕ್ಕದ್ದೇ ಬಂದವರು ಹೆಂಗುಸೋ ಗಂಡುಸೊ ? ”

“ ಹೆಂಗುಸು. ಸ್ವಲ್ಪ ಎತ್ತರವಾದ ಆಳು ; ಒಳ್ಳೇ ಚೆಲುವೆ; ಗ್ರೇಸ್ ಪೆನಿಸರ್ ಎಂಬು ಅವಳ ಹೆಸರು ಇಲ್ಲಿ ಬರ್ಜ್‌ಮನ್ ಹೋಟೆಲಿನಲ್ಲಿ ತನ್ನ ಪರಿಚಾರಿಕೆಯೊಡನೆ ತಂಗಿದ್ದಾಳೆ. ಇಂದು ಅಪರಾಹ್ನದಲ್ಲಿ ನಮ್ಮೂರಿನ ಪ್ರತಿಷ್ಠಿತ ಗೃಹಸ್ಥರೊಬ್ಬರು ಅವಳ ಕಡೆ ಹೋಗಿದ್ದರಂತೆ. ಅವರು ಯಾರಿರಬಹುದೆಂದು ತಾವು ಅನುಮಾನಿಸಬಲ್ಲಿರಾ ? ”

“ ನೀವು ಬಹಳ ಅರಿತುಕೊಂಡಿದ್ದೀರಿ, ಅವರು ಯಾರು ನೀವೇ ಹೇಳಿರಿ.”

“ ನಮ್ಮ ರಾಜ್ಯದ ಯುವರಾಜರು ”

“ ನೀವು ನನ್ನನ್ನು ಬೆಪ್ಪು ಮಾಡಿದಿರಿ ಬರ್ನಾರ್ಡ್. ನಿಮ್ಮ ಯೋಗ್ಯತೆ ಅದ್ಭುತ. ನಿಮ್ಮ ಕಣ್ತಪ್ಪಿ ಯಾವುದೂ ಉಳಿಯುವುದಿಲ್ಲ. ನಿಮ್ಮ ಮಾತು ಕೇಳಿ ನನಗೆ ಭಯವಾಗುತ್ತಿದೆ. ”

“ ತಮ್ಮ ಉಪಹಾಸಕ್ಕೆ ನಾನೂ ಬಹಳ ಅಂಜುತ್ತೇನೆ. ಆದರೂ ನಾವು ಪೋಲಿಸ್ ಮಂದಿ : ನಾವು ಯಾರಿಗೂ ಮನಬಿಚ್ಚಿ ಹೇಳುವುದಿಲ್ಲ. ಕೊಂಚವಿಲ್ಲ ಕೊಂಚ ಬಚ್ಚಿಡುತ್ತೇವೆ. ”

"ನನ್ನೆದುರಿಗೂ ನೀವು ಮುಚ್ಚುಮರೆ ಮಾಡುವುದು ಬಲು ಅಸಂಗತ." ಎಂದು ಎದ್ದು ನಿಂತು ಪಿಟರ್ಸ್ ಹೇಳಿದ: "ಏನೇ ಆಗಲಿ, ಇನ್ನು ತಡಮಾಡುವುದಿಲ್ಲ. ಇಜ್ಲಂಡಿನಿಂದ ಬಂದ ಯುವತಿಯೊಡನೆ ಸ್ವಲ್ಪ ಮಾತನಾಡುವುದಿದೆ, ಹೋಗುತ್ತೇನೆ."

ಗ್ರೇಸ್ ತನ್ನ ಅಬಚಿಯೊಡನೆ ಇಂದಿನ ಆನಂದೋತ್ಸವಕ್ಕಾಗಿ ಬಂದಿದ್ದಳು. ಅರಮನೆಯ ಕೆಳಭಾಗದಲ್ಲಿದ್ದಳು. ಪಿಟರ್ಸ್ ಅಲ್ಲಿಗೆ ಹೋಗಿ ನಾಲ್ಕಾರು ಮಾತುಗಳನ್ನಾಡಿದ ಮೇಲೆ ಅವರಿಬ್ಬರನ್ನೂ ಭೋಜನಗೃಹಕ್ಕೆ ಕರೆದುಕೊಂಡು ಹೋದ. ಒಳಗೆ ಹೋದಬಳಿಕ ಗ್ರೇಸ್ ಪಿಟರ್ಸನಿಗೆಂದಳು: "ತಮ್ಮ ಈ ಉಡಿಗೆ ತೊಡಿಗೆ ನನ್ನನ್ನು ಬಹಳ ಅಂಜಿಸುತ್ತಿದೆ. ಅರಮನೆಯ ಪರಿಪಾಠದ ಅಭ್ಯಾಸ ನನಗಿಲ್ಲ. ಮಾತು ಮಾತಿಗೂ ಜೀಯಾ ಜೀಯಾ ಎನ್ನುವುದೂಬಲು ಕಠಿನ."

ಪಿಟರ್ಸ್ ನಸುನಗುತ್ತ "ನಿನಗೆ ಕಷ್ಟವಾಗುವುದನ್ನು ಮಾಡುವ ಅಗತ್ಯವಿಲ್ಲ, ಆಗ್ರಹವಿಲ್ಲ. ನೀನು ನನ್ನನ್ನು ಜಾನ್ ಎಂದೇ ಸಂಬೋಧಿಸು."

"ಆ ರೂಢಿಯೂ ಇಲ್ಲ. ಮಾತು ಗಂಟಲೊಳಗೇ ಸಿಕ್ಕುಬಿಡುತ್ತದೆ."

"ಸ್ವಲ್ಪ ಪ್ರಯತ್ನ ಪಟ್ಟರೆ ಬರುತ್ತದೆ. ನನ್ನ ಹೆಸರು ಬಲು ಸುಲಭ, ಒತ್ತಕ್ಷರಗಳಿಲ್ಲ."

"ಅದು ಸರಿ. ಆದರೆ ತಮ್ಮ ಈ ಉಡುಪಿಗೆ ಇಂಥ ಸರಳವಾದ ಹೆಸರು ಕೊಂಚವೂ ಸರಿಹೋಗುವುದಿಲ್ಲ"

ಜಾನ್ ಪಿಟರ್ಸ್ ನೀಲವರ್ಣದ ಸೈನಿಕ ವೇಷದಲ್ಲಿದ್ದ. ಬಹು ಮೂಲ್ಯವಾದ ವಸ್ತ್ರಗಳು ಹೀರಕ ರತ್ನಗಳಿಂದ ಝಗಿಝಗಿಸುತ್ತಿದ್ದವು. ಅವನು ತನ್ನ ಉಡುಪನ್ನೊಮ್ಮೆ ನೋಡಿಕೊಂಡು "ಏಕೆ, ಈ ಉಡಿಗೆ ನನಗೊಪ್ಪುವುದಿಲ್ಲವೆ? ನಾನು ರಾಜ್ಯವನ್ನು ಸಹಜವಾಗಿಯೇ ಬಿಡಬಲ್ಲೆ. ಆದರೆ ಇಂತಹ ಉಡಿಗೆ ತೊಡಿಗೆಯ ಮೋಹವನ್ನು ತೊರೆಯುವುದು ಕಠಿಣ." ಎಂದ.

"ಸಾಮಾನ್ಯ ಉಡುಪಿಗಿಂತ ಈ ಉಡುಪು ತಮಗೆ ಬಲು ಚಂದ ಕಾಣುತ್ತಿದೆಯೇನೋ ನಿಜ. ಆದರೆ ಈ ವೇಷದಲ್ಲಿ ತಾವು ನನ್ನ ಪ್ರಿಯ ಬಂಧು ಜಾನ್ ಪಿಟರ್ಸ್ ಎಂದು ಗುರುತು ಸಿಕ್ಕುವುದಿಲ್ಲ."

ಬಂಗಾರ ಬಟ್ಟಲಲ್ಲಿ ಮದ್ಯವನ್ನು ಸುರಿದು ಪಿಟರ್ಸ್ ಗ್ರೇಸಳ ಕೈಗೆ ಕೊಡಹೋಗಲು ಅವಳೆಂದಳು: "ಬಂಗಾರ ಬಟ್ಟಲಲ್ಲಿ ಮದ್ಯಪಾನ ಮಾಡುವ ಅಭ್ಯಾಸ ನನಗಿಲ್ಲ."

"ಆದರೆ ಇಂತಹ ಸುಯೋಗ ಮತ್ತೆ ಬಂದೀತೋ ಇಲ್ಲವೋ ಹೇಳಲಾರೆ ಪ್ರಜಾತಂತ್ರವಾದಿಗಳು ನಮ್ಮ ಚಿನ್ನವನ್ನೆಲ್ಲ ಕಸಿದುಕೊಂಡು, ಜನರ ಶಿಕ್ಷಣಕ್ಕಾಗಿ ವೆಚ್ಚಮಾಡುವರು. ಅದಿರಲಿ; ನೀನು ಮ್ಯಾಡಮ್ ಸೇಯರ್ಸ್ಳೊಡನೆ ಇಲ್ಲಿಗೆ ಬಂದೆ ಹೇಗೆ ?"

"ಇದರಲ್ಲಿ ಆಶ್ಚರ್ಯಪಡುವಂಥದೇನಿದೆ ?"

"ಸ್ವಲ್ಪವಿದೆ. ಮ್ಯಾಡಂ ಸೇಯರ್ಸ್ಳಿಗೆ ನಿನ್ನಂಥ ಹುರುಪಿನ ಸಾಧಾರಣ ತಂತ್ರವಾದಿ ಯುವತಿಯನ್ನು ಕಟ್ಟಿಕೊಂಡು ಇಲ್ಲಿಗೆ ಬರಲಿಕ್ಕೆ ಧೈರ್ಯವಿದ್ದೀತೆಂದು ನಾನೆಣಿಸಿರಲಿಲ್ಲ ಇರಲಿ. ನೀನು ಕುಡಿಯುತ್ತಿರುವ ಸ್ಯಾಂಪೆನ್ ಜನಸಾಮಾನ್ಯರ ಹಣದಿಂದಲೇ ಕೊಂಡದ್ದೆಂದು ನಿನಗೆನಿಸುವುದೆ?"

"ಯಾರ ಹಣದಿಂದಲೇ ಕೊಂಡಿರಲಿ, ವಸ್ತು ಮಾತ್ರ ಬಲು ರುಚಿಕಟ್ಟು. ಮ್ಯಾಡ. ಸೇಯರ್ಸ್ ನನಗೇನಾಗಬೇಕೆಂದು ತಮಗೆ ಗೊತ್ತಿರಲಿಕ್ಕಿಲ್ಲ–ನನ್ನ ಅಬಚಿ."

"ಹೀಗೇನು ? ಹಾಗಾದರೆ ನೀನು ನಮಗೆ ಅರ್ಧಸ್ವದೇಶಿ." ವಿಸ್ಮಯದಿಂದ ಪಿಟರ್ಸ್ ನುಡಿದ

"ನಮ್ಮವ್ವ ಅಬಚಿ ಒಡಹುಟ್ಟಿದವರು."

"ನಿಮ್ಮ ಅಬಚಿ ನಮ್ಮ ದೇಶದ ಅತಿ ಪ್ರಾಚೀನ ಪ್ರತಿಷ್ಠಿತ ಕುಟುಂಬದ ಕನ್ಯೆ. ಆದರೂ ನೀನು ಸಾಧಾರಣ ತಂತ್ರದ ಪಕ್ಷಪಾತಿನಿ. ಇದು ಒಳ್ಳೇ ವಿಚಿತ್ರವಾಗಿ ತೋರುತ್ತದೆ."

ಗ್ರೇಸ್ ನಕ್ಕು "ಎಷ್ಟೋ ಸಲ ದೈತ್ಯ ಕುಲದಲ್ಲಿ ಭಗವದ್ಭಕ್ತರು ಹುಟ್ಟುತಾರೆ. ವೈಷಮ್ಯವೇ ನಿಸರ್ಗದ ಸನಾತನ ನಿಯಮ. ಸೇಂಟ್ ಮರಿಜ್ನಲ್ಲಿಯ ನಮ್ಮ ಆ ಹಿಂದಿನ ಮಾತುಗಳು ನೆನಪಿವೆಯೇ ?" ಎಂದಳು.

"ವಿಶ್ವದಲ್ಲಿ ವಿಚಿತ್ರ ಯಾವುದೂ ಇಲ್ಲ. ಪ್ರಪಂಚದಲ್ಲಿ ಪ್ರತಿಯೊಂದು ಪ್ರಾಣಿಯೂ ತನ್ನ ಕಾಲಮೇಲೆ ತಾನು ನಿಲ್ಲಬೇಕೆನ್ನುತ್ತದೆ, ಸ್ವೇಚ್ಛಾನುಸಾರವಾಗಿ ಜೀವನವನ್ನು ಸಾಗಿಸಬೇಕೆಂದು ಬಯಸುತ್ತದೆ. ಇದು ಮನುಷ್ಯನ ಜನ್ಮಸಿದ್ಧ ಹಕ್ಕು. ಈ ಸಾಮಾನ್ಯ ವಿಷಯವನ್ನು ಜಟಿಲಗೊಳಿಸುವುದಕ್ಕಾಗಿ ಸೋಶಾಲಿಸ್ಟರು ಅರಾಜಕತೆಯ ಕಿಚ್ಚನ್ನು ಊದುತ್ತಿರುವರು. ನಿಹಿಲಿಸ್ಟರು ಸಮಾಜದ ಶಾಂತಿಯನ್ನು ಕದಡಿ ರಾಷ್ಟ್ರಕ್ರಾಂತಿಯ ಪ್ರಚಾರ ಮಾಡುತ್ತಿರುವರು. ದೇಶದೇಶದಲ್ಲಿಯೂ ಗುಪ್ತಸಮಿತಿಗಳು ಹುಣ್ಣಿನಂತೆ ಹುಟ್ಟಿಕೊಂಡಿವೆ. ಅವರ ಸ್ವೇಚ್ಛಾಚಾರದಿಂದ ಪೀಡಿತರಾಗಿಯೂ ಸಾವಿರಾರು ಜನರು ವಿಮೋಚನೆಯ ಆಶೆಯಿಂದ ಅವರ ಮೋರೆಯನ್ನೇ ನೋಡುತ್ತಿದ್ದಾರೆ. ಈ ಪರಾವಲಂಬಿಗಳಾದ ಜನರು ಪ್ರಪಂಚಕ್ಕೆ ಕಲಂಕಪ್ರಾಯರು. ಪಾಪದ ಹೊರೆಯನ್ನು ಹೆಚ್ಚಿಸಿಕೊಂಡು ಸ್ವಾರ್ಥಸಿದ್ಧಿಗಾಗಿ ಅವರು ಹವಣಿಸುತ್ತಿದ್ದಾರೆ. ದೇವರು ಅವರ ಸದಿಚ್ಛೆ...."

ಪಿಟರ್ಸನ ಮಾತು ಮುಗಿದಿರಲಿಲ್ಲ. ವಜ್ರಘೋಷದಂತೆ ಬಾಂಬಿನ ಪ್ರಚಂಡ ಶಬ್ದ. ಒಂದರ ಮೇಲೊಂದು ಭಯಂಕರ ಸ್ಫೋಟದ ಶಬ್ದ! ಅವುಗಳನ್ನು ಕೇಳಿ ಗ್ರೇಸಳಿಗೆ ಭಯದಿಂದ ಮೂರ್ಛೆ ಬಂದಿತು. ಪಿಟರ್ಸ್ ತಟ್ಟನೆದ್ದು ಹೋಗಿ ಬೀಳುತ್ತಿರುವ ಅವಳನ್ನು ಹಿಡಿದು ಎದೆಯ ಮೇಲೆ ತೆಗೆದುಕೊಂಡು ಕೋಣೆಯಿಂದ ಹೊರಬಿದ್ದ.

## ೨೦

ಅರಮನೆಯ ನಡುವಣ ವಿಶಾಲವಾದ ಮಂದಿರದಲ್ಲಿ ಈ ನೃತ್ಯ-ಸಮಾರಂಭ ನಡೆದಿತ್ತು. ಈ ಅಕಲ್ಪಿತವಾದ ಮಹಾಸಂಕಟದಿಂದ ಕುಣಿತದ ಕೂಟ ಮುರಿದು ಗೊಂದಲವೆದ್ದಿತು. ಗಂಡುಸರು ಜೀವ ಉಳಿಸಿಕೊಂಡೋಡಿ ಹೋಗುವುದಕ್ಕಾಗಿ ಅತ್ತಿತ್ತ ಓಡಾಡತೊಡಗಿದರು; ಮಹಿಳೆಯರು ಹೆದರಿ ಗೋಳಾಡುತ್ತ ಮಂದಿರದ ಮಧ್ಯಸ್ಥಳದಲ್ಲಿ ಒಟ್ಟುಗೂಡಿದರು. ವಿದ್ರೋಹಿಗಳು ದಕ್ಷಿಣ ದಿಕ್ಕಿನಿಂದ ಅರಮನೆಗೆ ಲಗ್ಗೆ ಹತ್ತಿದ್ದರು. ಮಂದಿರದ ಆ ಕಡೆಯ ಕಾಜಿನ ಕಿಡಿಕಿಗಳು ಅವರು ಬೀಸಿದ ಕಲ್ಲುಗಳಿಂದ ಒಡೆದು ಪುಡಿಪುಡಿಯಾಗಿದ್ದವು. ಮುರಿದ ಕಿಡಿಕಿಯ ಮಾರ್ಗವಾಗಿ ಬಂದು ಬೀಳುವ ಬಾಂಬುಗಳ

ಅತ್ಯುಜ್ವಲವಾದ ಕೆಂಬೆಳಕು ಆಗಾಗ ಕಣ್ಣುಗಳನ್ನು ಕೊರೆಯುತ್ತಿದ್ದಿತು. ಅರಮನೆಯ ಕಾವಲಿದ್ದ ಚಿಕ್ಕ ಪಡೆ ಶತ್ರುಗಳನ್ನೆದುರಿಸಲು ಆಯುಧಗಳನ್ನು ಅಣಿಗೊಳಿಸುವುದರೊಳಗೇ ವಿದ್ರೋಹಿಗಳಿಂದ ಬಂಧಿತವಾಯಿತು. ವಿದ್ರೋಹಿಗಳು ಮೆಟ್ಟಿಲೆಲ್ಲಿರುವುದೆಂದು ಕಾಣದೆ, ಕಂಬಗಳನ್ನಡರಿ ಉಪ್ಪರಿಗೆಗೆ ಹೋಗಲು ಪ್ರಯತ್ನಿಸತೊಡಗಿದರು ಅವರ ವಿಕಟ ಹುಂಕಾರ ಕೋಲಾಹಲ ದಿಂದ ಅರಮನೆ ತುಂಬಿಹೋಯಿತು

ಪಿಟರ್ಸ್ ಮಂದಿರದಲ್ಲಿ ಬಂದು ಸ್ತಂಭಿತನಾಗಿ ನಿಂತುಬಿಟ್ಟ. ದೈವ ವಶಾತ್ ಗ್ರೇಸ್ ಆಗ ಕೊಂಚ ಎಚ್ಚತ್ತಳು. ಪಿಟರ್ಸ್ ಅವಳನ್ನು ಬಿಟ್ಟು ತನ್ನ ನೀಳವಾದ ಕತ್ತಿಯನ್ನು ಒರೆಯಿಂದ ಹಿರಿದ. ಕತ್ತಿಯನ್ನು ಮೇಲೆತ್ತಿ ಉಚ್ಚಸ್ವರದಲ್ಲಿ ಅವನೆಂದ : “ ರಮಣಿಯರೆ, ನೀವು ಉತ್ತರದಿಕ್ಕಿನ ಕೋಣೆ ಯೊಳಗೆ ಹೋಗಿರಿ, ಅದು ಹೆಚ್ಚು ಸುರಕ್ಷಿತವಾಗಿದೆ. ಪುರುಷರು ನನ್ನೊಂದಿಗೆ ಬನ್ನಿರಿ ! ”

ಹತ್ತು ಹದಿನೈದು ಜನ ಎದೆಗಾರರಾದ ಯುವಕರು ಪಿಟರ್ಸನನ್ನು ಅನುಸರಿಸಿದರು. ಅವನು ಭರ್ರನೆ ಮೊಗಸಾಲೆಗೆ ಬಂದು ನೋಡಿದ. ಆಗಲೇ ಕೆಲವು ವಿದ್ರೋಹಿಗಳು ಅಲ್ಲಿ ಬಂದಿದ್ದರು. ಪಿಟರ್ಸ್ ಕ್ರೋಧದಿಂದ ಗರ್ಜಿಸಿ ಅವರಿಗೆಂದ : “ ಒಂದು ಕ್ಷಣ ನಿಮಗೆ ಜೀವದಾನ ಕೊಟ್ಟಿದ್ದೇನೆ, ವಿಲಂಬ ಮಾಡದೆ ಓಡಿ ಹೋಗಿರಿ. ”

ನೀಳವಾದ ಖಡ್ಗವನ್ನು ಹಿರಿದು ಮಹಾಪರಾಕ್ರಮಿಯೊಬ್ಬನು ಇದಿರಿಗೆ ಬಂದುದನ್ನು ಕಂಡು ವಿದ್ರೋಹಿಗಳು ಕೆಲಸ ಕೆಟ್ಟಿತೆಂದರು, ಕೊಂಚ ಕುಂಠಿತರಾದರು. ಆದರವರು ಅಲ್ಲಿಂದ ತೊಲಗಲಿಲ್ಲ; ಮುಂದೇನೆಂದು ಯೋಚನೆಗೊಳಗಾದರು. ಅವರೊಬ್ಬ ನಾಯಕನು ಮಾತ್ರ ಎರಡೆಣಿಕೆ ಯಿಲ್ಲದೆ ಪಿಟರ್ಸನನ್ನಾಕ್ರಮಿಸಲು ಕತ್ತಿಯನ್ನು ತಿರುವಿದ ಪಿಟರ್ಸ್ ತತ್ ಕ್ಷಣವೆ ಅವನ ಮೇಲೆರಗಿ ಎದೆಯನ್ನಿರಿದ. ಆ ವಿದ್ರೋಹೀನಾಯಕ ಆರ್ತ ನಾದ ಮಾಡುತ್ತ ನೆಲಕ್ಕುರುಳಿದ. ಪಿಟರ್ಸ್ ರಕ್ತರಂಜಿತ ಖಡ್ಗವನ್ನು ಝಳಪಿಸುತ್ತ ಗರ್ಜಿಸಿದ : “ ನಾಯಿಗಳೇ, ಹೆಂಗುಸರು ಮುದುಕರ ಮೇಲೆ ದಾಳಿ ಮಾಡಲು ನಿಮಗೆ ಕೊಂಚವೂ ನಾಚಿಕೆಯಿಲ್ಲವೆ ? ನೀವು ಈ ಕ್ಷಣವೇ

ತಿರುಗಿ ಹೋದರೆ ನಿಮ್ಮ ಪರಿಣಾಮ ನೆಟ್ಟಗಾದೀತು; ಇಲ್ಲದಿದ್ದರೆ ಒಬ್ಬನೂ ಜೀವದಿಂದ ನಿಮ್ಮ ಮನೆ ಸೇರಲಾರಿರಿ. ”

ತಮ್ಮ ಮುಂದಾಳು ಬಿದ್ದುದನ್ನು ಕಂಡು ವಿದ್ರೋಹಿಗಳು ಕಂಬದ ಗಂಟೆ ಕೆಳಗಿಳಿದು ಓಡಿಹೋಗಲುಪಕ್ರಮಿಸಿದರು. ಕೆಲವರು ಇನ್ನೂ ಹಿಂದೆ ಮುಂದೆ ನೋಡುತ್ತಿರುವುದನ್ನು ಕಂಡು ಪಿಟರ್ಸ್ “ ಇನ್ನೂ ಏಕೆ ತಡ ? ಜೀಗನೆ ಓಡಿರಿ. ಇಲ್ಲದಿದ್ದರೆ ಉಳಿಗಾಲವಿಲ್ಲ ; ಅಲ್ಲಿ ನೋಡಿರಿ.” ಎಂದ.

ವಿದ್ರೋಹಿಗಳು ಅರಮನೆಯ ಅಂಗಳದ ಕಡೆ ನೋಡಿದರು. ನೂರಾರು ಸುಸಜ್ಜಿತ ಸೈನಿಕರು ತಂಡತಂಡವಾಗಿ ಬರುತ್ತಿದ್ದರು. ವಿದ್ರೋಹಿಗಳು ಅವರ ಕಡೆ ತಿರುಗಿ ನೋಡುವುದರೊಳಗೇ ಸೈನಿಕರ ಮ್ಯಾಗ್ಝಿಂ ಬಂದೂಕುಗಳು ಗುಂಡುಗಳನ್ನು ಕಾರಿ ಹಲವರನ್ನು ಕೊಂದವು. ಮಿಕ್ಕ ವಿದ್ರೋಹಿಗಳು ಬೆದರಿ ಕೈಯೊಳಗಿನ ಶಸ್ತ್ರಾಸ್ತ್ರಗಳನ್ನು ಬಿಸುಟು ಓಡಿದರು. ಬಳಿಕ ಪಿಟರ್ಸ್ ಶಾಂತಿಯನ್ನು ಸಾರಿದ. ಸೈನಿಕರು ಕಾಳಗವನ್ನು ನಿಲ್ಲಿಸಿ ಅರಮನೆಯ ಸುತ್ತು ಮುತ್ತು ಕಾವಲಿಗೆ ನಿಂತರು. ಪಿಟರ್ಸ್ ಶಾಂತಿರಕ್ಷಣೆಯ ಏರ್ಪಾಟನ್ನು ಮಾಡಿ ನೃತ್ಯಮಂದಿರಕ್ಕೆ ತಿರುಗಿ ಬಂದ. ಹೆಂಗುಸರು ಒಬ್ಬೊಬ್ಬರೂ ಒಂದೊಂದು ಪ್ರಶ್ನೆ ಕೇಳುತ್ತ ಕಲಕಲವೆಬ್ಬಿಸಿದರು

ಪಿಟರ್ಸ್ ಯಾರನ್ನು ಬಿಟ್ಟು ಯಾರಿಗೆ ಉತ್ತರ ಕೊಡಬೇಕು ? ಎಲ್ಲರನ್ನೂ ಸಮಾಧಾನಗೊಳಿಸಲು ಅವನು ಕೂಗಿ ಹೇಳಿದ: “ ಮಹಿಳೆಯರೆ, ನಿಮಗಿನ್ನು ಯಾವ ಭಯವೂ ಇಲ್ಲ. ಸಂಕಟವು ದೂರಾಯಿತು, ಅಂಜಬೇಡಿರಿ. ಕೆಲವರು ದುರುಳರು ನಮ್ಮ ಮೇಲೆ ಆಕ್ರಮಣ ಮಾಡಿದ್ದರು. ಅವರ ಬಾಂಬುಗಳಿಂದ ಸ್ವಲ್ಪ ಹಾನಿಯಾಗಿದ್ದರೂ ಬೆಂಕಿ ಸಹಜವಾಗಿಯೆ ಆರಿಸಲ್ಪಟ್ಟಿದೆ. ದಾಳಿಗಾರರೂ ಓಡಿಹೋಗಿದ್ದಾರೆ. ದಂಡು ಅರಮನೆಯನ್ನು ಕಾಯುತ್ತಿದೆ. ದ್ರೋಹಿಗಳು ಮತ್ತೆ ಮುತ್ತಿಗೆ ಹಾಕುವ ಸಂಭವ ಎಷ್ಟೂ ಇಲ್ಲ. ”

ಈ ಭರವಸೆಯಿಂದ ರಮಣಿಯರ ಉದ್ವೇಗವು ದೂರವಾಯಿತು ಕೆಲ ಹೆಂಗಸರು ಮಾತ್ರ ಬೆವರುನೋಟದಿಂದ ಪಿಟರ್ಸನ ನೆತ್ತರಿಡಿದ ಕತ್ತಿಯ ಕಡೆಗೆ ನೋಡತೊಡಗಿದರು. ಅವರ ಮನೋಭಾವವನ್ನರಿತು ಪಿಟರ್ಸ್ ಕತ್ತಿಯನ್ನು ಒರೆಗಾಣಿಸಿದ. “ ತಾವು ವಿಚಲಿತರಾಗಬೇಡಿರಿ. ಈ ಗಲಭೆಯಲ್ಲಿ

ನಿಮ್ಮ ಗಾಡಿಗಳು ದೂರ ಹೋಗಿವೆ. ಅವು ತಿರುಗಿಬರುವುದು ಸ್ವಲ್ಪ ತಡ. ಅಷ್ಟೊತ್ತಿನ ತನಕ ನಿಶ್ಚಿಂತರಾಗಿ ಇನ್ನೂ ಸ್ವಲ್ಪ ಕುಣಿಯಿರಿ ಕ್ಷುಲ್ಲಕ ಕಾರಣಕ್ಕಾಗಿ ಆಮೋದ ಪ್ರಮೋದಗಳನ್ನು ನಿಲ್ಲಿಸಬೇಡಿರಿ. ” ಎಂದು ಹೇಳಿದ.

ಪಿಟರ್ಸ್ ವಾದಕರ ಹಿರಿಯನ ಕಿವಿಯಲ್ಲಿ ಏನೋ ಹೇಳಿದ. ಅವನ ಉಪದೇಶದಂತೆ ಉತ್ಸವ ವಾದ್ಯಗಳು ಮತ್ತೆ ಆರಂಭವಾದವು. ಆದರೆ ಕುಣಿತಕ್ಕೆ ಯಾರೂ ಮುಂದಾಗಲಿಲ್ಲ. ಎಲ್ಲರ ಹುರುಪೂ ಕುಗ್ಗಿತ್ತು. ತನ್ನ ಮಾತಿನ ಪರಿಣಾಮವಾಗದುದನ್ನು ಕಂಡು ಪಿಟರ್ಸ್ ತಾನೇ ಮೆಲ್ಲಮೆಲ್ಲನೆ ಒಬ್ಬ ಯುವತಿಯ ಕಡೆ ಮುಂದುವರಿದ. ಅವಳೊಂದು ಕೋಚಿನ ಮೇಲೆ ಕುಳಿತು, ಎರಡೂ ಅಂಗೈಗಳಲ್ಲಿ ಮೊಗವನ್ನು ಮುಚ್ಚಿಕೊಂಡು ಏನನ್ನೋ ಯೋಚಿಸುತ್ತಿದ್ದಳು. ಪಿಟರ್ಸ್ ಅವಳ ಮುಖದ ಹತ್ತಿರ ಬಾಗಿ, “ ಸುಂದರಿ, ನೀನು ಬರ್ಜಿಲಂಡಿನ ಪವಿತ್ರ ಭೂಮಿಯಲ್ಲಿ ಜನಿಸಿದವಳು, ಇಂಥ ಸಣ್ಣ ವಿಪತ್ತಿಗೆ ಅಂಜಿ ಕೈಕಾಲು ಕಳೆದುಕೊಳ್ಳಬಾರದು ನನ್ನೊಡನೆ ಕುಣಿಯು-ವೆಯಾ ? ” ಎಂದು ಕೇಳಿದ.

ಯುವತಿ ಚಟ್ಟನೆದ್ದು ಪಿಟರ್ಸನ ಕೈಯನ್ನು ಹಿಡಿದು, “ ಯುವರಾಜ, ತಮ್ಮಂಥ ನೃತ್ಯಕುಶಲರು ಈ ಭೂಮಿಯ ಮೇಲೆಯೆ ಇನ್ನೊಬ್ಬರಿಲ್ಲ. ತಮ್ಮೊಂದಿಗೆ ನಾನು ಕುಣಿಯಬಲ್ಲೆನೆ ?.... ಆ ಕತ್ತಿಯನ್ನು ಬಿಚ್ಚಿಡಿರಿ, ನನಗೆ ಭಯವಾಗುತ್ತಿದೆ ” ಎಂದಳು.

ಕೂಡಲೆ ಪಿಟರ್ಸ್ ಕತ್ತಿಯನ್ನು ತೆಗೆದಿಟ್ಟು ಯುವತಿಯ ಕೈಹಿಡಿದು-ಕೊಂಡು ನೃತ್ಯರಂಗಕ್ಕೆ ಸಾಗಿದ. ಅದನ್ನು ಕಂಡು ಮಿಕ್ಕ ಯುವಕ-ಯುವತಿ-ಯರೂ ಅವರನ್ನನುಸರಿಸಿದರು ಮತ್ತೆ ಹುರುಪಿನಿಂದ ನರ್ತನ ಕಾರ್ಯಕ್ರಮ ಆರಂಭವಾಯಿತು.

ಕೆಲಹೊತ್ತು ನರ್ತಿಸಿದ ಬಳಿಕ ಪಿಟರ್ಸ್ ರಾಜಪರಿವಾರದವರಿಗಾಗಿ ಮೀಸಲಾಗಿದ್ದ ಭೋಜನಾಲಯಕ್ಕೆ ಆ ತರುಣಿಯನ್ನು ಕರೆದೊಯ್ದ. ಕಿಂಚಿತ್ ಉಪಾಹಾರದ ನಂತರ ಯುವತಿಯೆಂದಳು : “ ಇಂದು ತಾವು ನಮ್ಮ ಜೀವ ಉಳಿಸಿದಿರಿ. ತಮ್ಮ ಶೌರ್ಯದ ಪರಿಚಯವನ್ನು ನಮಗೆ ಮಾಡಿಕೊಟ್ಟಿರಿ. ತಮ್ಮ ಬಗ್ಗೆ ಜನರೆಷ್ಟು ಆಡಿಕೊಳ್ಳುತ್ತಾರೆ, ಅದನ್ನು ನಾನೆಂದಿಗೂ ನಂಬಲಾರೆ ”

ಪಿಟರ್ಸ್ ನಕ್ಕು ಉತ್ತರವಿತ್ತ : "ಸುಂದರಿ ನಿಮಗಾಗಿ ನಾನೇನೂ ವಿಶೇಷ ಮಾಡಲಿಲ್ಲ. ನಿಮ್ಮ ಸಹಾಯಕ್ಕೆ ನಾನು ಮುಂದುವರಿಯದಿದ್ದರೂ ನಿಮಗೇನೂ ಆಗುತ್ತಿರಲಿಲ್ಲ. ನಾನೊಬ್ಬ ನರಾಧಮ, ಯಾವ ದುಷ್ಕರ್ಮಕ್ಕೂ ಹೇಸದ ಪ್ರಾಣಿ ಎಂದೇ ದೇಶವಿದೇಶಗಳಲ್ಲಿ ಅನೇಕರು ನಂಬಿದ್ದಾರೆ ಒಬ್ಬರಾದರೂ ಹಾಗೆ ಭಾವಿಸದವರಿದ್ದಾರೆಂಬುದನ್ನು ಕೇಳಿದ್ದು ನನ್ನ ಸೌಭಾಗ್ಯವೆಂದೇ ಎಣಿಸುತ್ತೇನೆ." ಎಂದು ಒಂದು ಪಚ್ಚದುಂಗುರವನ್ನು ಯುವತಿಯ ಬೆರಳಿಗಿರಿಸಿ ಅವನೆಂದ : "ಕುಮಾರಿಕೆಯಾಗಿರುವಷ್ಟು ಕಾಲವೂ ಇಂದಿನ ಘಟನೆಯ ನೆನಪೆಂದು ಈ ಉಂಗುರ ನಿನ್ನ ಬೆರಳಲ್ಲಿರಲಿ ; ಮದುವೆಯಾದ ಬಳಿಕ ನಿನ್ನ ಗಂಡನಿಗೆ ಕೊಡು."

ಕೊನೆಗೆ ಪಿಟರ್ಸ್ ಯುವತಿಯನ್ನು ಅವಳ ತಾಯಿಯ ಹತ್ತಿರ ಒಯ್ದು ಬಿಟ್ಟು, "ಮ್ಯಾಡಮ್, ಈ ಬಾಲಿಕೆಯನ್ನು ಹೆತ್ತ ತಾವು ಧನ್ಯರು. ಈಕೆಗೆ ರಾಜ್ಯದ ನಾವೆಲ್ಲರೂ ಕೃತಜ್ಞರು. ಬರ್ಜಿಲಂಡ್‌ರಾಜ್ಯದ ಯುವಕರು ಸಾಹಸದಲ್ಲಿ ತಮ್ಮ ಭಗಿನಿಯರ ಸಮಕ್ಷಮರಾಗಿರುವ ವರೆಗೂ ಈ ರಾಜ್ಯದುನ್ನತಿಗೆ ಚ್ಯುತಿಯೇ ಇಲ್ಲ" ಎಂದ

ಅಷ್ಟರಲ್ಲಿ ವೃದ್ಧರಾಜನು ಅಲ್ಲಿಗೆ ಬಂದು, ಪಿಟರ್ಸನ ಹೆಗಲ ಮೇಲೆ ಕೈಯಿಟ್ಟು, "ಜಾನ್, ನನ್ನ ಸೈನಿಕರು ವಿದ್ರೋಹಿಗಳ ಮೇಲೆ ಕೈಮಾಡುವುದಿಲ್ಲವೆಂದು ಹೇಳಿದವರು ಯಾರು ನಿನಗೆ ? ಸೇನಾಪತಿ ಹೇಳಿದ್ದೇ ನಿಜ. ಕಣ್ಣಾರೆ ಕಂಡೆ ತಾನೆ ? ಇಂದಿನ ಗಲಭೆಯಲ್ಲಿ ನಮ್ಮ ಸೈನಿಕರು ವಿಶ್ವಾಸಾರ್ಹರೆಂಬುದು ಸಪ್ರಮಾಣವಾಗಿ ಸಿದ್ಧವಾಯಿತು"

ಪಿಟರ್ಸ್ ಸ್ವಲ್ಪ ಸರಿದು ನಿಂತು ಹೇಳಿದ : "ಕಕ್ಕಾ, ನಮ್ಮ ನೂರು ಮಂದಿ ಸೈನಿಕರು ಅರಮನೆಯ ಕಾವಲಿಗಿದ್ದರು. ಅವರು ತುಂಬ ಸಾಹಸ ತೋರಿದವರೆಂಬುದು ಸತ್ಯ. ಆದರೆ ಎಲ್ಲ ಸೈನಿಕರೂ ವಿಶ್ವಾಸಕ್ಕೆ ಪಾತ್ರರೆಂದು ಹೇಗೆ ಹೇಳುವುದು ?"

ಸಮೀಪದ ಒಂದು ಕಂಬದ ಮರೆಯಲ್ಲಿ ಗ್ರೇಸ್ ನಿಂತಿದ್ದಳು. ಆಕಡೆ ದೃಷ್ಟಿ ಹೋಗುತ್ತಲೆ ಪಿಟರ್ಸ್ ಅವಳ ಬಳಿ ಹೋದ. "ತಮ್ಮೊಡನೆ ಒಂದೆರಡು ಗುಟ್ಟಿನ ಮಾತು ಆಡುವುದಿತ್ತು." ಚಿಂತಿತ ಭಾವದಿಂದ ಅವಳೆಂದಳು.

ನಿರ್ಜನವಾದ ಕೋಣೆಯೊಂದರಲ್ಲಿ ಗ್ರೇಸಳನ್ನು ಕರೆದೊಯ್ದು, "ಏನು ಹೇಳು" ಎಂದು ಪಿಟರ್ಸ್ ಕೇಳಿದ.

"ಇಂದಿನ ದುರ್ಘಟನೆಗೆ ನಾನು ಕಾರಣಳೆಂದು ನೀವೆಣಿಸುವಿರಾ? ಸತ್ಯವಾಗಿ ಹೇಳಿರಿ."

"ನೀನು ಕಾರಣಳಲ್ಲದಿದ್ದರೆ ಸಂತೋಷವೆ!"

"ನಾನು ಇಲ್ಲಿಯ ಸಾಧಾರಣ ತಂತ್ರವಾದಿಗಳ ದಲಪತಿಗೆ ಒಂದು ಅಗತ್ಯದ ಸುದ್ದಿಯನ್ನು ತಂದಿದ್ದೆ. ಇನ್ನೂ ವರೆಗೆ ಅವರ ದರ್ಶನವೇ ನನಗಾಗಲಿಲ್ಲ. ನಮ್ಮ ಮಿತ್ರರು ಇಲ್ಲಿಯ ಜನಸಾಮಾನ್ಯರಿಗೆ ಪ್ರಭುತ್ವವನ್ನು ಎದುರಿಸುವುದಕ್ಕಾಗಿ ಧನದಿಂದ–ಬೇಕಾದರೆ ಬೇರೆ ಯಾವ ಯಾವ ರೀತಿಯಿಂದಲೂ– ಸಹಾಯ ಮಾಡಬಲ್ಲರು; ನಿಜ. ಆದರೆ ಅವರು ಅರಾಜಕತ್ವವಾದಿಗಳಲ್ಲ, ಈ ಬಾಂಬು ಹಾವಳಿಗೆ ಅವರ ಸಂಬಂಧವಿಲ್ಲ."

"ನಿನ್ನ ಮಾತಿನಿಂದ ನನ್ನ ಸಂದೇಹ ದೂರವಾಯಿತು. ಈವರೆಗೆ ಈ ದೇಶದಲ್ಲಿ ಬಾಂಬಿನ ಉತ್ಪಾತವಿರಲಿಲ್ಲ."

"ನನ್ನ ಮಾತಿನಲ್ಲಿ ತಮಗೆ ವಿಶ್ವಾಸವುಂಟಷ್ಟೆ?"

"ನಿಶ್ಚಯವಾಗಿ ಉಂಟು ಆದರೆ ನೀನು ಈ ಜನರ ಗುಂಪಿನಲ್ಲಿ ಏಕೆ ಇದ್ದೀ? ಅವರ ಸಹಾಯಕ್ಕೆ ಏಕೆ ಒಪ್ಪಿಕೊಂಡೆ?"

"ನಾಳೆ ನಮ್ಮ ಅಬಚಿಯ ಮನೆಗೆ ಬರ್‍ರಿ, ಎಲ್ಲವನ್ನೂ ಹೇಳುತ್ತೇನೆ."

"ಬರ್ಜ್‌ನ್ಯ್ಯಾಸ್ ಹೋಟೆಲಿನಲ್ಲಿ ಇಳಿದಿದ್ದೀ ಎಂದು ನಾನು ತಿಳಿದಿದ್ದೆ."

"ಇಲ್ಲ, ಒಬ್ಬರನ್ನು ಕಾಣುವುದಕ್ಕಾಗಿ ಅಲ್ಲಿಗೆ ಹೋಗಿದ್ದೆ."

## ೨೧

ಮರುದಿನ ಬೆಳಗಿನ ಹೊತ್ತಿನಲ್ಲಿ ಬರ್ಜಿಲಂಡ್ ರಾಜನು ತನ್ನ ಓದುವ ಕೋಣೆಯೊಳಗೆ ಕುಳಿತು ಪತ್ರಿಕೆಗಳನ್ನು ನೋಡುತ್ತಿದ್ದ. ಅವನ ಮೇಜಿನ ಎಡಬಲದಲ್ಲಿ ಯುವರಾಜ ಜಾನ್ ಪಿಟರ್ಸ್, ಸೇನಾಪತಿ ಗ್ರೋಬಿನರ್, ಪೋಲಿಸ್ ಕಮಿಶ್ನರ್ ಬ್ಯಾರನ್ ಬರ್ನಾರ್ಡ್ ಕುಳಿತಿದ್ದರು.

ಪತ್ರಿಕೆಗಳನ್ನು ದೂರ ಸರಿಸಿ ರಾಜನೆಂದ : "ಎಲ್ಲವನ್ನೂ ಓ
ನಿನ್ನಿನ ಗಲಭೆಯ ಬಗ್ಗೆ ಯಾವ ಪತ್ರಿಕೆ ಏನೆನ್ನುತ್ತಿದೆ ಎಂಬುದು ನಿಮ
ಗೊತ್ತಿರಬಹುದು. ಸ್ಟಾರಿನಂಥ ರಾಜಭಕ್ತಿ ಹೀನ ಪತ್ರಿಕೆಯೂ ನಿನ್ನೆ
ಪ್ರಜೆಗಳ ಕೃತಿಯನ್ನು ನಿಂದ್ಯವೆಂದು ಖಂಡಿಸಿದೆ. ಅದನ್ನು ಯಾರೂ ಸ
ರ್ಥಿಸಿಲ್ಲ. ನಮ್ಮ ಪ್ರಜೆಗಳು ರಾಜಭಕ್ತಿಯಿಲ್ಲದವರೆಂದು ನಾನು ಬಹು
ಗಳಿಂದಲೂ ಕೇಳುತ್ತಿದ್ದೇನೆ; ನಾನು ಅದನ್ನು ನಂಬುವುದಿಲ್ಲ. ಅ
ಸೈನಿಕರೂ ಪ್ರಭುತ್ವದ ಮೇಲೆ ಅಸಂತುಷ್ಟರಾಗಿರುವರೆಂಬ ವದಂತಿಕ
ವಿಶ್ವಾಸಾರ್ಹವೆಂದು ನನಗೆನಿಸಿಲ್ಲ. ಅವರು ನಂಬಿಕೆಗೆ ಪಾತ್ರರೆಂದು ನ
ಚೆನ್ನಾಗಿ ಮನವರಿಕೆಯಾಗಿದೆ."

ಪಿಟರ್ಸ್ ಹೇಳಿದ : "ನಮ್ಮ ದೇಶದ ಪತ್ರಿಕೆಗಳು ಮಾಡತಕ್ಕದ್ದ
ಮಾಡಿವೆ. ಇದಕ್ಕೂ ಹೆಚ್ಚು ಅವು ನಮಗೊಮ್ಮೆಗಿಲೇ ಏನಾದರೂ ಅಪ
ಮಾಡಿಯಾವು, ಅಥವಾ ಉಪಕಾರ ಮಾಡಲು ಪ್ರವೃತ್ತವಾದಾವು ಎ
ತೋರುವುದಿಲ್ಲ. ವಿಪ್ಲವವಾದಿಗಳು ಪ್ರಜೆಗಳ ಮುಂದಾಳುಗಳೊಡನೆ ಆಲೋ
ಚಿಸದೆಯೇ ನಿನ್ನೆ ಅರಮನೆಯನ್ನು ಮುತ್ತಿದರೆಂದು ನನ್ನ ತಿಳಿವಳಿಕೆ. ದೇ
ದಯೆಯಿಂದ ವಿಶೇಷವೇನೂ ಕೇಡಾಗಲಿಲ್ಲ."

ಬರ್ನಾರ್ಡ್ ಎಂದ : 'ನಿನ್ನೆ ಯಾವ ಅನಾಹುತವೂ ಆಗದಿದ್ದ
ತಮ್ಮ ಸಾಹಸದಿಂದಲೇ ಎಂದು ನನ್ನ ಮತ. ನಮ್ಮಿಂದಾಗ ಏನು ಮಾ
ಲಿಕ್ಕೂ ಆಗಲಿಲ್ಲ ತಾವೊಬ್ಬರೇ ಅರಮನೆಯನ್ನು ಕಾಯ್ದಿರಿ; ನೂರಾ
ನರನಾರಿಯರ ಜೀವನವನ್ನು ರಕ್ಷಿಸಿದಿರಿ. ಸದ್ಯದ ನಾಗರಿಕತೆಯ ಇತಿಹಾಸ
ಇಂಥ ಕಲಂಕಪ್ರಾಯ ಘಟನೆ ಎಂದೂ ಘಟಿಸಿರಲಿಲ್ಲ."

ಈ ಪ್ರಶಂಸೆ ಪಿಟರ್ಸನ ಮನವನ್ನು ಬೇಸರಗೊಳಿಸಿತು. ಅವನೆಂ
"ವಿಪ್ಲವವಾದಿಗಳು ನಾಯಕರ ಒಪ್ಪಿಗೆಯಿಲ್ಲದೆ,- ಅವರಿಗೆ ತಿಳಿಯಗೊ
ದೆಯೂ ಇರಬಹುದು- ಈ ಹೇಯಕೃತ್ಯಕ್ಕೆ ತೊಡಗಿದ್ದು ನಿಜವಾದರೂ ಅ
ಪ್ರಯತ್ನವು ಸಫಲವಾಗಿದ್ದರೆ ಪ್ರಜಾತಂತ್ರದ ನಾಯಕರು ಅದನ್ನು ಖಂಡಿ
ತ್ತಿದ್ದರೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬಾರದು. ಬರ್ನಾರ್ಡ್ ಬಲ್ಲ
ನಾನೂ ಬಲ್ಲೆ; ಈ ಉಚ್ಛೃಂಖಲ ರಾಜದ್ರೋಹಿಗಳ ಶಕ್ತಿ ತೀರ ಅಲ್ಪ

ಬಲಶಾಲಿಯಾದ ದೊಡ್ಡದೊಂದು ಪಕ್ಷ ಅವರ ಬೆಂಬಲಕ್ಕಿದೆ; ಬರ್ಜಲಂಡಿನ ರಾಜವಂಶವನ್ನು ಸಿಂಹಾಸನದಿಂದ ಉರುಳಿಸುವುದೇ ಅವರ ದೃಢಸಂಕಲ್ಪ.”

ದೊರೆ ಅಧೀನರಾಗಿ ಕೇಳಿದ: “ನಿನಗೆ ಇದೆಲ್ಲ ಎಲ್ಲಿ ತಿಳಿಯಿತು? ನಮ್ಮ ಪ್ರಜೆಗಳು ರಾಜಭಕ್ತಿ ವರ್ಜಿತರಾಗಿದ್ದರೆ, ನಮ್ಮ ಬಗ್ಗೆ ಅಸಂತುಷ್ಟ-ರಾಗಿದ್ದರೆ ಅದು ನಿನ್ನ ತಪ್ಪಿನಿಂದಲೇ. ನಿನ್ನ ಲಂಪಟತನ, ಹೇಯಪ್ರವೃತ್ತಿಗಳಿಂದಾಗಿ ನಮಗೆ ತಲೆಯೆತ್ತದಂತಾಗಿದೆ. ಈಗ ನೀನು ಸಂಭಾವಿತರಂತೆ ಪ್ರಜಾವರ್ಗದ ರಾಜನೀತಿಯ ಬಗ್ಗೆ ಚರ್ಚೆ ನಡೆಸಿದ್ದೀ. ನಿಜವಾಗಿ ನಿನಗಿದನ್ನು ಚರ್ಚಿಸುವ ಅಧಿಕಾರವೇ ಇಲ್ಲ.”

ಕರ್ಕಶ ಕಠೋರ ತಿರಸ್ಕಾರದಿಂದ ಪಿಟರ್ಸ್ ಕೊಂಚವೂ ಕುಂಠಿತ-ನಾಗಲಿಲ್ಲ. ಧೀರಭಾವದಿಂದ ಅವನು ಉತ್ತರವಿತ್ತ: “ತಮ್ಮ ಮಾತು ನಿಜವಿರಲೂ ಬಹುದು ಆದರೆ ನಾನು ಕುರುಡನಲ್ಲ, ಮೂರ್ಖನಲ್ಲ, ದೇಶದ ಪರಿಸ್ಥಿತಿ ಎಷ್ಟು ಹದಗೆಟ್ಟಿದೆಯೆಂಬುದು ನನಗೆ ತಿಳಿಯುವುದಿಲ್ಲವೆಂದು ತಾವು ಭಾವಿಸಲಾಗದು. ಇನ್ನು ಹದಿನೈದು ದಿನಗಳಲ್ಲಿ ಪಾರ್ಲಿಮೆಂಟ್ ಸಭೆ ಸೇರುವುದು. ಅಧಿಕಾಂಶ ಸಾಧಾರಣ ತಂತ್ರವಾದೀ ಸದಸ್ಯರು ನಮ್ಮ ವೃತ್ತಿ-ಯನ್ನು ನಿಲ್ಲಿಸಿಬಿಡುವ ಗೊತ್ತುವಳಿಯನ್ನು ಮಾಡುವರೆಂಬುದು ಆಗ ಗೊತ್ತಾ-ಗುವುದು. ದೇಶಾಂತರ ಹೋಗುವುದಕ್ಕೆ ಉಗಿಬಂಡಿಯ ಪ್ರವಾಸದ ವೆಚ್ಚಕ್ಕೂ ಅವರಿಂದ ನಮಗೆ ಹಣ ಸಿಕ್ಕದೆ ಹೋಗಬಹುದು.”

ದೊರೆಯೆಂದ: “ವಿಧ್ಯುಕ್ತವಾದ ಶಾಸನದ ಸಹಾಯದಿಂದ ಈ ದೇಶದ ರಾಜತಂತ್ರ ಪ್ರತಿಷ್ಠಿತವಾಗಿದೆ; ಅರ್ಥಾತ್ ಪ್ರಜಾವಿಪ್ಲವದ ಹೊರತು ವಿಧ್ಯುಕ್ತವಾದ ಯಾವ ಉಪಾಯದಿಂದಲೂ ಅದಕ್ಕೆ ಚ್ಯುತಿ ಬರುವಂತಿಲ್ಲ.”

ಬರ್ನಾರ್ಡ್ ಹೇಳಿದ: “ಪ್ರಜಾವಿಪ್ಲವದ ಭಯವೇನೂ ಅಮೂಲಕವಲ್ಲ. ನನಗೊಂದು ಗುರುತರವಾದ ಸುದ್ದಿ ತಿಳಿದಿದೆ.”

“ಏನು?” ವ್ಯಾಕುಲನಾಗಿ ದೊರೆ ಕೇಳಿದ.

ಬರ್ನಾರ್ಡ್ ನಿವೇದಿಸಿದ: “ರಾಜತಂತ್ರವು ಕೊನೆಗಂಡು ಪ್ರಜಾ-ತಂತ್ರವು ನೆಲಸಿತೆಂದರೆ, ದೇಶದ ಆಡಳಿತ ಯಾವ ರೀತಿಯಿರುವುದೆಂಬ ಬಗ್ಗೆ ಆ ಪಕ್ಷದವರು ತಯಾರಿಸಿದ ನಿಯಮಾವಳಿಯ ಕರಡಿನ ಪ್ರತಿಯೊಂದು ನನ್ನ

ಕೈಸೇರಿದೆ. ಆದರಿಂದ ಪ್ರಜಾತಂತ್ರವಾದಿಗಳು ಬಹುದೂರ ಮುಂದುವರಿದಿರುವರೆಂದು ಕಂಡುಬರುತ್ತಿದೆ. ಹೊಸ ಪಾರ್ಲಿಮೆಂಟಿನ ಮೊದಲನೆಯ ಅಧಿವೇಶನದಲ್ಲಿಯೇ ಆ ಘಟನೆ ಬಹುಮತದಿಂದ ಸ್ವೀಕೃತವಾಗುವುದೆಂದು ನನ್ನ ನಂಬುಗೆ. ಆಗ ವೈಧವೇ ಆಗಲಿ ಅವೈಧವೇ ಆಗಲಿ, ಮಹಾರಾಜರ ಪ್ರಭುತ್ವವೇನೂ ಉಳಿಯುವುದಿಲ್ಲ; ಪ್ರಜೆಗಳು ತಮ್ಮನ್ನು ಅರಸನೆಂದು ಮನ್ನಿಸಲಾರರು. "

" ಇದೆಲ್ಲ ಯಾರ ಕಾರಭಾರ ? " ದೊರೆ ಕೋಪದಿಂದ ಪ್ರಶ್ನಿಸಿದ.

" ಒಬ್ಬನೇ ಇದನ್ನೆಲ್ಲ ಮಾಡುತ್ತಿದ್ದಾನೆ. ಸಾಧಾರಣ ತಂತ್ರವಾದಿಗಳ ಉಪಶಮಿತಿಯಲ್ಲಿ ಅವನು ಹೊಸ ಹೊಸ ನಿಯಮಗಳನ್ನು ಪಾಸುಮಾಡಿಕೊಳ್ಳುತ್ತಿದ್ದಾನೆ. ಆತನೇ ವಿದ್ರೋಹಿಗಳ ನಾಯಕ. ಅವನನ್ನೇ ನಾವು ಹುಂಡಿನ ಕುರುಬನೆಂದು ಕರೆಯುವುದು. " ಎಂದ ಬರ್ನಾರ್ಡ್

ರಾಜನ ಸಿಟ್ಟು ಇನ್ನಷ್ಟು ಏರಿತು. " ಇಷ್ಟೆಲ್ಲ ಅನರ್ಥಕ್ಕೆ ಮೂಲನಾದ ಆ ಕುರುಬ ಭಯಂಕರ ರಾಜದ್ರೋಹಿ ಅವನನ್ನೊಮ್ಮೆ ಹಿಡಿದುಬಿಟ್ಟರೆ ಒಂದೆರಡು ಗಂಟೆಗಳಲ್ಲಿಯೇ ಅವನ ಇಹಜೀವನವನ್ನು ಮುಗಿಸಿಬಿಡಬಹುದು. ಅವನಿನ್ನೂ ನಮ್ಮ ಕಣ್ಣಿಗೆ ಇಂಗು ಹಚುತ್ತಿದ್ದಾನೆ. ಬರ್ನಾರ್ಡ್, ಇದಕ್ಕೆ ನೀವೇ ಹೊಣೆಗಾರರು! ನೀವು ಪೋಲಿಸ್ ಕಮಿಶನರರು, ನಿಮಗೆ ಅಮಿತ ಅಧಿಕಾರ ಕೊಟ್ಟಿದೆ ; ನಿಮ್ಮ ಅಧೀನದಲ್ಲಿ ಅಸಂಖ್ಯ ಗುಪ್ತಚರರಿದ್ದಾರೆ. ವಿದ್ರೋಹಿಗಳ ದಳಪತಿ ದೇಶದ ತುಂಬ ಹೇಗೆ ವಿಷವೃಕ್ಷದ ಬೀಜಗಳನ್ನು ಬಿತ್ತುತ್ತಿರುವನೆಂಬುದನ್ನು ನೀವು ಬಲ್ಲಿರಿ. ಆದರೂ ಅವನನ್ನು ಹಿಡಿಯುವುದು ನಿಮ್ಮಿಂದಾಗಲೊಲ್ಲದು. ಇಂದು ನಾಳೆ ಎಂದು ಸಮಯ ನೂಕುತ್ತಿರುವಿರಿ. ಶೀಘ್ರವೇ ಹಿಡಿಯುವೆನೆಂದು ಮತ್ತೆ ಮತ್ತೆ ಭರವಸೆ ಕೊಡುತ್ತಿರುವಿರಿ. ಈಗ ನನ್ನ ಸಿಂಹಾಸನ ಅಲುಗಾಡುತ್ತಿರುವುದು, ವಿಪತ್ತು ಕ್ರಮಶಃ ಘನೀಭೂತವಾಗಿ ಮೈಮೇಲೆ ಬರುತ್ತಿದೆ ಆದರೂ ಅವನು ಯಾರೆಂಬುದನ್ನು ಕೂಡ ನೀವು ಅರಿಯದೆ ಹೋಗಿರುವಿರಿ ; ಯಾರ ಮೇಲೆ ಸಂದೇಹ ಕೂಡ ನಿಮಗೆ ಉಂಟಾಗಿಲ್ಲ " ಎಂದ.

" ಯಾರ ಮೇಲೂ ಸಂದೇಹ ಕೂಡ ಉಂಟಾಗಿಲ್ಲವೆಂದು ಮಾತ್ರ ತಾವು ತಿಳಿಯಬೇಡಿರಿ. " ಗಂಭೀರ ಸ್ವರದಲ್ಲಿ ಬರ್ನಾರ್ಡ್ ಹೇಳಿದ.

"ಹಾಗಾದರೆ ಅವನನ್ನೇಕೆ ಹಿಡಿಯುವುದಿಲ್ಲ? ನೀವು ಉಚ್ಚ ಪೋಲಿಸ್ ಅಧಿಕಾರಿ, ಮರದ ಗೊಂಬೆಯಲ್ಲ. ಇನ್ನೂ ವರೆಗೆ ನಿಶ್ಚಿಂತರಾಗಿ ಕುಳಿತಿರಬೇಕೆ?" ಎಂದು ರಾಜ ಸಿಟ್ಟಿನಿಂದ ನುಡಿದ.

"ಇಲ್ಲ ಮಹಾರಾಜ, ನಾನು ಸ್ವಸ್ಥವಾಗಿ ಕುಳಿತಿಲ್ಲ. ವಿದ್ರೋಹಿಗಳ ದಳಪತಿಯನ್ನು ಹಿಡಿಯಲು ಪ್ರಯತ್ನಿಸಿದರೆ ಯಶಸ್ಸು ಸಿಕ್ಕೀತೋ ಇಲ್ಲವೋ ಸಂದೇಹ. ಆದರೆ ಇನ್ನು ಕೈಗಾಯಲು ಸಮಯವಿಲ್ಲವೆಂದು ನಾನು ಬಲ್ಲೆ. ನಾನು ಪ್ರತಿಜ್ಞೆ ಮಾಡುತ್ತೇನೆ– ಪಾರ್ಲಿಮೆಂಟು ಸೇರುವುದರೊಳಗೇ ಅವನನ್ನು ಬಂಧಿಸಲು ಪ್ರಯತ್ನಿಸುತ್ತೇನೆ."

ಜಾನ್ ಪಿಟರ್ಸ್ ಮೇಜಿನ ಮೇಲಿದ್ದ ಒಂದು ಕಾಗದದ ತುಂಡಿನಲ್ಲಿ ಮನುಷ್ಯನ ಮುಂಡವನ್ನು ಪೆನ್ಸಿಲಿನಿಂದ ಗೀಚುತ್ತಿದ್ದ. ತಗ್ಗಿದ ಮುಖವನ್ನು ಮೇಲೆತ್ತಿ ರಾಜನಿಗೆಂದ: "ನಮ್ಮ ಮಿತ್ರ ಬರ್ನಾರ್ಡರು ಈ ಸಲದ ಪ್ರಯತ್ನದಲ್ಲಿ ಗೆಲ್ಲಲೂ ಬಹುದು. ಆದರೆ ವಿದ್ರೋಹಿಗಳ ದಳಪತಿಯನ್ನು ಈಗ ಹಿಡಿಯುವುದರಿಂದ ಆಗುವ ಪ್ರಯೋಜನವೇನು? ಅವನು ಈಗಾಗಲೇ ಮಾಡಬೇಕಾದುದನ್ನೆಲ್ಲ ಮಾಡಿಬಿಟ್ಟಿದ್ದಾನೆ, ಇನ್ನು ಆಗಬೇಕಾದುದೇನೂ ಉಳಿದಿಲ್ಲವೆಂದು ತೋರುತ್ತದೆ. ಅವನನ್ನು ಹಿಡಿದರೆ ಅವನು ಆರಂಭಿಸಿದ ಕೆಲಸವೇನೂ ನಿಲ್ಲಲಾರದು; ಇನ್ನೆರಡು ವಾರಗಳಲ್ಲಿ ಈ ದೇಶದಲ್ಲಿ ಅವರು ಖಂಡಿತವಾಗಿ ಸಾಧಾರಣ ತಂತ್ರದ ಪ್ರತಿಷ್ಠೆ ಮಾಡುವರು."

"ಇದೇನು ಸುಲಭವಾದ ಮಾತೆ? ನನ್ನ ರಾಜ್ಯದಲ್ಲಿ ಸಾಧಾರಣ ತಂತ್ರ ಹೇಗೆ ಪ್ರತಿಷ್ಠಿತವಾಗುವುದೋ ನೋಡುತ್ತೇನೆ. ನಾನೆ ಪಾರ್ಲಿಮೆಂಟಿಗೆ ಹೋಗಿ ಸಭೆಯ ಸೂತ್ರಗಳನ್ನು ವಹಿಸುತ್ತೇನೆ; ನನ್ನ ಸಮಸ್ತ ಸೈನ್ಯವನ್ನೂ ಸಭಾಮಂದಿರದ ಹತ್ತಿರದಲ್ಲಿ ಅಣಿಮಾಡಿ ನಿಲ್ಲಿಸಿರುತ್ತೇನೆ; ಅವರೇನಾದರೂ ತಮ್ಮ ಮನಬಂದತೆ ನಡೆದರೆ ನಾನೂ ನನ್ನ ನಿಜರೂಪವನ್ನು ತೋರಿಸುತ್ತೇನೆ; ಸಾಧಾರಣ ತಂತ್ರ ಸ್ಥಾಪನೆಗೆ ಅನುಕೂಲವಾಗಿ ಮತ ಕೊಡುವವರನ್ನು ರಾಜದ್ರೋಹಿಗಳೆಂದು ಹಿಡಿಸುತ್ತೇನೆ; ಪಾರ್ಲಿಮೆಂಟನ್ನು ವಿಸರ್ಜಿಸಿ ಹೊಸ ಆಯಿಕೆಯನ್ನು ಆರಂಭಿಸುತ್ತೇನೆ."

“ದುರದೃಷ್ಟದಿಂದ ಆ ಸಮಯದಲ್ಲಿ ನಗರದೊಳಗೆ ಐವತ್ತು ಸಾವಿರ ಮಂದಿ ಪಾರ್ಲಿಮೆಂಟಿನ ಹೊಸ ರಾಜ್ಯಘಟನೆಯನ್ನು ಸಮರ್ಥಿಸಲು ಬಂದು ಸೇರಿರುವರು.” ಧೀರಭಾವದಿಂದ ಪಿಟರ್ಸ್ ನುಡಿದ.

ರಾಜನ ಮುಖದಲ್ಲಿ ಕೋಪದ ಕೆಂಪೇರಿತು. ಕೆಂಗಣ್ಣುಗಳಿಂದ ಬರ್ನಾರ್ಡನ ಕಡೆ ನೋಡುತ್ತ, “ಹಾಗಾದರೆ ನೀನೇನು ಮಾಡಬೇಕೆನ್ನುತ್ತೀ? ನಾನು ಮಾತನಾಡಿದ್ದಕ್ಕೆಲ್ಲಾ ತಪ್ಪು ತೆಗೆಯುತ್ತೀ! ನಿಮ್ಮ ಅಭಿಪ್ರಾಯ-ವೇನು ಹೇಳಿ, ಗ್ರೋಬಿನರ್” ಎಂದ.

“ಮಹಾರಾಜರ ಮತವೇ ನನ್ನ ಮತ. ಸಾಧಾರಣ ತಂತ್ರದ ಮಾತನಾಡುವರೆಲ್ಲಾ ಭಯಂಕರ ರಾಜದ್ರೋಹಿಗಳು ಅವರ ಯುಕ್ತಿ ತರ್ಕ-ಗಳೆಲ್ಲವೂ ರಾಜದ್ರೋಹದ ನಾಮಾಂತರವಷ್ಟೆ. ಸೇನಾಬಲದಿಂದ ನಾವು ರಾಜಸಿಂಹಾಸನವನ್ನು ರಕ್ಷಿಸುವೆವು.” ಸೇನಾಪತಿ ಗ್ರೋಬಿನರ್ ಸಂಭ್ರಮದಿಂದ ಹೇಳಿದ.

“ಭಲೆ! ಕೇಳಿದಿರಾ? ನಮ್ಮ ಸೇನಾಪತಿ ಹೇಳಿದ್ದನ್ನು ನೀವು ಕೇಳಿದಿರಾ?” ಆನಂದಿತನಾಗಿ ರಾಜನೆಂದ.

ಬರ್ನಾರ್ಡ್ ಸೇನಾಪತಿಯ ಕಡೆ ನೋಡಿ “ಸೇನಾಪತಿಗಳೇ, ನಿನ್ನೆ ರಾತ್ರಿ ವಿದ್ರೋಹಿಗಳ ಹಾವಳಿಯ ಸುದ್ದಿಯನ್ನು ಕೇಳಿದಾಕ್ಷಣ ಎರಡು ಸೇನಾದಳಗಳನ್ನು ಅರಮನೆಗೆ ಕಳಿಸುವುದಕ್ಕೆ ಸೇನಾನಿವಾಸಕ್ಕೆ ನಾವು ಫೋನ್ ಮಾಡಿದ್ದೆವಷ್ಟೆ?” ಎಂದ.

“ಹೌದು. ಅವರು ಸುದ್ದಿ ತಿಳಿದ ಹದಿನೈದು ನಿಮಿಷಗಳಲ್ಲಿಯೆ ಸಜ್ಜಾಗಿ ಅರಮನೆಯ ರಕ್ಷಣೆಗೆ ಹೊರಬಿದ್ದರು.” ಸೇನಾಪತಿಯೆಂದ.

“ದಳ ಎಂದರೆ ಸಾಮಾನ್ಯವಾಗಿ ಸಾವಿರ ಸೇನೆ;– ಸೇನಾನಿವಾಸ-ದಿಂದ ಹೊರಟ ಸೇನೆ ಎಷ್ಟು?” ಬರ್ನಾರ್ಡ್ ಪ್ರತಿಪ್ರಶ್ನೆ ಹಾಕಿದ.

“ಇದೆಲ್ಲ ನಿಮಗೇಕೆ, ಈ ವಿಷಯದಲ್ಲಿ ನಿಮಗೆ ಅಧಿಕಾರವಿಲ್ಲ. ಎಲ್ಲ ಸೈನಿಕರೂ ಬೀಡಾರದಲ್ಲಿಲ್ಲ, ಅನೇಕರು ಬಿಡುವು ಹೊಂದಿ ಮನೆಗೆ ಹೋಗಿ-ದ್ದಾರೆ” ಸೇನಾಪತಿ ರೇಗಿ ಮಾತನಾಡಿದ.

“ನಾನು ತಮ್ಮನ್ನು ಕೇಳಿದ್ದಿಷ್ಟೇ–ಎರಡು ಪಡೆಗಳಲ್ಲಿ ಅರಮನೆಯ

ರಕ್ಷಣೆಗೆ ಧಾವಿಸಿ ಬಂದ ಸೈನಿಕರು ಎಷ್ಟು ಮಂದಿ? ಎರಡೂವರೆ ನೂರ-ಕ್ಕಿಂತ ಹೆಚ್ಚಿರಲಿಲ್ಲ; ಇನ್ನೂ ಕಡಿಮೆಯೇ ಇದ್ದೀತು "

ಸೇನಾಪತಿಯ ತಲೆಗೆ ಕಾವೇರಿತು. "ನಿಮ್ಮ ಮಾತು ಸತ್ಯವಲ್ಲ; ನಾಸಿದನ್ನು ಪ್ರತಿಭಟಿಸುತ್ತೇನೆ." ಎಂದ.

ಬರ್ನಾರ್ಡ್ ಸಮಾಧಾನದಿಂದಲೇ ಉತ್ತರವಿತ್ತ: "ತಾವು ಪ್ರತಿ-ಭಟಿಸಬಹುದು; ಆದರೆ ನನ್ನ ಮಾತೊಂದೂ ಅತಿರಂಜಿತವಲ್ಲ. ನನಗೆನಿಸು-ತ್ತಿದೆ – ತಾವು ಅಜ್ಞಾನದ ಆತ್ಮವಿಶ್ವಾಸದಿಂದ ಮೋಸಹೋಗುತ್ತಿರಬಹುದು. ಇಲ್ಲವೆ ಮಹಾರಾಜರನ್ನು ವಂಚಿಸುವುದಕ್ಕೆ ಅವರೆದುರಿಗೆ ಸೈನ್ಯದ ಬಡಾಯಿ ಕೊಚ್ಚುತ್ತಿದ್ದೀರಿ."

"ಮಹಾರಾಜರಿಗೆ ಗೊತ್ತಿದೆ,— ಪೋಲಿಸ್ ಶಾಖೆಯ ಅಧಿಕಾರಿಯ ಮಾತಿಗಿಂತ ಸೈನ್ಯದ ಬಗ್ಗೆ ಸೇನಾಪತಿಯ ಮಾತೇ ಪ್ರಾಮಾಣಿಕವಾದದ್ದು. ಮತ್ತೂ ಹೇಳಿರುತ್ತೇನೆ, ನಮ್ಮ ಎಲ್ಲ ಸೈನಿಕರೂ ರಾಜನಿಷ್ಠರು. ರಾಜನನ್ನೂ ರಾಜ್ಯವನ್ನೂ ರಕ್ಷಿಸುವುದು ಅವರ ಜೀವನ ವ್ರತವಾಗಿದೆ; ಅವರು ಆ ವ್ರತ-ವನ್ನು ನಿಕರದಿಂದ ಪಾಲಿಸುವರು."

"ಬರ್ನಾರ್ಡ್, ಈ ಮಾತಿಗೆ ನೀವೇನೆನ್ನುವಿರಿ?" ರಾಜನು ಉತ್ಸಾ-ಹದಿಂದ ಕೇಳಿದ.

ಮರ್ಮಾಹತನಾದ ಬರ್ನಾರ್ಡ್ "ಇನ್ನೇನು ಹೇಳಲಿ? ಸಾವಿರ ಸೇನೆಯನ್ನು ಬೇಡಿದರೆ ಎರಡುವರೆ ನೂರನ್ನು ಪಡೆಯಲಿಲ್ಲ." ಎಂದಿಷ್ಟೆ ಉತ್ತರವಿತ್ತ.

"ಅಷ್ಟು ಜನ ಪುಂಡರನ್ನೋಡಿಸುವುದಕ್ಕೆ ಅಷ್ಟೇ ಸಾಕ. ಬಂದೂ-ಕಿನ ಸಪ್ಪಳಕ್ಕೇ ಓಡಿಹೋಗಿಬಿಟ್ಟರು, ಹೇಡಿಗಳು!" ರಾಜನೆಂದ.

ಈವರೆಗೆ ಪೋಲಿಸ್ ಕಮಿಶನರ ಮತ್ತು ಸೇನಾಪತಿಗಳ ವಾಗ್ವಿತಂಡ-ವನ್ನು ಕೇಳುತ್ತಿದ್ದ ಪಿಟರ್ಸ್, "ಅಶಿಕ್ಷಿತರು, ಯುದ್ಧವಿದ್ಯೆ ಅರಿಯದವರು ಎಂದೇ ಅವರು ಓಡಿಹೋದದ್ದು. ವಿಶೇಷವಾಗಿ, ತಮ್ಮ ಹಿರಿಮುದ್ದರಿ ಬಿದ್ದುದರಿಂದಲೇ ಅವರು ಎದೆಗುಂದಿದರು. ಇನ್ನು ಸ್ವಲ್ಪ ವಿಲಂಬವಾಗಿದ್ದರೆ, ಯುದ್ಧವಿದ್ಯೆಯನ್ನು ಬಲ್ಲ ನಾಗರಿಕರೂ ಬಂದು ಅವರನ್ನು ಕೂಡಿಕೊಳ್ಳಲು ಅವಕಾಶ ಸಿಕ್ಕಿದ್ದರೆ, ಪರಿಣಾಮ ಏನಾಗುತ್ತಿತ್ತೋ ಹೇಳವುದು ಕಠಿನ." ಎಂದ.

ರಾಜನೆಂದಃ "ನೀನು ದೊಡ್ಡ ಬುದ್ಧಿವಂತ! ನಿನ್ನ ಅಭಿಪ್ರಾಯವೇನು?"

"ನನ್ನ ಅಭಿಪ್ರಾಯ ತಮಗೆ ತಿಳಿದದ್ದೇ ಇರಬೇಕು. ದೇಶದ ಜನ ನಮ್ಮ ಒಳ್ಳೆಯ ಆಳಿಕೆಯಿಂದ ತಪ್ತರಾಗಿ ತ್ರಾಹಿ ತ್ರಾಹಿ ಎನ್ನುತ್ತಿದೆ. ಅದು ಅವರ ತಪ್ಪೆಂದು ಎನಿಸುವುದಿಲ್ಲ. ಮಹಾರಾಜರ ಒಪ್ಪಿಗೆಯಿದ್ದರೆ, ನನ್ನ ಮಾತನ್ನು ಸರಲಭಾವದಿಂದ ಹೇಳಬಹುದು."

"ಹೇಳು."

"ಮಹಾರಾಜರು ಇಪ್ಪತ್ತು ವರ್ಷಗಳಿಂದ ರಾಜ್ಯವಾಳುತ್ತಿದ್ದೀರಿ. ತಮ್ಮ ವಿಲಾಸದ ವೆಚ್ಚದ ಹೊರೆಯನ್ನು ಹೊತ್ತುಹೊತ್ತು ನಾಡು ಬಡವಾಗಿದೆ. ತಾವು ಅನ್ಯಾಯ್ಯವಾದ ಉಪಾಯಗಳಿಂದ ಬಹಳ ಹಣ ಕೂಡಿಸಿದ್ದೀರಿ. ಅದರಿಂದ ಇಡೀ ಯುರೋಪದಲ್ಲಿ ತಮಗೆ ಕೆಟ್ಟ ಹೆಸರು ಬಂದಿದೆ. ಆದರೆ ಅಷ್ಟಕ್ಕೇ ತಮಗೆ ತಣಿವಿಲ್ಲ. ನಿರ್ವಿಣ್ಣರಾದ ಪ್ರಜೆಗಳನ್ನು ಇನ್ನೂ ಹಿಂಡಿ ಹಿಂಡಿ ಹಿಪ್ಪೆ ಮಾಡುತ್ತಿದ್ದೀರಿ. ಎಷ್ಟಾದರೂ ತಮ್ಮ ಹಸಿವು ಹಿಂಗದು, ಮತ್ತೂ ಮತ್ತೂ ಕೊಡಿರಿ ಕೊಡಿರಿ ಎಂಬ ಶಬ್ದ ಇದ್ದದ್ದೇ. ತಮ್ಮಿಂದ ಯಾರಿಗೂ ಸಹಾಯವಿಲ್ಲ. ತಮ್ಮ ದುಶ್ಚರಿತ್ರೆಯಿಂದ ಎಲ್ಲರೂ ಕ್ಷುಬ್ಧರಾಗಿದ್ದಾರೆ. ದೇಶದ ಉತ್ಪತ್ತಿಯ ಕಾರ್ಯದಲ್ಲಿ ತಮಗೆ ಕೊಂಚವಾದರೂ ಸಹಾನುಭೂತಿಯಿಲ್ಲ ಒಂದಿಲ್ಲೊಂದು ದೌರ್ಬಲ್ಯ ಪ್ರತಿಯೊಬ್ಬರಲ್ಲಿಯು ಇರುತ್ತ ; ಆದರೆ ತಮ್ಮ ಕಲಂಕವನ್ನು ಮುಚ್ಚಿಕೊಳ್ಳುವುದು ತಮಗೆ ಗೊತ್ತಿಲ್ಲ, ಅಥವಾ ಅದು ಅಗತ್ಯವೆಂದೆನಿಸುತ್ತಿಲ್ಲ. ಅದಕ್ಕೇ ಜನಕ್ಕೆ ತಾವೆಂದರೆ ಸೇರಿಕೆಯಿಲ್ಲ ನನ್ನನ್ನು ಕೇಳುವುದಾದರೆ ಪಾರ್ಲಿಮೆಂಟು ಸಾಧಾರಣತಂತ್ರವನ್ನು ಪ್ರತಿಷ್ಠಿಸಿದರೆ, ತಾವದಕ್ಕೆ ತಡೆಯೊಡ್ಡದಿರುವುದೇ ಒಳ್ಳೇದು."

ಪಿಟರ್ಸನ ವ್ಯಾಖ್ಯಾನವನ್ನು ಕೇಳಿ ಅರಸನಿಗೆ ಬ್ರಹ್ಮಾಂಡ ಸಿಟ್ಟು ಬಂದಿತು. ಅವನು ಗುಡುಗಿದ: "ಕೈಯೊಳಗೆ ಇಷ್ಟು ಸೈನ್ಯವಿರಲಿಕ್ಕೂ, ಪ್ರಬಲನಾದ ಜರ್ಮನ್ ದೊರೆಯ ನೆರವು ಸಿಕ್ಕುತ್ತಿರಲಿಕ್ಕೂ ನಾನು ಪ್ರಜೆಗಳ ಅಪ್ಪಣೆಗೆ ತಲೆಬಗ್ಗಿಸಿ, ಪ್ರತಿವಾದಿಸದೆ ಸಿಂಹಾಸನವನ್ನು ಬಿಟ್ಟುಬಿಡಲೆ ? ಇದೇ ಏನು ನಿನ್ನ ಸೂಕ್ತ ಸಲಹೆ!"

"ಹೌದು ಮಹಾರಾಜ, ಈ ಸಲಹೆಯನ್ನು ತಾವು ತಳ್ಳುವ ಹಟಕ್ಕೆ ಬಿದ್ದರೆ ಯಾವ ಲಾಭದ ಆಶೆಯೂ ಇಲ್ಲ. ನಾವು ಪ್ರಜೆಗಳ ಸಂಕಲ್ಪಕ್ಕೆ ಅಡ್ಡ

ಯೊಡ್ಡಿದರೆ ಅವರೆಲ್ಲರಿಗೂ ನಮ್ಮ ನೆತ್ತರವನ್ನು ಹರಿಸುವ ಹಂಬಲವೇ ಹೆಚ್ಚಾಗಿದೀತು. ಆಗ ನಮಗೆ ಜೀವ ಉಳಿಸಿಕೊಳ್ಳುವುದೇ ಕಠಿನವಾದೀತು. ಬಾಡಿಗೆಯ ಸೈನಿಕರ ಸಹಾಯವನ್ನು ಪಡೆದರೂ ಪಾರಾಗುವ ಆಸೆಯಿಲ್ಲ; ಹಗೆಗಳಿಂದ ಹತರಾಗುವುದು ಖಂಡಿತ. ಸುಮ್ಮನೆ ಸಾಯುವುದೇಕೆ ? ತಾವು ವಿಪುಲ ಧನ ಸಂಗ್ರಹಿಸಿದ್ದೀರಿ, ಈ ಪ್ರಾಯದಲ್ಲಿ ಸಾಯಲು ನನಗೂ ಮನಸಿಲ್ಲ. ಬದುಕಿದ್ದರೆ ಎಷ್ಟೋ ಸೊಗಸನ್ನು ಸೂರೆಗೊಳ್ಳಬಹುದು. ನಾವು ರಾಜ್ಯವನ್ನು ತೊರೆಯಲೇ ಬೇಕಾಗುವುದು. ದಬ್ಬಿಸಿಕೊಳ್ಳುವ ಮೊದಲೇ ನಾವಾಗಿ ಹೋಗುವುದು ನೆಟ್ಟಗೆ.” ಎಂದ ಪಿಟರ್ಸ್.

“ ತಮ್ಮಾ, ನೀನು ಹೆಣ್ಣು ಹೇಡಿಯಂತೆ ಮಾತಾಡುತ್ತಿದ್ದೀ ! ” ರಾಜನು ಗರ್ಜಿಸಿದ.

“ ಇಲ್ಲ, ನಾನು ವಿವೇಕಿಯಂತೆ ಮಾತನಾಡುತ್ತಿದ್ದೇನೆ. ಈ ಹೊತ್ತಿನಲ್ಲಿ ಏನು ಮಾಡುವುದು ಸಂಗತವೋ ಅದನ್ನೇ ಹೇಳುತ್ತಿದ್ದೇನೆ ”

ಅತಿಕೋಪದಿಂದ ರಾಜನ ಶರೀರ ನಡುಗತೊಡಗಿತು. ಎದ್ದು ನಿಂತು ಆನನೆಂದ : “ ನೀನು ಮಗನಾಗಿಯೂ ನನ್ನ ಆಚರಣೆಯನ್ನು ವಿಮರ್ಶಿಸುವೆಯಾ ? ಚರಿತ್ರಹೀನನೆಂದು ನನ್ನನ್ನು ತಿರಸ್ಕರಿಸುವೆಯಾ ? ನಮ್ಮ ಕುಲದಲ್ಲಿ ನಿನ್ನಂಥ ಏಳರಲ್ಲಿ ಹುಟ್ಟಿದವರು ಯಾರೂ ಇಲ್ಲ ; ನಮ್ಮ ಕುಲಕ್ಕೆ ಹೀಗೆ ಯಾರೂ ಮಸಿ ಬಳಿದಿಲ್ಲ. ನಿನ್ನಲ್ಲಿ ಎಷ್ಟು ದುರ್ವ್ಯಸನಗಳಿವೆಯೆಂದು ನೀನರಿಯೆಯಾ ? ಎಂಥ ನಿರ್ಲಜ್ಜ ನೀನು— ವೇಶ್ಯೆಯೊಂದಿಗೆ ಏಕಾಸನದಲ್ಲಿ ಕುಳಿತು ಭಾವಚಿತ್ರ ತೆಗೆಸಿಕೊಳ್ಳುತ್ತೀ ; ಆ ಭಾವಚಿತ್ರಗಳು ಪೇಟೆಯ ಅಂಗಡಿಗಳಲ್ಲಿ ಮಾರುತ್ತಿವೆ. ಇದಕ್ಕಿಂತ ಹೆಚ್ಚಿನ ಕಲಂಕ ಇನ್ನು ಯಾವುದು ? ನೀನು ಈ ರಾಜ್ಯದ ಯುವರಾಜ, ನಾಳೆ ನಾನು ಕಣ್ಣು ಮುಚ್ಚಿದೆನೆಂದರೆ ನೀನು ರಾಜಸಿಂಹಾಸನವನ್ನೇರುವವನು. ಕೀಳುಜನರ ಕೂಟಗಳಲ್ಲಿ, ಭೋಜನಾಲಯಗಳಲ್ಲಿ, ವೇಶ್ಯಾಭವನಗಳಲ್ಲಿ, ಯಾರು ಬೇಕಾದವರೊಡನೆ ನೀನು ವಿಲಾಸಲೋಲನಾಗಿರುವುದು ಚೆಂದವೆ ? ಎಲ್ಲ ಗಲಭೆಗೂ ನೀನೇ ಮೂಲ. ನಿನ್ನಿಂದಲೇ ನಮಗಿಂಥ ಸಂಕಟ ಬಂದದ್ದು.”

ರಾಜನಿಗೆ ಮಾತಾಡಿ ತೇಕುಹತ್ತಿತು. ಅವನು ಕುರ್ಚಿಯಲ್ಲಿ ಕುಳಿತ. ಈ ಕಠೋರ ತಿರಸ್ಕಾರದಿಂದ ಪಿಟರ್ಸ್ ಕಿಂಚಿತ್ತೂ ವಿಚಲಿತನಾಗಲಿಲ್ಲ.

"ಹಾಗಾದರೆ ಸ್ವೇಚ್ಛೆಯಿಂದ ಸಿಂಹಾಸನವನ್ನು ಬಿಡಲು ತಮ್ಮ ಮನಸಿಲ್ಲವೆ?" ಎಂದು ಕೇಳಿದ.

"ಖಂಡಿತ ಇಲ್ಲ. ಪ್ರಜೆಗಳು ಏನು ಸಾಧ್ಯವೊ ಅದನ್ನು ಮಾಡಿಕೊಳ್ಳಲಿ. ನನ್ನ ಪ್ರಾಣ ಹೋದಾಗಲೇ ಸಿಂಹಾಸನ ಹೋದೀತು." ಎಂದ ರಾಜ.

೨೩

"ಈ ತರಲಮತಿಗಳಾದ ವಿಪ್ಲವವಾದಿಗಳ ಗುಂಪಿನಲ್ಲಿ ನಾನು ಹೇಗೆ ಸೇರಿದೆನೆಂಬುದನ್ನು ತಾವು ತಿಳಿಯಬೇಕೆನ್ನುವಿರಲ್ಲವೆ? ಅದನ್ನೀಗ ತಮಗೆ ಹೇಳುತ್ತೇನೆ." ಎಂದಳು ಗ್ರೇಸ್ ಪೆನಿಸರ್.

"ಒಂದಿಷ್ಟು ಬೇಗನೆ ಹೇಳಿ ಮುಗಿಸಬೇಕು, ನನಗೆ ಬಹಳ ಅಗತ್ಯದ ಕೆಲಸವಿದೆ." ಎಂದ ಜಾನ್ ಪಿಟರ್ಸ್.

ಅವರಿಬ್ಬರೂ ಏಕಾಂತದ ಕೋಣೆಯೊಂದರಲ್ಲಿ ಮಾತನಾಡುತ್ತ ಕುಳಿತ್ತಿದ್ದರು.

"ಏನು?" ಗ್ರೇಸ್ ಪ್ರಶ್ನಿಸಿದಳು.

"ವೈಯಕ್ತಿಕವಿಷಯ. ನೀನು ಮೊದಲು ಹೇಳು. ನಾನು ಹಿಂದುಗಡೆ ಹೇಳುತ್ತೇನೆ." ಎಂದ ಪಿಟರ್ಸ್.

"ನನ್ನ ಕಥೆ ಚುಟಕದಲ್ಲಿಯೆ ಮುಗಿಯುವುದು. ನಾನು ಕಾಲೇಜಿನಲ್ಲಿ ಓದುತ್ತಿದ್ದಾಗ ಸಮಾಜವಿಜ್ಞಾನ ನನ್ನ ಆನರ್ಸ್ ವಿಷಯವಾಗಿತ್ತು. ಆದರಿಂದಲೇ ಹಲವು ಹೊಸ ಹೊಸ ವಿಚಾರಗಳು ನನ್ನ ತಲೆಯಲ್ಲಿ ತುಂಬಿಕೊಂಡಿರಬೇಕು. ಅವರ ಫಲವಾಗಿ ಕೊನೆಗೆ ನಾನು ಸೋಶಾಲಿಸ್ಟ್ ಮಂತ್ರದೀಕ್ಷೆ ಪಡೆದೆ. ಆಗ ನನಗೆ ಯಾವ ದುರ್ವಿಚಾರವೂ ಇರಲಿಲ್ಲ. ಯಾವುದೇ ಜಾತಿಯ ಪ್ರತಿಯೊಂದು ವ್ಯಕ್ತಿಗೂ ವ್ಯಕ್ತಿಗತವಾದ ಮಾನವ್ಯದ ಹಕ್ಕಿರುತ್ತದೆ, ಆ ಹಕ್ಕಿನ ರಕ್ಷಣೆಗಾಗಿ ಹೋರಾಡುವುದು ಪ್ರತಿಯೊಬ್ಬನ ಕರ್ತವ್ಯವೆಂದು ನಾನು ಪ್ರಾಮಾಣಿಕವಾಗಿ ನಂಬಿದ್ದೆ. ಕಾಲೇಜಿನಲ್ಲಿ ಪ್ರಾಧ್ಯಾಪಕರು ಮಾಡುತ್ತಿದ್ದ ವ್ಯಾಖ್ಯಾನಗಳಲ್ಲೆಲ್ಲ, ನಿಮ್ಮ ದೇಶದ ಕೆಟ್ಟ ಆಳಿಕೆಯೂ ಒಂದು ಅಧ್ಯಯನದ ವಿಷಯವಾಗಿತ್ತು."

"ಇದು ನಮ್ಮ ಕಕ್ಷನ ಕುಖ್ಯಾತಿಯ ನಿದರ್ಶನ. ಆಯ್ತು, ಆಮೇಲೆ?"

ಗ್ರೇಸ್ ಮತ್ತೆ ಮುಂದುವರಿಸಿದಳು : "ಮುಂದೆ ನಾನು ಅಮೇರಿಕೆಯಿಂದ ಯುರೋಪಿಗೆ ಬಂದೆ. ಇಂಗ್ಲಂಡಿನ ಅನೇಕ ಪ್ರತಿಷ್ಠಿತರ ಹೆಸರಿನಲ್ಲಿ ಪತ್ರಗಳನ್ನು ತಂದಿದ್ದೆ. ಅವರೆಲ್ಲರ ನಾಮಾವಳಿಯಿಂದ ತಮ್ಮ ಹೊತ್ತನ್ನು ಹಾಳುಮಾಡುವುದಿಲ್ಲ. ತಮಗೆ ಬೇಸರವನ್ನೂ ಕೊಡುವುದಿಲ್ಲ. ಒಮ್ಮೆ ಇಂಗ್ಲಂಡಿನ ದೊಡ್ಡ ಮನುಷ್ಯರೊಂದಿಗೆ ಮಾತನಾಡುತ್ತ ಕುಳಿತಿದ್ದೆ. ಹಲವಾರು ವಿಷಯಗಳ ಚರ್ಚೆ ನಡೆಯಿತು. ನನ್ನ ರಾಜನೈತಿಕ ವಿಚಾರಗಳನ್ನು ಕೇಳಿಕೊಂಡ ಬಳಿಕ ಅವರು 'ನೀನು ನಿನ್ನ ವಿಶ್ವಾಸಾನುಸಾರವಾಗಿ ಕೆಲಸ ಮಾಡಲು ಸಿದ್ಧಳಿದ್ದೀಯಾ?' ಎಂದು ಕೇಳಿದರು. ನಾನು ಹೂಂ ಎಂದೆ. 'ಯುರೋಪದ ಪ್ರತಿಯೊಂದು ರಾಜಧಾನಿಯಲ್ಲಿಯೂ ಗುಪ್ತಸಮಿತಿಯ ಶಾಖೆಗಳಿವೆ. ಅಧಿಕಾರದರ್ಪದಿಂದ ಕುರುಡರಾಗಿ ಜನಸಾಮಾನ್ಯರ ಏಳಿಗೆಯನ್ನು ಬಗ್ಗುಬಡಿಯುವ ಜನರನ್ನು ಪ್ರಪಂಚದಿಂದ ಹೊರದಬ್ಬುವುದೇ ಈ ಸಮಿತಿಯ ಉದ್ದೇಶ, ಎಂದು ಅವರು ಹೇಳಿದರು. ಇಂಗ್ಲಂಡಿನ ಶಾಖೆಯ ನಾಯಕನ ಹೆಸರನ್ನೂ ತಿಳಿಸಿದರು. ಆ ಹೆಸರೂ ಸಮಿತಿಯ ಬಗ್ಗೆ ನನ್ನಲ್ಲಿ ಶ್ರದ್ಧೆ ಹುಟ್ಟುವುದಕ್ಕೆ ಕಾರಣವಾಯಿತು. ಆ ವ್ಯಕ್ತಿ ಒಬ್ಬ ಮಹಾಧನವಂತ ವ್ಯಾಪಾರಿ. ಆತ ರಾಡಿಕಲ್ ಸಂಪ್ರದಾಯದವ. ಆತನ ರಾಜಕೀಯ ವಿಚಾರಗಳು ಧಾರಾಳವಾದುವು, ಚರಿತ್ರವೂ ಕಲಂಕರಹಿತ. ಆ ಸಂಪ್ರದಾಯದ ಕಾರ್ಯದಲ್ಲಿ ನನ್ನ ಕೈಲಾದ ನೆರವನ್ನೀಯಲು ನಾನೊಪ್ಪಿದೆ. ಆದರೆ ಮುಂದೆ ಕೆಲದಿನ ಅದರ ಬಗ್ಗೆ ಯಾವ ಸುದ್ದಿಯೂ ನನಗಿರಲಿಲ್ಲ. ಬಳಿಕ ನೀವು ಇಂಗ್ಲಂಡಿಗೆ ಬಂದಾಗ ನಿಮ್ಮ ಗುರುತಾಗಿ ಸಂಬಂಧ ಬೆಳೆಯಿತು. ಆ ಅವಧಿಯಲ್ಲಿ ಆ ಗುಪ್ತಸಮಿತಿಯ ನಾಯಕ, ಮನುಷ್ಯಜಾತಿಯ ಮಂಗಲಕ್ಕಾಗಿ ನಿಮ್ಮನ್ನು ಕೊಲ್ಲುವುದು ಅಗತ್ಯವೆಂದು ತಿಳಿಸಿದ; ಆ ಕೆಲಸದಲ್ಲಿ ನನ್ನ ನೆರವನ್ನೂ ಕೋರಿದ. ಅದಕ್ಕೆ ನಾನು ಒಪ್ಪಲಿಲ್ಲ 'ಮಾನವಜಾತಿಯ ಮೇಲ್ಮೆಯನ್ನು ಸಾಧಿಸುವುದಿದ್ದರೆ, ಗುಪ್ತಹತ್ಯೆಯಿಂದ ಅದು ಸಫಲವಾಗಲಾರದು; ಮಾನವನ ಜೀವನ ಅಷ್ಟು ತುಚ್ಛವಲ್ಲ, ಅದನ್ನು ನಷ್ಟಗೊಳಿಸುವುದು ಪಾಪವೆಂದು ನನ್ನ ಭಾವನೆ' ಎಂದು ಹೇಳಿದೆ. ನನ್ನ ಮಾತಿನಿಂದ ಆತ ಖಿನ್ನನಾದಂತೆ ತೋರಿತು; ಆದರೆ ತನ್ನ ಸಂಕಲ್ಪವನ್ನು ಮಾತ್ರ ಬಿಡಲಿಲ್ಲ. ಕೆಲದಿನಗಳ ತರುವಾಯ ಆತ ಮತ್ತೆ ನನ್ನ ಕಡೆ ಬಂದು 'ನಾಳೆ

ರಾತ್ರಿ ನೀವು ನನ್ನ ಮನೆಗೆ ಬರುತ್ತೀರೇನು?' ಎಂದು ನನ್ನನ್ನು ಕೇಳಿದ. ಏನೆಂದು ಉತ್ತರಕೊಡಬೇಕೆಂದು ನಾನು ಯೋಚನೆಗೀಡಾದೆ. ನನ್ನ ಮುಂಗಾಣದ ಅವಸ್ಥೆಯನ್ನು ಕಂಡು ನೀವು ನನ್ನ ಮನೆಗೆ ನಿಶ್ಚಯವಾಗಿ ಬರುವಿರೆಂದು ಆತ ತಿಳಿದುಕೊಂಡ. ಬಂದರೆ ನಿಮ್ಮೊಡನೆ ಮಾತುಕತೆಯನ್ನು ಬೆಳೆಯಿಸಿ ಹೆಚ್ಚುಹೊತ್ತು ನಿಮ್ಮನ್ನು ನಮ್ಮ ಮನೆಯಲ್ಲಿ ತಡೆಹಿಡಿಯಬೇಕೆಂದು ನನಗೆ ಹೇಳಿದ. ಏತಕ್ಕೆಂಬುದನ್ನು ಹೇಳಲಿಲ್ಲ; ನನಗೂ ತಿಳಿಯಲಿಲ್ಲ. ಆದರೆ ಆತ ಸೂಚಿಸಿದ ನಿರ್ದಿಷ್ಟ ಸಮಯದ ವರೆಗೆ ನೀವು ನಮ್ಮಲ್ಲಿದ್ದರೆ ನಿಮಗೆ ಒಳಿತಾಗದೆಂದು ನನಗೆ ಸಂದೇಹವುಂಟಾಯಿತು ನಾನೇನೋ ನಿಮ್ಮನ್ನು ಆ ಸಮಯದೊಳಗಾಗಿಯೇ ಬೀಳ್ಕೊಟ್ಟೆ ಆದರೆ ನನ್ನ ಗಡಿಯಾಳದಿಂದ ಮೋಸವಾಯಿತು. ಅದು ಬಂದಾಗಿಬಿಟ್ಟದ್ದು ಗೊತ್ತೇ ಇರಲಿಲ್ಲ. ನೀವು ಮನೆಯಿಂದ ಹೊಗಬಿದ್ದ ಮೇಲೆ ಗೊತ್ತಾಯಿತು—ನಾಯಕ ತಿಳಿಸಿದ ನಿರ್ದಿಷ್ಟ ಸಮಯಕ್ಕೇ ನೀವು ಹೊರಬಿದ್ದಿರಿ!"

"ನನಗೆ ಕೇಡುಂಟೆಂದು ಮೊದಲೇ ತಿಳಿದಿದ್ದರೆ ನೀನು ನನ್ನನ್ನು ಎಚ್ಚರಿಸುತ್ತಿದ್ದೆಯಾ?" ಎಂದು ಪಿಟರ್ಸ್ ಪ್ರಶ್ನಿಸಿದ.

"ಅದನ್ನು ಕೇಳಬೇಡಿ. ಆಗ ನಿಮ್ಮ ವಿಷಯ ನನಗೆ ಹೆಚ್ಚಾಗಿ ತಿಳಿದಿರಲಿಲ್ಲ. ಜನರ ಬಾಯಿಂದ ನಿಮ್ಮ ಬಗ್ಗೆ ಎಷ್ಟೋ ಕೇಳಿದ್ದೆ. ಆದರಿಂದ ನೀವೊಬ್ಬ ನರರಕ್ಕಸರು, ಮಾನವ-ಜಾತಿಯ ಮಹಾವೈರಿ, ದೇಶದ ಅಕಲ್ಯಾಣವೇ ನಿಮ್ಮ ಜೀವನದ ವೃತ್ತ ಎಂದು ನನ್ನ ಭಾವನೆಯಾಗಿತ್ತು. ದುರದೃಷ್ಟದಿಂದ ನಾನದನ್ನು ನಂಬಿಯೂ ಇದ್ದೆ. ಸಮಿತಿಯ ಸದಸ್ಯರು ನಿಮ್ಮನ್ನು ಸೆರೆಯಲ್ಲಿಡಬಹುದು,—ನಿಮ್ಮಿಂದ ಜನಕ್ಕೆ ಅಹಿತವಾಗದ ಹಾಗೆ ಏನಾದರೂ ವ್ಯವಸ್ಥೆ ಮಾಡಬಹುದು,—ಎಂದೇ ನನಗೆನಿಸಿತ್ತು, ಆಗ. ಗುಪ್ತಹತ್ಯೆಯನ್ನು ನಾನು ಅನುಮೋದಿಸುವುದಿಲ್ಲ; ನಿಮ್ಮನ್ನು ಆರೀತಿ ಕೊಲ್ಲುವ ಯತ್ನ ನಡೆದೀತೆಂದು ತಿಳಿದಿದ್ದರೆ, ನನ್ನಿಂದವರಿಗೆ ಪ್ರೋತ್ಸಾಹ ಸಿಕ್ಕುತ್ತಿರಲಿಲ್ಲ."

"ಈಗ ನೀನು ಇಲ್ಲಿಗೆ ಬಂದದ್ದೇಕೆ?"

"ಒಂದು ಗುಪ್ತಸಂದೇಶ ತಂದಿದ್ದೇನೆ. ನಿಮ್ಮ ಹಗೆಗಳ ಒಡೆಯನಿಗೆ. ನಾನು ಅವನಿಗೆ ಯಥಾಶಕ್ತಿ ನೆರವು ನೀಡಬೇಕೆಂದು ಆಜ್ಞಪ್ತಳಾಗಿದ್ದೇನೆ.

ಆದರೆ ಇದುತನಕ ಆ ಮನುಷ್ಯನ ದರ್ಶನವೇ ಇಲ್ಲದೆ ಅತ್ಯಂತ ವಿಸ್ಮಿತಳಾಗಿದ್ದೇನೆ."

"ನಿಮ್ಮ ದಳದ ಆ ನಾಲ್ವರಬಗ್ಗೆ ನಾನು ಪೋಲಿಸರಲ್ಲಿ ದೂರಿಕೊಂಡ್ಡರೆ ನಿಮಗೆ ಗಂಡಾಂತರವಿರಲಿಲ್ಲವೆ ?"

"ಇಲ್ಲ, ಅವರೆಲ್ಲರೂ ಬಹು ಜಾಗ್ರತರು. ಅವರ ಅಪರಾಧ ಸಪ್ರಮಾಣವಾಗಿ ಸಿದ್ಧವಾಗುವುದು ಅಸಂಭವ."

"ಸುಂದರಿ, ನೀನಿವರ ಜೊತೆಯನ್ನು ಬಿಟ್ಟುಬಿಡು. ಇದರಲ್ಲಿ ವಿಪತ್ತು ನಿಶ್ಚಿತ. ಸುಮ್ಮನೆ ಸಂಕಟವನ್ನು ಮೈಮೇಲೆ ಹಾಕಿಕೊಳ್ಳುವುದರಲ್ಲಿ ಏನರ್ಥವಿದೆ ?"

"ಅಂಥ ಭಯವೇನೂ ಇಲ್ಲ. ಹಠಾತ್ ಸಂಕಟಕ್ಕೀಡಾಗುವಂತಹ ಯಾವ ದುಷ್ಕರ್ಮವನ್ನೂ ನಾನು ಮಾಡಲು ಹೊರಟಿಲ್ಲ. ಏನಾಗುವುದು ಆಗುತ್ತದೆ–ನಗರದ ಸುದ್ದಿಯೇನು ಹೇಳಿ. ಯಾವ ಗಲಭೆಯೂ ಇಲ್ಲವಷ್ಟೆ ?"

"ಇಲ್ಲ. ಈಗೆಲ್ಲವೂ ನಿಶ್ಚಿಂತವಾಗಿದೆ. ಆದರೆ ಪಾರ್ಲಿಮೆಂಟಿನ ಸಭೆ ಸೇರುವ ಹೊತ್ತಿಗೆ ದೊಡ್ಡ ಕೋಲಾಹಲವಾದೀತು, ಸಂದೇಹವಿಲ್ಲ. ಅದು ಸಹಜವಾಗಿ ಶಾಂತವಾದೀತೆಂದು ನನಗಂತೂ ತೋರುವುದಿಲ್ಲ"

"ಏಕೆ ಶಾಂತವಾಗುವುದಿಲ್ಲ ?"

"ನಮ್ಮ ಕಕ್ಕನ ತಿಳಿಗೇಡಿತನದಿಂದ ನಮ್ಮ ಬುದ್ಧಿವಾದ ... ವುದೂ ಆತನಿಗೆ ನಾಟಲಿಲ್ಲ. ಬೇಕಾದರೆ ಯುದ್ಧವನ್ನಾದರೂ ಮಾಡುತ್ತೇನೆ, ರಾಜ್ಯವನ್ನು ಸುಮ್ಮನೆ ಬಿಡುವುದಿಲ್ಲ ಎನ್ನುತ್ತಾನೆ. ದಂಡಿನಲ್ಲಿ ಅತೀವ ವಿಶ್ವಾಸ ಆತನಿಗೆ. ಇದಕ್ಕೂ ದುಃಖದ ವಿಷಯವೆಂದರೆ, ಕಕ್ಕ ತನ್ನ ನೆರವಿಗಾಗಿ ಜರ್ಮನಿಯನ್ನು ಕರೆಯುತ್ತಿದ್ದಾನೆ."

"ಈ ಬಗ್ಗೆ ನೀವು ಅವರೊಡನೆ ವಾದವಿವಾದ ಮಾಡಿದಿರೇನು ?"

"ಆತನೊಡನೆ ಹಾಕಿಯಾಡಿ ಹಾಕಿಯಾಡಿ ನನಗೆ ತಲೆಚಿಟ್ಟು ಹಿಡಿದಿದೆ. ಗದ್ದುಗೆಯನ್ನು ಬಿಡಲಿಕ್ಕೆ ಆತ ಸಿದ್ಧನಿಲ್ಲವಾದರೂ ಜೀವದ ಸುತ್ತ ಬಂದಾಗ ಏನು ಮಾಡುವನೋ ಹೇಳಲಿಕ್ಕಾಗದು."

"ನೀವು ಜರ್ಮನಿಯ ಸಹಾಯ ತೆಗೆದುಕೊಂಡರೆ, ಸೆರಗಿಗೆ ಗಂಟು ಹಾಕಿಕೊಳ್ಳಿರಿ–ಬರ್ಜಿಲಂಡಿನ ಸ್ವಾತಂತ್ರ್ಯ ಇಂದಿಗೇ ಮುಗಿದಂತೆ."

" ಜರ್ಮನಿ ಈ ಮನೆಜಗಳದಲ್ಲಿ ಕೈಹಾಕಿದರೆ, ಪ್ರಜೆಗಳು ಇಂಗ್ಲೆಂಡ್ ಫ್ರಾನ್ಸುಗಳಿಗೆ ವೋಡಿಹೋಗುವರು."

"ಮಾತನ್ನು ಕೇಳಿದರೆ ನೀವು ಸಾಧಾರಣತಂತ್ರದ ಪಕ್ಷಪಾತಿಗಳೆಂದೆನಿಸುತ್ತಿದೆ."

" ಹಾಗೂ ಇರಬಹುದು. ನಮ್ಮ ವಂಶ ಪದಚ್ಯುತವಾದರೆ ನಾನು ಆಕ್ಷೇಪಿಸುವುದಕ್ಕೆ ಕಾರಣವಿಲ್ಲ. ನನ್ನ ಮಾತನ್ನು ನೀವು ನಂಬುತ್ತೀರೋ ಇಲ್ಲವೋ ತಿಳಿಯದು. ಏಕೆಂದರೆ ಯುರೋಪಿನಲ್ಲಿ ಎಲ್ಲೆಲ್ಲಿಯೂ ಹಬ್ಬಿದ ನನ್ನ ಕೀರ್ತಿಯ ಪ್ರಭಾವ ಅಂಥದು."

" ಅದನ್ನೆಲ್ಲ ನಾನು ಕೇಳಿದ್ದೇನೆ. ಆದರೆ ನಿನ್ನೆ ರಾತ್ರಿ ನೀವು ತೋರಿಸಿದ ಶೂರತನವನ್ನು ಕಂಡು ನಿಮ್ಮ ಬಗ್ಗೆ ಹರಡಿದ ದುರಭಿಪ್ರಾಯ ಸುಳ್ಳೆಂದು ನನಗೆ ಖಂಡಿತ ಎನಿಸಿಬಿಟ್ಟಿದೆ. ವೀರಪುರುಷರು ಎಂದಿಗೂ ಇಂಥ ಚರಿತ್ರಹೀನರಿರುವ ಸಂಭವವಿಲ್ಲ. ನಿಮ್ಮ ಕಲಂಕ ಶೀಘ್ರವೇ ಅಳಿಸಿಹೋಗುವುದೆಂದು ನನ್ನಾಸೆ. ಈ ಅಪವಾದವನ್ನು ತೊಡೆದು ಹಾಕಲು ನೀವು ಯತ್ನಿಸುವುದಿಲ್ಲವೆ?"

" ಯತ್ನಿಸುತ್ತೇನೆ. ಸರಿ, ಇಂದು ಇಷ್ಟಕ್ಕೆ ಮುಗಿಸುವಾ. ನಾಳೆ ಮತ್ತೆ ಬರುತ್ತೀಯಾ ? "

ಈ ಮಾತಿಗೆ ಉತ್ತರವನ್ನೀಯದೆ ಗ್ರೇಸ್ ಪಿಟರ್ಸನನ್ನು ಬಾಗಿಲವರೆಗೆ ಕಳಿಸಿ ಹಿಂತಿರುಗಿದಳು. ಅವನು ಉಪವನದಲ್ಲಿ ಹಾಯ್ದು ಅರಮನೆಯ ಕಡೆ ಸಾಗಿದ. ಆಗ ಸುತ್ತೆಲ್ಲಿಯೂ ಜನರ ಸುಳಿವಿರಲಿಲ್ಲ. ಪಿಟರ್ಸ್ ವಿಮನಸ್ಕನಾಗಿ ಸಾಗಿದ್ದ. ಹಿಂದೆ ಹೆಜ್ಜೆಯಸದ್ದಾಗುತ್ತಿರುವಂತೆ ಅವನಿಗೆ ಭಾಸವಾಯಿತು. ತಿರುಗಿ ನೋಡಿದ ಯಾವನೋ ಅವನಿಗೆ ಬಂದೂಕನ್ನು ಗುರಿಯಿಟ್ಟಿದ್ದ;-ಇನ್ನೇನು ಹಾರುವುದೇ. ಪಿಟರ್ಸ್ ಪಕ್ಕನೆ ನಗೆದು ನಿಂತ. ಅವನು ಎಚ್ಚತ್ತುದನ್ನು ಕಂಡು ಆ ಮನುಷ್ಯ ಬಂದೂಕನ್ನಿಳಿಸಿದ. ಪಿಟರ್ಸ್ ಅವನನ್ನು ದಿಟ್ಟಿಸಿದ. ಅವನೊಬ್ಬ ಶ್ರಮಜೀವಿ; ಅವನ ಉಡಿಗೆ ತೊಡಿಗೆ ಛಿದ್ರ; ಮುಖದಲ್ಲಿ ಕೆಲವು [illegible]ಗಳಿದ್ದವು; ಯಾರೊಡನೆಯೋ ಹೊಡೆದಾಡಿ ಬಂದಿರುವಂತಿತ್ತು ಅವನ ಭಾವ.

ಕೈಮುಷ್ಟಿಯನ್ನು ಶ್ರಮಜೀವಿಯ ಮೂಗಿಗೆ ಗುರಿಯಿಟ್ಟು ಪಿಟರ್ಸ್ ಗದರಿಸಿದ: "ಒಗೆ ಬಂದೂಕನ್ನು. ಇಲ್ಲದಿದ್ದರೆ ನಿನ್ನ ಮೂಗನ್ನು ಒಡೆದು ಬಿಟ್ಟೇನು. ನನ್ನ ಮೇಲೇಕೆ ನಿನ್ನ ದಾಳಿ ?"

ಅವನು ಬಂದೂಕನ್ನು ಚೆಲ್ಲಲಿಲ್ಲ. ಪಿಟರ್ಸನ ಗದರಿಕೆಯನ್ನು ಗಣನೆಗೇ ತರಲಿಲ್ಲ. ಸ್ಥಿರದೃಷ್ಟಿಯಿಂದ ಪಿಟರ್ಸ್‌ನನ್ನು ನೋಡುತ್ತ ನಿಧಾನವಾಗಿ ಮಾತನಾಡಿದ: "ನಾನು ನಿಮಗೆ ಋಣಿಯಾಗಿದ್ದೇನೆ, ಆ ರಿಣವನ್ನು ತೀರಿಸಲಿಕ್ಕೆ ಬಂದಿದ್ದೇನೆ. ನಿನ್ನೆ ರಾತ್ರಿಯೆ ತೀರಿಸುತ್ತಿದ್ದೆ. ಆದರೆ ನನ್ನ ಜೊತೆಯಲ್ಲಿ ಬಂದವರೆಲ್ಲಾ ಹೇಡಿಗಳಿದ್ದರು, ಅಂಜಿ ಓಡಿಬಂದರು. ಇಂದು ಹೊತ್ತು ಸಾಧಿಸಿದೆ; ನಿಮ್ಮನ್ನು ಕೊಂದುಹಾಕುವೆ."

ಆ ಮನುಷ್ಯ ಹುಚ್ಚನೆಂದು ಪಿಟರ್ಸ್‌ನಿಗೆನಿಸಿತು; ಅವನ ಶೂನ್ಯದೃಷ್ಟಿ ಹಾಗೆ ಹೇಳಿತು. ಅವನ ಮಾತುಗಳಲ್ಲಿಯೂ ಹುಚ್ಚರ ಮಾತಿನಂತೆ ತಾಳಮೇಳವಿರಲಿಲ್ಲ. ರಾತ್ರಿಯ ಹೊತ್ತು, ಜನರ ಸುಳಿವಿಲ್ಲ, ಹುಚ್ಚನ ಕೈಯಲ್ಲಿ ಗುಂಡು ತುಂಬಿದ ಪಿಸ್ತೂಲು ಈ ಪರಿಸ್ಥಿತಿಯಲ್ಲಿ ಸಾಹಸಿಯಾದ ಪಿಟರ್ಸನೂ ಕೊಂಚ ಬೆಚ್ಚಿದ. ಆದರೆ ಓಡಿಹೋಗಲು ಹವಣಿಸದೆ ಅವನೆಂದ: "ಸಾಯುವುದೇ ಇದ್ದರೆ ಸಾಯುತ್ತೇನೆ. ಆದರೆ ಎಷ್ಟೋ ಜನ ಇರುತ್ತಿರಲಿಕ್ಕೇ ಈ ಬಡವನ ಮೇಲೆಯೇ ಏಕೆ ನಿನ್ನ ವಕ್ರದೃಷ್ಟಿ ?"

"ನಾನು ಇಸ್ಟೆಲ್ ಬರ್ಜಿನಳ ತಂದೆ."

"ನಿನ್ನ ಗುರುತು ನನಗಿಲ್ಲ; ನಿನ್ನ ಮಗಳ ಗುರುತೂ ಇಲ್ಲ. ನಿಮಗೇನಾದರೂ ನಾನು ಅಪಕಾರ ಮಾಡಿದಂತೆಯೂ ಎನಿಸುವುದಿಲ್ಲ. ನನ್ನನ್ನೇಕೆ ಕೊಲ್ಲುವೆ ?"

"ಸುಳ್ಳು ಹೇಳುತ್ತೀರಿ! ನನ್ನ ಇಸ್ಟೆಲಳನ್ನು ಇಲ್ಲದ್ದೊಂದು ಕಿವಿಯೂದಿ ಮೋಸದಿಂದ ಒಯ್ದಿದ್ದೀರಿ. ಮತ್ತೆ ಈಗ ಹೇಳುತ್ತೀರಿ—ಅವಳ ಗುರುತೇ ನನಗಿಲ್ಲವೆಂದು! ಗುರುತುಂಟೋ ಇಲ್ಲವೋ ತೋರಿಸುತ್ತೇನೆ."

ಪಿಟರ್ಸ್ ಹಗೆಯ ಮುಖದ ಹತ್ತಿರ ಮುಖವನ್ನೊಯ್ದು "ಚೆನ್ನಾಗಿ ದಿಟ್ಟಿಸಿ ನೋಡು, ನನ್ನ ಮೋರೆಯನ್ನು. ನಾನೇ ನಿನ್ನ ಮಗಳನ್ನು ಮೋಸದಿಂದೊಯ್ದೆನೋ ? ಇನ್ನೊಮ್ಮೆ ಹೇಳು."

" ನೀವು ಬರ್ಜಿಲಂಡಿನ ಯುವರಾಜರು, ಅದು ನನಗೆ ಗೊತ್ತಿಲ್ಲವೆ? ನನ್ನಂಥ ಹಲವಾರು ಮನೆತನಗಳ ಚರಿತ್ರೆಗೆ ನೀವು ಕಪ್ಪುಬಳಿದಿದ್ದೀರಿ; ಅವರೆಲ್ಲರಿಗೂ ನೀವೆಂದರೆ ಹೇಸಿಕೆ." ಎಂದ ಆತ.

" ನೀನು ತಪ್ಪು ತಿಳಿದುಕೊಂಡಿದ್ದೀ. ನಾನು ಅಂಥ ಕೆಲಸ ಎಂದೂ ಮಾಡಿಲ್ಲ."

" ನಿಶ್ಚಯವಾಗಿ ಮಾಡಿದ್ದೀರಿ ಶಿಕ್ಷೆಯನ್ನು ಅನುಭವಿಸಿ " ಎನ್ನುತ್ತ ಹಗೆ ಮತ್ತೆ ಬಂದೂಕನ್ನೆತ್ತಿದ.

ಪಿಟರ್ಸ್ ಒಮ್ಮೆಗಿಲೆ ಅವನ ಹಿಂದೆ ಹಾರಿ, ಬಲವಾಗಿ ಅವನ ಕೈಗೆ ಹೊಡೆದ. ಕುದುರೆ ಹಾರಿ ಬಂದೂಕು ಗುಂಡನ್ನು ಕಕ್ಕಿತು. ಪಿಟರ್ಸ್ ಅವನನ್ನು ಕತ್ತು ಹಿಡಿದೆತ್ತಿ ಕ್ರೋಧದಿಂದ, " ಇನ್ನು ನಿನ್ನ ಬಾಳು ಮುಗಿಯಿತು ನೀನು ನರಹತ್ಯೆಗೆಂದು ಹೊರಟಿಪ್ಪೆ, ನಿನ್ನ ಮುಂಡವನ್ನು ಎಳೆದು ಹಾಕುವೆ." ಎಂದು ಬಂದೂಕನ್ನು ಕಸಿದುಕೊಂಡು ಹತ್ತಿರದ ಹೊಂಡಕ್ಕೆಸೆದ. " ನಿನ್ನ ಮಗಳನ್ನು ನಾನು ನೋಡಿದ್ದೇ ಇಲ್ಲ. ನೀನು ಗುರುತುತಪ್ಪಿ ಯಾರ ತಪ್ಪನ್ನೋ ನನ್ನ ಮೇಲೆ ಹೊರಿಸುತ್ತಿದ್ದೀ. ಮೂರ್ಖ!"

" ಹಾಗಾದರೆ, ಜನ ಆಡಿಕೊಳ್ಳುತ್ತಿದ್ದಾರಲ್ಲ, ಯುವರಾಜ ನನ್ನ ಮಗಳನ್ನು ಕುಲಭ್ರಷ್ಟಗೊಳಿಸಿದನೆಂದು ; ಏಕೆ?"

" ನನ್ನ ಹೆಸರನ್ನು ಕೆಡಿಸುವುದಕ್ಕೆ ಆ ದ ಕೆಟ್ಟ ಜನ ಹುಟ್ಟಿಸಿದ ಹರಲಿ ಅದು. ಅವರ ಮಾತನ್ನು ನಿಜವೆಂದು ನಂಬಬೇಡ. ನಾನು ಸತ್ಯವನ್ನೇ ಹೇಳುತ್ತಿದ್ದೇನೆ. ಸುಮ್ಮನೆ ಮನೆಗೆ ಹೋಗು. ಇನ್ನೆಂದಾದರೂ ನನ್ನ ಬೆನ್ನುಹತ್ತಿದೆಯಾದರೆ ನಿನಗೆ ಒಳ್ಳೆತಾಗಲಾರದು." ಎಂದು ಅವನನ್ನು ಕೈಬಿಟ್ಟು ಹೊರಟುಹೋದ.

೨೩

ನಗರದ ಕಡೆಯುಕ್ಕಡವ ಹೆಸರಾದ ಕೆಟ್ಟ ಹೋಟಲೊಂದರಲ್ಲಿ, ಅದೇ ರಾತ್ರಿ ಒಂಬತ್ತರ ಸಮಯದಲ್ಲಿ ವಿದ್ರೋಹೀದಳದ ಮೂವರು ನಾಯಕರು— ಅಧ್ಯಾಪಕ, ಲೆಪ್ಟಿಟ್, ಗ್ರಾಮೋ—ದೀರ್ಘವಾದ ಮೇಜಿನ ಬಳಿ ಮಾತನಾಡುತ್ತ ಕುಳಿತಿದ್ದರು. ಕೋಣೆಯಲ್ಲಿ ಬೇರೆ ಜನ ಇರಲಿಲ್ಲ. ತೀರ ಮೆಲುದನಿಯಲ್ಲಿ ಸಾಗಿತ್ತು ಪರ್ಯಾಲೋಚನೆ.

ಲೆವ್ಹಿಟ್ ಹೇಳಿದ : "ಈ ವ್ಯಾಪಾರಕ್ಕೆ ಯಾರು ಹೊಣೆಗಾರರೆಂದು ಗೊತ್ತಿದೆ. ಹರ್ಗ್‌ವ್ಯಾನನದೇ ಈ ಕೆಲಸ, ಸಂದೇಹವಿಲ್ಲ. ಈ ಕಾಂಡ ನಡೆದದ್ದು ಅವನ ಉತ್ತೇಜನದಿಂದಲೇ. ಗುಪ್ತಹತ್ಯೆಯಿಂದ ಕಾರ್ಯ ಸಾಧಿಸುವ ವಿಚಾರದವನು ಆತ. ಆತನನ್ನು ಅಂಕೆಯಲ್ಲಿಟ್ಟುಕೊಳ್ಳುವುದು ನಮಗ ಸಾಧ್ಯವೇ ಆಯಿತು. ಆದರೂ ಆತನ ಪ್ರಯತ್ನ ಸಫಲವಾಗಿದ್ದರೆ, ನಮ್ಮ ಕೆಲಸ ಎಷ್ಟೋ ಸುಲಭವಾಗುತ್ತಿತ್ತೆಂಬುದೂ ನಿಜವೆ."

"ನಮ್ಮ ದಲಪತಿಯ ಮತವೇ ನನ್ನ ಮತ. ರಕ್ತಪಾತವಿಲ್ಲದೆ ಕಾರ್ಯಸಿದ್ಧಿಯಾಗಬೇಕೆಂಬ ಪಕ್ಷದವನು ನಾನು. ನಾವು ಆ ಹಾದಿಯಲ್ಲಿಯೇ ಮುಂದುವರಿಯಬೇಕು." ಅಧ್ಯಾಪಕನೆಂದ.

"ದಲಪತಿಯ ಮಾತನ್ನು ಮೀರಬೇಕೆಂದು ನನ್ನ ಅಭಿಪ್ರಾಯವೂ ಇಲ್ಲ. ಆದರೂ ರಕ್ತಪಾತವಿಲ್ಲದೆ ಯಾವ ವಿದ್ರೋಹವೂ ಜಯಶೀಲವಾಗ ದೆನ್ನುವ ಸತ್ಯವಾದಿ ನಾನು. ನಮ್ಮ ರಾಜ ಅತ್ಯಂತ ಕಾಪುರುಷ; ಅವನು ರಾಜ್ಯವನ್ನು ಬಿಟ್ಟು ಓಡಿದರೆ ಅವನ ಮೇಲೆ ಆಕ್ರಮಣ ಮಾಡುವ ಅಗತ್ಯವಿಲ್ಲ. ಆದರೆ ಯುವರಾಜನಂಥ ನರಪಶು ಕ್ಷಮೆಗೆ ಯೋಗ್ಯನಲ್ಲ ಹೇಗಾದರೂ ಮಾಡಿ ಅವನನ್ನು ಗತಿಗಾಣಿಸಬೇಕು. ನೋಡುವಾ, ಅವನು ಹೇಗೆ ಉಳಿದು ಕೊಳ್ಳುತ್ತಾನೋ." ಎಂದ ಲೆವ್ಹಿಟ್.

ಆ ಕೋಣೆಯ ಒಂದು ಕತ್ತಲೆಯ ಮೂಲೆಯಿಂದ ಗಂಭೀರಸ್ವರ ವೊಂದು ಬಂದಿತು: "ಮಿತ್ರರೇ, ನಾವೀಗ ಆ ವಿಷಯವನ್ನೇ ಯೋಚಿಸುವಾ."

ಎಲ್ಲರೂ ಆಕಡೆ ನೋಡಿದರು. ಮೊಗವಾಡ ಧರಿಸಿದ ದಲಪತಿ ಹತ್ತಿರವೇ ನಿಂತಿರುವುದನ್ನು ಕಂಡು ಮೂವರೂ ಎದ್ದುನಿಂತರು. ಕತ್ತಲೆಯಲ್ಲಿಯೆ ಇದ್ದ ಕುರ್ಚಿಯಲ್ಲಿ ಕುಳಿತುಕೊಂಡು ದಳಪತಿ ಮಾತನಾಡಿದ: "ಮಿತ್ರರೇ, ನೀವು ಮಾತನಾಡುತ್ತಿದ್ದ ವಿಷಯ ನನ್ನ ಕಿವಿಗೆ ಬಿದ್ದಿದೆ. ಮಿ ಲೆವ್ಹಿಟ್ ರಕ್ತಪಾತದ ಪಕ್ಷಪಾತಿಯೆಂದು ತೋರುತ್ತದೆ. ನನಗದು ಸಮ್ಮತವಲ್ಲ. ರಾಜ್ಯತಂತ್ರದ ಪರಿವರ್ತನೆ ನೆತ್ತರು ಹರಿಯದೆಯೇ ಆಗಬೇಕು."

"ಆದರೆ ಆ ವ್ಯಾಪಾರದಲ್ಲ ನಮ್ಮ ಕೈವಾಡ ವಿಶೇಷವಿಲ್ಲ. ಜನಸಾಮಾನ್ಯರು ತಮಗೆ ಸರಿದೋರಿದಂತೆ ನಡೆಯುವರು; ಅವರನ್ನು ತಿಳಿಸಿ ತಿದ್ದಿ ನಿಗ್ರ

ಹಿಸುವುದು ಯಾರಿಗೆ ಸಾಧ್ಯ ? ಅರಾಜಕತೆಯ ಸಮಯದಲ್ಲಿ ಅದು ಸಹಜ ಸಾಧ್ಯವಲ್ಲ." ಅಧ್ಯಾಪಕನೆಂದ.

" ನಿನ್ನೆ ರಾತ್ರಿ ಜರುಗಿದ ಎರಡು ಘಟನೆಗಳನ್ನು ಕುರಿತು ಯೋಚಿಸುವುದು ಅಗತ್ಯ. ಆದಕ್ಕೇ ನಿಮ್ಮನ್ನು ಕರೆದದ್ದು. ಅರಮನೆಯಲ್ಲಿ ಬಾಂಬೆಸೆದದ್ದಕ್ಕೆ ಕಾರಣ ಯಾರು ? ನೀವಾಗಲಿ, ನಮ್ಮ ಉಪಸಮಿತಿಯು ಯಾರಾಗಲಿ ಈ ಕೃತ್ಯಕ್ಕೆ ಪ್ರಚೋದಿಸಿದರೆ ?" ದಲಪತಿ ಕೇಳಿದ

" ಇಲ್ಲ ಮಹಾಶಯ, ಈ ಕೆಲಸ ನಮ್ಮ ಸಲಹೆಸೂಚನೆಯಿಂದ ಆದದ್ದಲ್ಲ. ಆದರೆ ಒಂದು ವಿಷಯವನ್ನು ತಮ್ಮಿಂದ ಬಚ್ಚಿಡುವುದು ಉಚಿತವೆಂದು ಕಾಣುವುದಿಲ್ಲ.-ನಮ್ಮ ದಳದ ಬಹುಜನರು ರಕ್ತಪಾತದ ಪಕ್ಷಪಾತಿಗಳು; ರಕ್ತಪಾತದ ಹೊರತು ಕೆಲಸ ಕೈಗೂಡುವುದೆಂದು ಅವರು ನಂಬುವುದಿಲ್ಲ. ಆ ಮತದವರು ಯಾರೋ ಜನತೆಯನ್ನು ಉತ್ತೇಜನಗೊಳಿಸಿ ಈ ಹಾವಳಿಯನ್ನುಮಾಡಿಸಿರುವ ಸಂಭವವಿದೆ ಆದರೆ ಅವರ ಉದ್ದೇಶ ಸಫಲವಾಗಲಿಲ್ಲ." ಗ್ರಾನೋ ಹೇಳಿದ.

ಇದನ್ನು ಕೇಳಿ ಕ್ರೋಧದಿಂದ ದಳಪತಿಯು ಹುಬ್ಬುಗಂಟಿಕ್ಕಿದನು. ಮೊಗವಾಡ ಧರಿಸಿದುದರಿಂದ ಅವನ ಮುಖಭಾವ ಇತರರಿಗೆ ಗೊತ್ತಾಗದಿದ್ದರೂ ಅವನ ಧ್ವನಿ ಮನದ ವಿರಕ್ತಿಯನ್ನು ಪ್ರಕಟಿಸದಿರಲಿಲ್ಲ. ಧೀರ ಗಂಭೀರ ಸ್ವರದಲ್ಲಿ ಅವನೆಂದ: " ಗ್ರಾನೋ, ಇಲ್ಲಿ ಕೇಳಿರಿ. ಒಂದು ವರ್ಷದ ಹಿಂದೆ ನಾನು ನಿಮಗೆ ಪೂರಾ ಅಪರಿಚಿತನಿದ್ದೆ; ನಿಮ್ಮ ದಳದ ಯಾರಿಗೂ ನನ್ನ ಬಗ್ಗೆ ಏನೂ ತಿಳಿದಿರಲಿಲ್ಲ. ಅಲ್ಲಿಂದೀಚೆಗೆ ನನ್ನ ಕೆಲವು ಪತ್ರಗಳಿಂದ ನೀವು ನನ್ನ ಕಡೆ ಒಲಿದಿರಿ. ನನ್ನ ಯೋಗ್ಯತೆಯಲ್ಲಿ ನಿಮಗೆ ವಿಶ್ವಾಸ ಹುಟ್ಟಿತು ನಾನು ನಿಮಗೆ ಆಗಾಗ ಅನೇಕ ಸಲಹೆಗಳನ್ನು ಕೊಡುತ್ತ ಬಂದೆ. ಅವೆಲ್ಲವನ್ನೂ ನೀವು ಯುಕ್ತಿಸಂಗತವೆಂದು ಮನಗಂಡೇ ಸ್ವೀಕರಿಸಿದಿರಿ. ಶಕ್ತಿಸಂಪಾದನೆ ಮಾಡಿಕೊಳ್ಳುವುದು ಹೇಗೆಂಬುದನ್ನೂ ನಾನು ನಿಮಗೆ ಹೇಳಿಕೊಟ್ಟೆ; ಆ ಮೇರೆಗೆ ನೀವು ನಿಮ್ಮ ದಳವನ್ನು ಬಲಿಸಿಕೊಂಡಿರಿ, ಸಾಕಷ್ಟು ಸಾಮರ್ಥ್ಯವನ್ನೂ ಗಳಿಸಿಕೊಂಡಿರಿ. ನನ್ನ ಉಪದೇಶದ ಗುಳನ್ನು ಅರಿತುಕೊಂಡು ನೀವು ನನ್ನನ್ನು ದಲಪತಿಯೆಂದು ಆಯ್ದು-

ಕೊಂಡಿರಿ. ನಾನದನ್ನು ಬೇಡವೆನ್ನಲಿಲ್ಲ. ಆವೇಳೆಯೊಮ್ಮೆ ನೀವು ನನ್ನ ಪ್ರತ್ಯಕ್ಷ ದರ್ಶನವನ್ನು ಅಪೇಕ್ಷಿಸಿದಿರಿ. ಅದಕ್ಕೆ ನಾನು 'ನಾವು ಸಾಧಾರಣ ತಂತ್ರವಾದಿಗಳೆಂಬುದನ್ನು ಜನಕ್ಕೆ ತಿಳಿಯಗೊಟ್ಟರೆ ನಮ್ಮ ಯೋಜನೆಯ ಭಿಟ್ಟ ಕೆಟ್ಟೀತು ; ಇಂಥ ಸ್ಥಿತಿಯಲ್ಲಿ ನಾನು ನಿಮ್ಮನ್ನು ಕಾಣುವುದು ಸರಿಯಲ್ಲ ; ನಿಮ್ಮ ಮಂತ್ರಣಾಸಭೆಗೆ ಬರುವುದು ಅನಿವಾರ್ಯವೇ ಆಗಿದ್ದರೆ, ವೇಷಾಂತರದಲ್ಲಿ ಬರುತ್ತೇನೆ' ಎಂದು ತಿಳಿಸಿದೆ. ನೀವೂ ಒಪ್ಪಿದಿರಿ. ನಾನು ವೇಷವಾಡ ಧರಿಸಿಕೊಂಡು ನಿಮ್ಮ ಸಭೆಗಳಿಗೆ ಬರತೊಡಗಿದೆ. ನಾನು ಯಾರೆ ಬುದು ನಿಮಗೆ ಯಾರಿಗೂ ಈವರೆಗೆ ಗೊತ್ತಿಲ್ಲ ; ಆದರೂ ನನ್ನನ್ನು ನೀವು ಎಷ್ಟೋ ಸಲ ನೋಡಿದ್ದೀರಿ, ನನ್ನ ಮಾತನ್ನು ಕೇಳಿದ್ದೀರಿ, ನನ್ನ ಅಪ್ಪಣೆಯಂತೆ ನಡೆದಿದ್ದೀರಿ. ಈ ನಿಮ್ಮ ವರ್ತನೆ ಪ್ರಶಂಸನೀಯ. ಈಗ ನಿಮ್ಮ ಮೂವರಲ್ಲಿ ಪ್ರತಿಯೊಬ್ಬನನ್ನು ಕೇಳುತ್ತೇನೆ– ನಾನು ಯಾರೆಂಬುದು ನಿಮಗೆ ಗೊತ್ತಾಗಿದೆಯೆ ? ನಿಮ್ಮ ಗುಪ್ತಸಭೆಗಳ ಹೊರತು ಮತ್ತೆಲ್ಲಿಯಾದರೂ ನನ್ನನ್ನು ನೀವು ಯವಾರಾದರೂ ನೋಡಿರುವಿರಾ ? ಈ ಧ್ವನಿಯನ್ನು ಕೇಳಿರುವಿರಾ ? ನಿಮ್ಮ ಮನದೊಳಗಿನ ಮಾತುಗಳನ್ನು ಸರಳವಾಗಿ ಹೇಳಿರಿ."

ಮೂವರೂ ಒಕ್ಕೊರಲಿನಿಂದ ಉತ್ತರವಿತ್ತರು : "ಇಲ್ಲ, ಗುಪ್ತಸಭೆಯ ಹೊರತು ಮತ್ತೆಲ್ಲಿಯೂ ತಮ್ಮನ್ನು ನೋಡಿಲ್ಲ ; ತಮ್ಮ ಸ್ವರವನ್ನೂ ಕೇಳಿಲ್ಲ, ತಾವು ಯಾರು, ಯಾವ ದೇಶದವರು, ತಮ್ಮ ಪದಮರ್ಯಾದೆ ಎಂಥದು. ಇತ್ಯಾದಿ ಎಲ್ಲವೂ ನಮಗೆ ಅಜ್ಞಾತ ವಿಷಯ. ಆದರೂ ತಮ್ಮ ಯುಕ್ತಿವಾದವನ್ನು ಮೆಚ್ಚಿದ ನಾವು ತಮ್ಮನ್ನು ದಲಪತಿಯನ್ನಾಗಿ ಮಾಡಿಕೊಂಡಿದ್ದೇವೆ ; ತಮ್ಮ ಅಪ್ಪಣೆಯನ್ನು ಪ್ರತಿವಾದಿಸದೆ ಪಾಲಿಸುತ್ತಿದ್ದೇವೆ."

"ಸರಿ. ಈಗ ನನ್ನೊಂದು ಸೂಚನೆಯನ್ನು ಕೇಳಿರಿ. ನಾಳೆ ರಾತ್ರಿ ದಳದ ಒಂದು ಮಹಾಸಭೆಯನ್ನು ಕರೆಯಿರಿ ; ನಮ್ಮ ಮಂದಿಯೆಲ್ಲಾ ಆ ಸಭೆಗೆ ಬರಬೇಕು. ನಾನೂ ಬರುವೆ. ಪೋಲಿಸರಿಂದ ಸಭೆಗೆ ವ್ಯತ್ಯಯ ಬರದ ಹಾಗೆ ನಾನು ನೋಡಿಕೊಳ್ಳುತ್ತೇನೆ".

ದಲಪತಿಯ ಮಾತನ್ನು ಕೇಳಿ ಲೆಪ್ಪಿಟ್ ಉತ್ಸಾಹದಿಂದ ನೆಗೆದೆದ್ದು ಮಾತನಾಡಿದ : "ಹಾಗಾದರೀಗ ತಾವು ನಮ್ಮೆದುರು ನಿಜರೂಪ ತೋರಿಸಿಕೊಳ್ಳುವಿರಾ ? ತಾವು ಯಾರೆಂಬುದನ್ನು ಆ ಸಭೆಯಲ್ಲಿ ಪ್ರಕಾಶಪಡಿಸುವಿರಾ?

ದಲಪತಿ ಧೀರಸ್ವರದಲ್ಲಿ ಉತ್ತರವಿತ್ತ : "ಇಲ್ಲ, ಈಗ ನಿಮ್ಮೆದುರು ನಾನು ಪ್ರಕಟವಾಗುವಂತಿಲ್ಲ. ನಾನೊಂದು ಅದ್ಭುತಕಾರ್ಯವನ್ನು ಮಾಡ ಲಿಚ್ಛಿಸುತ್ತೇನೆ; ನಿಮಗದು ಅಸಾಧ್ಯವೆಂದು ತೋರೀತು; ನನಗೆ ಹಾಗೆನಿಸುವು ದಿಲ್ಲ. ಅದರಲ್ಲಿ ತುಂಬ ಎಡರು ತೊಡರುಗಳಿರುವುದೇನೋ ನಿಜ; ಅವೆಲ್ಲವು ಗಳ ಹೊಣೆಯನ್ನು ನಾನು ವಹಿಸಿಕೊಳ್ಳುತ್ತೇನೆ. ಸಭೆಯಲ್ಲಿ ಬರಲಿದ್ದ ನನ್ನ ಗೊತ್ತುವಳಿ ಬಹಳ ಮಹತ್ತ್ವವುಳ್ಳದ್ದು; ಅದನ್ನು ನಾನೇ ಸಭೆಯಲ್ಲಿ ಸಮಸ್ತ ಸದಸ್ಯರೆದುರು ಮಂಡಿಸುವುದು ಉಚಿತ. ಹಾಗೆಯೆ ನನ್ನ ನಿಜ ರೂಪದ ರಹಸ್ಯವನ್ನು ಕಾಯುವುದೂ ಆವಶ್ಯಕ. ನಾನು ಹೀಗೇಕೆ ಹೇಳುತ್ತಿರುವೆನೆಂಬುದು ಸಭೆಯಲ್ಲಿ ಯಥಾಸಮಯದಲ್ಲಿ ಗೊತ್ತಾಗುವುದು. ಬೆಲಿವ್ಯೂಡ್-ಡು-ಪನೆರ್ ಕೂಟದಲ್ಲಿಯ ವಸ್ತುಸಂಗ್ರಹಾಲಯದ ಸಭಾ ಭವನ ದಲ್ಲಿ ನಾಳೆಯ ರಾತ್ರಿ ಸಭೆಯನ್ನು ಕೂಡಿಸಿರಿ ನಾನು ಆ ಮಂದಿರವನ್ನು ಪರೀಕ್ಷಿಸಿ ನೋಡಿದ್ದೇನೆ; ನಮ್ಮ ಗುಪ್ತಮಹಾಧಿವೇಶನಕ್ಕೆ ಒಳ್ಳೇ ತಕ್ಕು ದಾಗಿದೆ. ಎಲ್ಲ ಸದಸ್ಯರೂ ಸೇರಿದ ಬಳಿಕ ಮಂದಿರದ ಬಾಗಿಲನ್ನು ಮುಚ್ಚಿ ಬಿಡಲಾಗುವುದು; ರಾತ್ರಿ ಹತ್ತು ಗಂಟೆಗೆ ಇಪ್ಪತ್ತು ನಿಮಿಷಗಳಿರುವಾಗ ಎಲ್ಲ ದೀಪಗಳನ್ನೂ ಕಳೆಯಲಾಗುವುದು; ಯಾರಿಗಾದರೂ ದೀಪ ಉರಿಸಬೇಕೆಂಬ ಮನಸಾದರೂ ಹಾಗೆ ಮಾಡುವುದು ಸಾಧ್ಯವಾಗಲಾರದು; ಆಮೇಲೆ ದೂರದ ಒಂದು ಚಿಕ್ಕ ಬಾಗಿಲಿಂದ ನಾನು ಮಂದಿರವನ್ನು ಪ್ರವೇಶಿಸುವೆ. ಆ ಬಾಗಿ ಲಲ್ಲಿ ಯಾರೂ ಪ್ರವೇಶಮಾಡದಂತೆ ನೀವು ನೋಡಿಕೊಳ್ಳಬೇಕು. ಹತ್ತಕ್ಕೆ ಹತ್ತು ನಿಮಿಷಗಳಿರುವಾಗ ನಾನು ಸಭೆಗೆ ತಿಳಿಸಬೇಕಾದ್ದನ್ನು ತಿಳಿಸುವೆ."

ಮೂವರೂ ಅಚ್ಚರಿಯಿಂದ ಮೂಂಗಾಣದಾದರು. ಈ ರಹಸ್ಯಮಯ ವ್ಯಕ್ತಿ ಯಾರು? ಈತನ ಅಭಿಪ್ರಾಯವೇನು? ಇವನ ಇಂತಹ ಅದ್ಭುತ ವಿಲಕ್ಷಣ ಆಚರಣೆಗೆ ಕಾರಣವಾದರೂ ಏನು? ಏನೊಂದೂ ಅವರ ಬುದ್ಧಿಗೆ ನಿಲುಕಲಿಲ್ಲ. ಒಬ್ಬೊರೊಬ್ಬರ ಮೋರೆಯನ್ನು ನೋಡತೊಡಗಿದರು. ಕೆಲವು ನಿಮಿಷಗಳ ಬಳಿಕ ಅಧ್ಯಾಪಕನೆಂದ : "ಕತ್ತಲೆಯಲ್ಲಿ ಸ್ವರೂಪವನ್ನು ಮರೆ ಯಿಸಿಕೊಂಡು ಸಭೆಯ ಕಾರ್ಯವನ್ನು ನೆರವೇರಿಸಬೇಕೆಂದು ತಮ್ಮ ಅಭಿ ಪ್ರಾಯವಿದ್ದಂತೆ ತೋರುತ್ತದೆ. ಆದರಿದು ಸಂಪೂರ್ಣ ಸುರಕ್ಷಿತವೇ? ಹಿಂಡು ಜನ ಸೇರಿರುತ್ತಾರೆ, ಯಾವನಾದರೂ ಕುತೂಹಲದಿಂದ ಕಡ್ಡಿ

ಕೊರೆದರೆ, ಇಲ್ಲವೆ ಯಾವನಾದರೂ ಕತ್ತಲೆಯಲ್ಲಿ ಅವಿತಿದ್ದು ತಮ್ಮನ್ನು ತಡೆದರೆ ತಮ್ಮ ಹವಣಿಕೆಯೆಲ್ಲ ವ್ಯರ್ಥವಾಗಲಿಕ್ಕಿಲ್ಲವೆ ?"

"ಹೌದು. ಇಂಥ ತೊಂದರೆಗಳ ಸಂಭವವೇನೋ ತುಂಬ ಇದೆ. ಆದರೂ ನಾನು ಸಭೆಗೆ ಬರುವೆ. ಏನಾದರೂ ವಿಪತ್ತೊದಗಿದರೆ ಅದಕ್ಕೆ ನಾನೇ ಹೊಣೆ ನಿಮಗೆ ಹೇಳುವುದಿಷ್ಟೇ– ನಾನು ಯಾರೆಂದು ತಿಳಿಯುವ ಕುತೂಹಲದಿಂದ ಯಾರೂ ಅಕಾರಣವಾಗಿ ನನ್ನ ಉದ್ದೇಶವನ್ನು ವ್ಯರ್ಥಗೊಳಿಸಲು ಪ್ರಯತ್ನಿಸಕೂಡದು ; ಅದರಿಂದ ಒಳಿತಾಗದೆ ಕೇಡೇ ಆದೀತು. ಇಂದಿನಿಂದ ನಾಳೆಯ ಮಂಗಳವಾರವರೆಗೆ ನೀವು ಮಾಡಬೇಕಾದ ಕಾರ್ಯಕ್ರಮದ ರೂಪರೇಷೆಯನ್ನು ನಾನು ಸಿದ್ಧಪಡಿಸಿದ್ದೇನೆ ; ಇದನ್ನೊಯ್ದು ನಿಮ್ಮ ಉಪಸಮಿತಿಯಲ್ಲಿ ಮಂಡಿಸಿರಿ ಏನಾದರೂ ತಿದ್ದುಪಡೆ ಮಾಡಬೇಕೆಂದೆನಿಸಿದರೆ ನನಗೆ ತಿಳಿಸಿರಿ ; ಆ ಬಗ್ಗೆ ವಿಚಾರ ಮಾಡುವೆ. ಆದರೆ, ನಾನು ರಕ್ತಪಾತದ ಪಕ್ಷಪಾತಿಯಲ್ಲವೆಂಬುದನ್ನು ಯಾವಾಗಲೂ ನೆನಪಿಸಲ್ಲಿಡಿರಿ. ನರರಕ್ತದಿಂದ ಮಾತೃಭೂಮಿಯನ್ನು ಕಲಂಕಿತಗೊಳಿಸಿ ಶಾಸನಪ್ರಣಾಲಿಯನ್ನು ಬದಲಿಸುವ ಸೂಚನೆಯನ್ನು ನಾನೆಂದೂ ಸಮರ್ಥಿಸುವುದಿಲ್ಲ. ನೆತ್ತರಿನ ಒಂದು ಹನಿಯನ್ನೂ ಕೆಡವದೆ ಸಾಧಾರಣ ತಂತ್ರವನ್ನು ಪ್ರತಿಷ್ಠಿಸುವುದು ಅಸಂಭವವೆಂದು ನಿಮ್ಮ ವಿಚಾರವಿದ್ದರೆ, ಆ ವಿಚಾರದಂತೆ ನೀವು ಕಾರ್ಯ ಮಾಡಬೇಕೆನ್ನುತ್ತಿದ್ದರೆ, ನಾನು ದಲಪತಿತ್ವವನ್ನು ಬಿಟ್ಟುಬಿಡುವೆ. ಅದರಿಂದ ನಿಮಗೆ ಮಂಗಲವಾದೀತೆಂದು ನಾನು ಹೇಳಲಾರೆ."

ಎಂದು ನುಡಿದು ದಲಪತಿ ಎದ್ದು ನಿಂತ. ಆತನ ಮೂವರು ಸಹಕಾರಿಗಳೂ ಎದ್ದು ನಿಂತರು. ಲೆವ್ಹಿಟ್ ಎಂದ : "ಮಹಾಶಯರೆ, ನಾವು ರಕ್ತಪಾತದಿಂದ ಪರಾವೃತ್ತರಾದರೂ ಜನಸಾಮಾನ್ಯರು ಒಬ್ಬನನ್ನು ಮಾತ್ರ ಬಲಿ ತೆಗೆದುಕೊಳ್ಳದೆ ನಿವೃತ್ತವಾಗಲಾರರೆಂದು ಎನಿಸುತ್ತದೆ. ಅವನು ಕೈಗೆ ಸಿಕ್ಕರೆ ಅವರು ಖಂಡಿತ ಕೊಂದುಹಾಕುವರು."

"ನೀವು ಯಾರ ಬಗ್ಗೆ ಹೇಳುತ್ತಿರುವಿರಿ ?" ದಲಪತಿ ಬಂದ ಮಾರ್ಗವಾಗಿ ಹಿಂದಿರುಗುತ್ತ ಪ್ರಶ್ನಿಸಿದ.

"ಯುವರಾಜನ ಬಗ್ಗೆ." ಲೆವ್ಹಿಟ್ ಹೇಳಿದ.

ದಲಪತಿ ತನ್ನೊಳಗೇ ಮುಗುಳ್ನಕ್ಕು ಹೇಳಿದ: "ರಾಜನನ್ನು ಹೊಡೆಯದೆ ಹೋಗಗೊಟ್ಟರೆ ಸಾಕು. ಅನ್ಯರ ಅದೃಷ್ಟದ ಬಗ್ಗೆ ಯೋಚಿಸುವ ಕಾರಣವಿಲ್ಲ. ಯುವರಾಜನು ತರುಣ, ಅವನಲ್ಲಿ ಶಕ್ತಿಯಿದೆ, ತನ್ನ ರಕ್ಷಣೆ ತಾನು ಮಾಡಿಕೊಳ್ಳಲು ಸಮರ್ಥನಿದ್ದಾನೆ."

೨೪

ಸಾಧಾರಣ ತಂತ್ರದ ಸ್ಥಾಪನೆಗಾಗಿ ದುಡಿಯುತ್ತಿದ್ದ ಸಾವಿರಾರು ಮಂದಿ ಪ್ರದರ್ಶನಾಲಯದ ಸಭಾಶಾಲೆಯಲ್ಲಿ ಸೇರಿದ್ದರು. ನಿರ್ದಿಷ್ಟ ಸಮಯಕ್ಕೆ ನಂದಿ ಮಂದಿರವೆಲ್ಲ ಕತ್ತಲೆಯಾಗಿತ್ತು. ಎಲ್ಲರೂ ಉತ್ಸುಕತೆಯಿಂದ ದಲಪತಿಯನ್ನು ಪ್ರತೀಕ್ಷಿಸಿಕೊಂಡಿದ್ದರು. ಕೆಲಹೊತ್ತಿನ ತರುವಾಯ ದೂರದ ಬಾಗಿಲನ್ನು ತೆರೆದ ಸದ್ದು, ಮೆಲ್ಲಿತಾದ ಹೆಜ್ಜೆಯ ಸಪ್ಪಳ ಕೇಳಿಸಿತು. ಅಷ್ಟೆ ದಲಪತಿ ಬಂದು ಅಧ್ಯಕ್ಷಪೀಠದ ಹತ್ತಿರ ನಿಂತರೂ ಕಾಣಿಸಲಿಲ್ಲ. ದಳಪತಿ ತನ್ನ ಭಾಷಣವನ್ನಾರಂಭಿಸಿದ:

"ದೇಶಬಾಂಧವರೇ, ನಿಮ್ಮ ಸಾಧಾರಣಸಭೆಗೆ ನಾನು ಬಂದದ್ದು ಇದೇ ಮೊದಲು. ನಿಮಗೆ ಕೆಲವೊಂದು ಉಪಯುಕ್ತವಾದ ಮಾತುಗಳನ್ನು ಹೇಳುವುದಿತ್ತು; ಅದಕ್ಕೇ ಬಂದದ್ದು. ನನ್ನ ರೀತಿ ನಿಮಗೆ ವಿಚಿತ್ರವಾಗಿ ತೋರುವುದೆಂಬುದು ನನಗೆ ಗೊತ್ತಿದೆ; ಅದು ಸಹಜವೆ. ಆದರೂ ಅನಿವಾರ್ಯವೆಂದೇ ಹೀಗೆ ಛದ್ಮವೇಷದಲ್ಲಿ ಬಂದಿದ್ದೇನೆ. ಈ ರೀತಿ ತಪ್ಪೆಂದು ನಿಮಗೆನಿಸಿದರೆ, ನನ್ನನ್ನು ಕ್ಷಮಿಸಿರಿ. ನಮ್ಮೆಲ್ಲರ ಕಲ್ಯಾಣಕ್ಕಾಗಿ ನಾನು ಗುರುತು ಮರೆಸಿಕೊಂಡಿರುವುದೇ ಅಗತ್ಯವಾಗಿದೆ. ನಾನು ಯಾರೆಂದು ಅರಿತುಕೊಳ್ಳಲು ಯಾರೂ ಪ್ರಯತ್ನಿಸಲಾಗದು. ನಾನು ಹೇಳುವುದನ್ನು ಕೇಳಿಕೊಳ್ಳಿರಿ."

ಈ ಮಾತಿಗೆ ಸಭಿಕರು ಯಾಗೂ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸದೆ, ದಲಪತಿಯು ಮಾತಿನ ಕಡೆಗೆ ಆತುರತೆಯಿಂದ ಕಿವಿಗೊಟ್ಟರು. ದಲಪತಿ ಧೀರಗಂಭೀರ ಸ್ವರದಲ್ಲಿ ಮುಂದುವರಿಸಿದ:

"ಬಂಧುಗಳೇ, ನಮ್ಮ ಬರ್ಜಿಲಂಡ್ ರಾಜ್ಯದ ರಾಜನೈತಿಕ ಆಕಾಶವು ಮೇಘಾಚ್ಛನ್ನವಾಗಿದೆ. ಮಹಾಪರಿವರ್ತನೆಯೊಂದು ಸಮೀಪದಲ್ಲಿ ಎದುರಗೇ ನಿಂತಿದೆ. ಈ ಪರಿವರ್ತನೆ ನಮಗೆ ಕಲ್ಯಾಣಪ್ರದವಾಗಿ ರೂಪುಗೊಳ್ಳ

ವಂತೆ ನಾವೆಲ್ಲರೂ ಹೆಣಗುತ್ತಿದ್ದೇವೆ. ಹೊಸ ಶಾಸನಪದ್ಧತಿ ಸಾಮ್ಯ ನೀತಿಯ ಅಡಿಗಟ್ಟಿನ ಮೇಲೆ ಪ್ರತಿಷ್ಠಿತವಾಗಲಿದೆ. ಹೊಸ ಪ್ರಭುತ್ವ ಅಸ್ತಿತ್ವ ದಲ್ಲಿ ಬಂದರೆ, ನಮಗೆಲ್ಲರಿಗೂ ಸಮಾನ ಅಧಿಕಾರ ಸಿಕ್ಕುವುದು; ದೇಶದ ಸರ್ವಾಂಗೀನ ಉನ್ನತಿಯನ್ನು ಸಾಧಿಸಲು ಎಲ್ಲ ಏರ್ಪಾಟಗಳೂ ರೂಪಗೊಳ್ಳು ವವು; ನಮ್ಮ ಈ ಅನುಷ್ಠಾನದ ಫಲವಾಗಿ ಸಾಮ್ಯವಾದದ ಗೆಲುವಿನ ಕಾಳೆ ದಿಗ್ದಿಗಂತಗಳಲ್ಲಿ ಮೊಳಗುವುದು. ನಾವೊಂದು ದಿನ ಸಂದೇಹದಿಂದ ಡೊಯ್ದಾಡುವ ಮನಃಸ್ಥಿತಿಯಲ್ಲಿ ಹಚ್ಚಿದ ಗಿಡದ ಫಲವನ್ನುಣ್ಣುವ ಕಾಲ ದೂರವಿಲ್ಲ. ತೀರ ಹತ್ತಿರದ ಭವಿಷ್ಯತ್ತಿನಲ್ಲಿಯೆ, ಇನ್ನು ಎರಡು ವಾರ ಗಳಲ್ಲಿಯೆ, ನಮ್ಮ ರಾಜ್ಯದಲ್ಲಿ ಅಭಿನವ ಶಾಸನ ಆರಂಭವಾಗುವುದು. ಈ ಪರಿವರ್ತನೆ ವಿಪ್ಲವವನ್ನೇ ಬೆಂಗುಗೊಳಿಸುವುದು.

"ಇಷ್ಟು ಮಾತ್ರ ಹೇಳುವುದಕ್ಕೆ ನಾನು ನಿಮ್ಮನ್ನಿಲ್ಲಿ ಕರೆದಿಲ್ಲ. ಇನ್ನೊಂದು ಮಹತ್ವದ ಮಾತಿದೆ– ಈ ಪರಿವರ್ತನೆಗಾಗಿ ಬೀದಿಗಳನ್ನು ನೆತ್ತರದಿಂದ ಕಲುಷಿತಗೊಳಿಸುವ ಅಗತ್ಯವಿಲ್ಲ. ಸೆರೆಮನೆಗಳನ್ನೂ ತುಂಬ ಬೇಕಾಗಿಲ್ಲ. ಒಬ್ಬನನ್ನೂ ವಧಸ್ತಂಭಕ್ಕೆ ಬಲಿಕೊಡುವುದು ಬೇಡ. 'ಪ್ರಾಕೃ- ತಿಕ ನಿಯಮವನ್ನು ಮೀರದೆಯೆ ನಮ್ಮ ಅದೃಷ್ಟವನ್ನು ಭಿನ್ನಪಥದಲ್ಲೊ ಯ್ಯಲು ನಾವು ಸಮರ್ಥರಾಗುವೆವು ಮೊನ್ನೆ ರಾತ್ರಿ ಕೆಲ ಚಪಲಪ್ರಕೃ ತಿಯ ಜನರು ರಾಜಪ್ರಾಸಾದವನ್ನು ಧ್ವಂಸಗೊಳಿಸಲು ವ್ಯರ್ಥವಾಗಿ ಪ್ರಯತ್ನಿ ಸಿದರು. ಅದು ಅತ್ಯಂತ ನಿಂದ್ಯವಾದ ಕೆಲಸ. ನನಗೆ ಗೊತ್ತಿದೆ: ಈ ಕೆಲಸ ನಿಮ್ಮ ಸಲಹೆಯಿಂದ ಜರುಗಿದ್ದಲ್ಲ; ನೀವು ಇಂಥ ಉನ್ಮತ್ತಕೃತಿ ಯನ್ನು ಅನುಮೋದಿಸಲಾರಿರಿ. ನಾನು ಖಂಡಿತವಾಗಿ ಹೇಳುತ್ತೇನೆ ಈ ಬಗೆಯ ಪೈಶಾಚಿಕ ವ್ಯಾಪಾರದಿಂದ ನಮ್ಮ ದೇಶಕ್ಕೆ ಮಂಗಲವಾಗುವ ಆಶೆಯೆ ಇಲ್ಲ. ಇಂಥ ಕಾರ್ಯ ಇನ್ನೊಮ್ಮೆ ಆಗಕೂಡದೆಂದು ನಾನು ಸ್ಪಷ್ಟವಾಗಿ ಎಚ್ಚರಿಸುತ್ತೇನೆ. ನಿಮ್ಮಲ್ಲಿ ಯಾರಾದರೂ ಅದೂರದರ್ಶಿಗಳು ಗುಪ್ತಹತ್ಯೆಯ ಪ್ರಸಂಗವನ್ನೆತ್ತಿದರೆ, ಅರಾಜಕತೆಯನ್ನುಂಟು ಮಾಡಲು ಹೊರಟರೆ, ಅವರನ್ನು ತಿಳಿ ಹೇಳಿ ತಿದ್ದಿ ನಿಮ್ಮ ಮತಕ್ಕೆ ಒಲಿಸಿಕೊಳ್ಳಿರಿ. ಆಗದಿದ್ದರೆ ಅವರನ್ನು ದಳದಿಂದ ಹೊರಗಟ್ಟಿಬಿಡಿರಿ. ಪಶುಬಲದಿಂದ ಕೆಲಸ ಕೈಗೂಡದೆಂದು ಮತ್ತೊಮ್ಮೆ ಖಂಡಿತ ಹೇಳುತ್ತೇನೆ. ನಿವೀಗ ಗಳಿಸಿ

ಕೊಂಡಿರುವ ಸಾಮರ್ಥ್ಯ ಪಶುಬಲಕ್ಕಿಂತಲೂ ಎಷ್ಟೋ ಮಡಿ ದೊಡ್ಡದಾಗಿದೆ. ಶಾಸನಪದ್ಧತಿಯನ್ನು ಬದಲುಗೊಳಿಸಲು ನೀವು ಅವಲಂಬಿಸಿದ ಉಪಾಯ ಪ್ರಪಂಚದ ಇತಿಹಾಸದಲ್ಲಿಯೇ ಹೊಸತು; ಇದು ಚಿರಸ್ಮರಣೀಯವಾಗಿ ಉಳಿಯುವುದು. ನೀವು ಯಾರನ್ನೂ ಕೊಲ್ಲಕೂಡದು, ಯಾರ ಮೇಲೂ ಬಲ ಪ್ರಯೋಗ ಮಾಡಕೂಡದು ಎಂಬುದನ್ನು ಹೇಳುವುದಕ್ಕೇ ಬಂದದ್ದು ನಾನು ಮುಖ್ಯವಾಗಿ. ನಿಮಗೆ, ದೇಶಕ್ಕೆ ಅನೇಕರಿಂದ ಅನ್ಯಾಯವಾಗಿರಬಹುದ; ಎಲ್ಲವನ್ನೂ ಮರೆತು ಬಿಡಿರಿ. ಇದರಲ್ಲಿಯೇ ಮಂಗಲವಿದೆ; ಈ ಹಾದಿಯಿಂದ ಗಳಿಸಿದ ಸಾಧಾರಣ ತಂತ್ರವೇ ಚಿರಕಾಲ ಬಾಳೀತು."

ದಲಪತಿ ಮಾತು ನಿಲ್ಲಿಸಿದ. ಕೆಲಹೊತ್ತು ಸಭೆ ನಿಸ್ತಬ್ಧವಾಯಿತು. ಕೊನೆಗೆ ಸಭಿಕನೊಬ್ಬನು ಎದ್ದು ನಿಂತು ಮಾತಾಡಿದ: "ಮಹಾಶಯರೆ, ತಾವು ಶಾಂತಿಸಂಯಮ ಮಾರ್ಗವನ್ನು ಭೋಧಿಸಿದಿರಿ; ಇದು ಅವಶ್ಯವಾಗಿ ಪಾಲಿಸತಕ್ಕ ಮಾತು. ಆದರೆ ನನ್ನೊಂದು ಪ್ರಶ್ನೆ—ಯಾರು ಶಾಂತಿಪ್ರಿಯರೊ, ಸುಮ್ಮನೆ ದಾರಿ ಬಿಟ್ಟು ಸರಿಯುವರೋ ಅವರ ಮೇಲೆ ಕೈಮಾಡುವ ಅಗತ್ಯವಿಲ್ಲ. ರಾಜನಿಗೆ ಮಾತ್ರ ಈ ಮಾತು ಹತ್ತುವುದಿಲ್ಲ. ಅವನ ಬಗ್ಗೆ ಏನು ಮಾಡುವುದು ?"

ತುಸಹೊತ್ತು ತಡೆದು ದಲಪತಿ ಹೇಳಿದ: "ಅರಸ ಮುದುಕ. ಆತನ ಜೀವನದ ದಿನಗಳೇ ಮುಗಿಯುತ್ತ ಬಂದಿವೆ. ಇನ್ನು ಹೆಚ್ಚು ದಿನದ ರಾಜ್ಯ ಭೋಗ ತನ್ನ ಅದೃಷ್ಟದಲ್ಲಿಲ್ಲವೆಂಬುದನ್ನರಿತು ಅವನಾಗಿಯೆ ಸಿಂಹಾಸನವನ್ನು ತ್ಯಜಿಸುತ್ತಾನೆ."

"ಯುವರಾಜ ಏನು ಮಾಡಬಹುದು ? ಅವನೇನು ಮುದುಕನಾಗಿಲ್ಲ; ಹೇಡಿಯೂ ಅಲ್ಲ ಅವನು ಸಹಜವಾಗಿ ರಾಜ್ಯವನ್ನು ಬಿಟ್ಟುಕೊಡಬಹುದೆ ?" ಸಭೆಯೊಳಗಿಂದ ಮತ್ತೆ ಪ್ರಶ್ನೆ ಬಂದಿತು.

"ಅವನು ಸ್ವೇಚ್ಛೆಯಿಂದ ಅಧಿಕಾರತ್ಯಾಗ ಮಾಡದಿದ್ದರೆ ತನ್ನ ದುರ್ಗತಿ ಬರಿಹ ತಾನು ಕಂಡುಕೊಳ್ಳುತ್ತಾನೆ. ಅನಿವಾರ್ಯವೆಂದು ಅವನೂ ಸಿಂಹಾಸನವನ್ನು ತೊರೆಯುವನೆಂದು ನನಗೆನಿಸುತ್ತದೆ. ನನಗೆ ಮನವರಿಕೆಯಾದ ಮಾತನ್ನೇ ನಾನು ಹೇಳುತ್ತಿದ್ದೇನೆ. ಅವನ ವೈಯಕ್ತಿಕ ಅಭಿಪ್ರಾಯವನ್ನು

ಅವನೇ ಹೇಳಬಲ್ಲ. ನಾನು ಹೇಳುವುದಿಷ್ಟೆ-ವೃದ್ಧರಾಜನಿಗೆ ಯಾವ ಅಪಾಯವೂ ಆಗಬಾರದು."

ದಳಪತಿಯ ಮಾತು ಕೊನೆಗೊಳ್ಳುವ ಹೊತ್ತಿಗೆ ಮಂದಿರದ ಹೊರಗಡೆ ತುಮುಲ ಕೋಲಾಹಲ ಕೇಳಬಂದಿತು. ಪಕ್ಕನೆ ಬಂದೂಕಿನ ಶಬ್ದಗಳನ್ನು ಕೇಳಿ ಎಲ್ಲರೂ ವ್ಯಾಕುಲರಾದರು. ಮುಚ್ಚಿದ ಬಾಗಿಲಿಗೆ ಒದಕೆಗಳು ಬೀಳತೊಡಗಿದವು. ಮರದ ಕದಗಳು ಈ ಒದಕೆಗಳನ್ನು ತಾಳಿಕೊಳ್ಳಲಾರವು, ಸ್ವಲ್ಪ ಹೊತ್ತಿನಲ್ಲಿಯೆ ಮುರಿದು ಬೀಳುವುದು ಎಂದೆಲ್ಲರೂ ಗಾಬರಿಯಾದರು.

"ಪೋಲಿಸ್‌ಕಮಿಶ್ನರರ ಅಪ್ಪಣೆಯಿದೆ ; ಬೇಗ ಬಾಗಿಲು ತೆರೆಯಿರಿ." ಕದವನ್ನೊಡೆಯುವುದನ್ನು ನಿಲ್ಲಿಸಿ ಹೊರಗಣಿಂದೊಬ್ಬ ಹೂಂಕರಿಸಿದ.

ಬಾಗಿಲನ್ನು ಯಾರೂ ತೆರೆಯಲಿಲ್ಲ. ಎಲ್ಲರೂ ಅತ್ಯಂತ ವಿಚಲಿತರಾದರು. ಅದನ್ನು ಕಂಡು ದಳಪತಿ ಹೇಳಿದ: "ಬಂಧುಗಳೇ, ನಿಮಗೇಕೆ ಇಷ್ಟು ಗಾಬರಿ? ಹೆದರಲು ಏನೂ ಕಾರಣವಿಲ್ಲ. ಸ್ಥೈರ್ಯದಿಂದ ಕುಳಿತುಕೊಳ್ಳಿರಿ. ನೀವು ಯಾವ ಶಾಸನವಿರುದ್ಧ ಕಾರ್ಯವನ್ನೂ ಮಾಡಿಲ್ಲ. ಪೋಲಿಸರು ನಿಮ್ಮನ್ನು ಹಿಡಿಯಲು ಬಂದಿಲ್ಲ; ನನ್ನನ್ನು ಹಿಡಿಯುವುದು ಅವರಿಗೆ ಸಾಧ್ಯವಿಲ್ಲ. ನಾನು ಮೊಲೇ ಓಡಿಹೋಗುವ ಏರ್ಪಾಡು ಮಾಡಿಕೊಂಡಿದ್ದೇನೆ."

ವಿದ್ರೋಹಿಗಳು ತಮ್ಮ ಮಾತಿಗೆ ಕಿವಿಗೊಡದಿದ್ದುದರಿಂದ ಪೋಲಿಸರು ಮತ್ತೆ ಕದವನ್ನೊದೆಯಲಾರಂಭಿಸಿದರು. ತುಸು ಹೊತ್ತಿನಲ್ಲಿಯೇ ಬಾಗಿಲು ಮುರಿದು ಬಿದ್ದಿತು. ಪಂಜುಹಿಡಿದು ಬಹುಜನ ಪೋಲಿಸರು ಭವನವನ್ನು ಹೊಕ್ಕರು. ಸಭೆಯಲ್ಲಿ ಅಸಂಖ್ಯ ಸದ್ಗೃಹಸ್ಥರು ಸಾಲಾಗಿ ಓರಣದಿಂದ ಕುಳಿತಿದ್ದರು; ಎಲ್ಲಿಯೂ ಕೊಂಚವೂ ಅನವಸ್ಥೆಯಿರಲಿಲ್ಲ; ಶಾಂತಿಭಂಗದ ಲಕ್ಷಣವೂ ತೋರಲಿಲ್ಲ. ಕಮಿಶನರ್ ಬೇರೆ ಕಡೆ ಗಮನವನ್ನೇ ಕೊಡದೆ ಅಧ್ಯಕ್ಷಪೀಠದ ಕಡೆಗೆ ಧಾವಿಸಿದ. ಆ ಆಸನದಲ್ಲಿ ಯಾರೂ ಕಾಣಲಿಲ್ಲ. ಬರ್ನಾರ್ಡ್ ತತ್‌ಕ್ಷಣವೇ ಅಕ್ಕಪಕ್ಕದ ಕೋಣೆಗಳನ್ನು ಶೋಧಿಸತೊಡಗಿದ. ಗೊತ್ತು ಹಚ್ಚಿ ಹೊಂಚುಹಾಕಿ ಶ್ರಮಬಟ್ಟು ಧಾವಿಸಿಬಂದುದಕ್ಕೆ ಬೇಟೆ ಎಲ್ಲಿಯೂ ಸಿಕ್ಕಲಿಲ್ಲ. ಈ ಸಾರಿಯೂ ತನ್ನ ಮನೋರಥ ಮುರಿದು ಬಿದ್ದುದಕ್ಕೆ ಅವನಿಗೆ ಮನೋಗ್ಲಾನಿಯುಂಟಾಯಿತು.

ತಣ್ಣನೆಯ ಗಾಳಿಬಂದು ಜನಾರ್ದನನ ಮೈಗೆ ಸೋಂಕಿತು; ಅವನು ಎಡಗಡೆ ಹೊರಳಿ ನೋಡಿದ. ಗೋಡೆಯಲ್ಲಿ ತುಸು ಎತ್ತರದಲ್ಲಿ ಸಣ್ಣ ಬಾಗಿಲೊಂದಿತ್ತು. ಅವನು ಕೂಡಲೆ ಕೆಲವು ಪೇದೆಗಳಿಗೆ ಮುಂದಿರದಿಂದ ಯಾರೂ ಹೊರಬೀಳದಂತೆ ನೋಡಿಕೊಳ್ಳಲು ಹೇಳಿ ಅಜಗಾವಲಿಟ್ಟು, ಕೆಲವರನ್ನು ತನ್ನ ಹಿಂದೆ ಕರೆದುಕೊಂಡು ಆ ಬಾಗಿಲಲ್ಲಿ ತೂರಿಕೊಂಡು ಹೋದ.

ಆ ಕಟ್ಟಡಕ್ಕೆ ಹೊಂದಿದ್ದ ಕಿರಿದಾದ ಕೋಣೆಯೊಂದರಲ್ಲಿ ಜಾನ್ ಪಿಟರ್ಸ್ ಮೇರಿಯೊಡನೆ ಸುರಾಪಾನಮಾಡುತ್ತ ಕುಳಿತಿದ್ದ. ಬಹಳ ಹೊತ್ತಿನಿಂದಲೂ ಅವರ ಆಮೋದಪ್ರಮೋದ ಕಾರ್ಯಕ್ರಮ ನಡೆದಂತಿತ್ತು ದೃಶ್ಯ. ಸುರಾಪಾನದಿಂದ ಅವರ ಮನಸು ಹಿಗ್ಗಿ ನಲಿಯುತ್ತಿತ್ತು; ಸಲ್ಲಾಪದಲ್ಲಿ ಅವರು ಮೈಮರೆತಿದ್ದರು; ಜಗತ್ತಿನ ಯಾವ ಸಮಾಚಾರವೂ ಅವರ ಕಿವಿಯನ್ನು ಸೇರುವ ಸಂಭವವಿರಲಿಲ್ಲ. ಹಠಾತ್ ಯಾರೋ ಬಾಗಿಲನ್ನು ತಳ್ಳಿ ತೆರೆದ ಸದ್ದನ್ನು ಕೇಳಿ ಪಿಟರ್ಸ್ ಅತ್ತ ನೋಡಿದ. ಬಾಗಿಲಲ್ಲಿ ಜನಾರ್ದನನ ಗಂಭೀರಮೂರ್ತಿ. ಅತಿಶ್ರಮದಿಂದ ಅವನು ತೇಕುತ್ತಿದ್ದ. ಮುಖದಲ್ಲಿ ಕ್ರೋಧಕ್ಷೋಭಗಳು ಮೂಡಿದ್ದವು.

"ನಿಮ್ಮನ್ನಿಲ್ಲಿಗೆ ಯಾರು ತಂದರು ? ಏಕೆ ಬಂದಿರಿ ?" ಕೋಪದಿಂದ ಪಿಟರ್ಸ್ ಕೇಳಿದ.

ಜನಾರ್ದನ ಉತ್ತರವೀಯಲಿಲ್ಲ. ಮೇರಿ-ಜಾನರನ್ನು ತೀಕ್ಷ್ಣ ದೃಷ್ಟಿಯಿಂದ ನೋಡತೊಡಗಿದ. 'ಇವರ ವಿಲಾಸ ಎಷ್ಟು ಹೊತ್ತಿನಿಂದ ನಡೆದಿದೆ?' ಎಂದು ಅವನ ಮನಸು ಯೋಚಿಸುತ್ತಿತ್ತು. ಪಿಟರ್ಸನ ಭಾವಭಂಗಿಯಲ್ಲಿ ಉದ್ವೇಗ ಉತ್ಕಂಠೆಗಳ ಯಾವ ಚಿಹ್ನವೂ ಕಾಣಲಿಲ್ಲ. ಅವರ ಮುಂದಿದ್ದ ಸೀಸೆ ಬಹುಮಟ್ಟಿಗೆ ಬರಿದಾಗಿತ್ತು. ಕುಡಿತ ಬಹಳಹೊತ್ತಿನಿಂದ ನಡೆದಿರದಿದ್ದರೆ ಸೀಸೆ ಇಷ್ಟು ಬರಿದಾಗಲಾರದು. ಜನಾರ್ದನನಿಗೆ ಏನೇನೂ ತೋಚದಾಯಿತು. ತನ್ನ ಮನಸಿನ ಮುನಿಸುಬೇಸರಗಳನ್ನು ಹೊರಗೆ ತೋರಗೊಡದೆ ಅವನೆಂದ: "ನನ್ನನ್ನು ಯಾರೂ ಇಲ್ಲಿಗೆ ತರಲಿಲ್ಲ, ನಾನೇ ಬಂದೆ. ಪೋಲೀಸ್ ಕಮಿಶನರ್ ನಾನು; ಬೇಕಾದಾಗ ಯಾವ ಮನೆಯಲ್ಲಿ ಬೇಕಾದರೂ ಪ್ರವೇಶಿಸುವ ಅಧಿಕಾರ ನನಗಿದೆ. ಆ ಅಧಿಕಾರಬಲದಿಂದಲೇ ಇಲ್ಲಿಗೂ ಬಂದಿದ್ದೇನೆ."

" ಬರ್ನಾರ್ಡ್, ನೀವು ಗುಪ್ತಚಾರರಂತೆ ನನ್ನ ಮೇಲೆರಗಿದ್ದು ಇದು ಎರಡನೆಯ ಸಲ. ನಿಮ್ಮ ಉದ್ದೇಶವೇನು ? ನಿಮಗೇನು ಬೇಕಾಗಿದೆ? ಮನಬಿಚ್ಚಿ ಹೇಳಿರಿ." ಸಂಯತಸ್ವರದಲ್ಲಿ ಜಾನ್ ಪಿಟರ್ಸ್ ಕೇಳಿದ.

ಬರ್ನಾರ್ಡ್‌ನಿಗೆ ತಟ್ಟನೆ ಏನು ಹೇಳುವುದೆಂದು ಹೊಳೆಯಲಿಲ್ಲ. ಮಂಕುಕವಿದನಂತೆ ತಲೆತುರಿಸುತ್ತ ನಿಂತ. ತುಸುಹೊತ್ತಿನ ಮೇಲೆ ಮಾತು ಅವನ ಬಾಯಿಂದ ಹೊರಟಿತು : " ನಿಜವಾಗಿಯೂ ನಾನು ಪ್ಯಾಲಿ. ಇಂದಿನಂತೆ ನಾನೆಂದೂ ಹತಪ್ರಭನಾಗಿರಲಿಲ್ಲ ಯಾರನ್ನು ಹಿಡಿಯಲು ಬಂದಿದ್ದೆನೋ ಅವನು ನನ್ನ ಬೆರಳ ಸಂದಿನೊಳಗಿಂದ ನುಣಿಚಿಕೊಂಡ."

ಸುಧೆಯ ಬಟ್ಟಲನ್ನು ಕೆಳಗಿರಿಸುತ್ತ ಜಾನ್ ಪಿಟರ್ಸ್ " ಯಾರನ್ನು ಹುಡುಕುತ್ತಿದ್ದೀರಿ ? ಓಹೋ, ವಿದ್ರೋಹಿಗಳ ದಳಪತಿಯನ್ನಲ್ಲವೆ ?" ಎಂದ ಪರಿಹಾಸ್ಯವಾಗಿ.

ಬರ್ನಾರ್ಡ್ ಹತಾಶಭಾವದಿಂದ : " ಹೌದು. ಆದರವನು ನನ್ನನ್ನು ಹುಚ್ಚುಮಾಡಿಬಿಟ್ಟ ! ಹುಟ್ಟಿದಮೇಲೇ ನಾನು ಹೀಗೆ ಮಂಗನಾಗಿದ್ದಿಲ್ಲ. ರಾಜನಿಗ ಹೇಗೆ ಮುಖ ತೋರಿಸಲಿ ?" ಎಂದ.

" ಇನ್ನು ಅದನ್ನು ಚಿಂತಿಸಿ ಏನು ಫಲ ? ನೀವೀಗ ದಣಿದು ಬಹಳ ಬಸವಳಿದಂತೆ ಕಾಣುತ್ತೀರಿ ; ನಿಮ್ಮ ಮನಸಿಗೂ ಬಹಳ ತಾಪವಾದಂತಿದೆ. ನಿಮ್ಮ ಮೇಲೆ ನನಗಿನ್ನೇನು ಕೋಪವಿಲ್ಲ. ನೀವು ಕರ್ತವ್ಯಪಾಲನೆಗೆ ಬಂದಿದ್ದೀರಿ ಕೆಲಸಕ್ಕೆ ಬಂದಿದ್ದರೂ ಕೊಂಚ ಮದ್ಯವನ್ನು ಸೇವಿಸಿದರೆ ತಪ್ಪಲ್ಲ. ಕುಳಿತುಕೊಂಡು ನನ್ನೊಂದಿಗೆ ಒಂದೆರಡು ಬಟ್ಟಲು ಮದ್ಯ ಕುಡಿಯಿರಿ. ಅಸ್ವಸ್ಥವಾಗಿರುವ ನಿಮ್ಮ ಮನಸಿಗೆ ಕುಡಿದು ಸ್ವಲ್ಪ ಸ್ಫೂರ್ತಿತಂದುಕೊಳ್ಳಿರಿ."

ಬರ್ನಾರ್ಡ್ ಹೋಗಿ ಕುರ್ಚಿಯಲ್ಲಿ ಕುಳಿತು ಕ್ಷಣದಲ್ಲಿ ಒಂದು ಬಟ್ಟಲು ಮದ್ಯವನ್ನು ಸ್ವಾಹಾ ಮಾಡಿದ. " ಇಂದು ರಾತ್ರಿ ತಮ್ಮನ್ನು ಕಾಣಲು ಅವಕಾಶ ಸಿಕ್ಕೀತೆ ?" ಬಟ್ಟಲನ್ನು ಕೆಳಗಿಡುತ್ತ ಬರ್ನಾರ್ಡ್ ಪ್ರಶ್ನಿಸಿದ.

" ಇಲ್ಲಿಲ್ಲ ಇವರಿಂದು ನನ್ನಲ್ಲಿಯೇ ಇರುತ್ತಾರೆ. ನಾನಿವರನ್ನು ಬಿಡುವುದಿಲ್ಲ " ಎಂದಳು ಮೇರಿ.

" ಹಾಗಾದರೆ ನಾನಿನ್ನು ಹೊರಡುತ್ತೇನೆ. ಅನಿವಾರ್ಯವಾಗಿ ತಮ್ಮ ಸೊಗಸಿನಲ್ಲಿ ಅಡ್ಡಬಂದು ರಸಭಂಗ ಮಾಡಿದೆ. ಕ್ಷಮಿಸಿರಿ" ಎಂದ ಬರ್ನಾರ್ಡ್.

ಬರ್ನಾರ್ಡ್ ಅಲ್ಲಿಂದ ಹೊರಟುಹೋದ ಬಳಿಕ, ಮೇರಿ ಎವೆಯಿಕ್ಕದೆ ಜಾನ್ ಪಿಟರ್ಸ್‌ನ ಮೋರೆಯ ಕಡೆ ನೋಡುತ್ತ ನುಡಿದಳು : "ಇವರೇಕೆ ಹೀಗೆ ನಿಮ್ಮ ಬೆನ್ನುಹತ್ತಿದ್ದಾರೆ ? ಕೆಲದಿನಗಳಿಂದ ನಿಮ್ಮಿಬ್ಬರಲ್ಲಿ ಕಣ್ಣು ಮುಚ್ಚಾಟ ನಡೆದಂತೆ ಕಾಣುತ್ತದೆ. ಏನಾಗಿದೆ ಹೇಳಿರಿ."

ಪಿಟರ್ಸ್ ಹೇಳಿದ : ' ಸುಂದರಿ, ನಿನಗೆ ಎಲ್ಲವನ್ನೂ ಹೇಳಬಲ್ಲೆ— ಇದೊಂದನ್ನು ಮಾತ್ರ ಬಿಟ್ಟು. ದಯವಿಟ್ಟು ಇದನ್ನು ಕೇಳಬೇಡ. ನನ್ನ ನಿನ್ನ ಮಾತನ್ನು ನೆನೆದುಕೋ ನಾನು ಹೇಳಿದಂತೆ ಇದಿರಾಡದೆ ಮಾಡು, ಕಾರಣವನ್ನು ವಿಚಾರಿಸಬೇಡ."

"ಅದು ನಿಜ ಆದರೆ ಕೆಲಸ ನಿಮಗೆ ಸಹಜವಿದ್ದಷ್ಟು ನನಗೆ ಸಹಜ ವಲ್ಲ." ಮೇರಿ ತಲೆತಗ್ಗಿಸಿಕೊಂಡು ನುಡಿದಳು.

ನಿನಗೂ ಸಹಜವೆ. ನೀನು ಒಳ್ಳೇ ಬುದ್ಧಿವಂತೆ. ಇನ್ನು ಕೆಲದಿನ ತಾಳು ; ನಿನ್ನ ಸಹಾಯದಿಂದ ನಾನು ನನ್ನ ಕಾರ್ಯದಲ್ಲಿ ಯಶಸ್ವಿಯಾಗುವೆ. ದಂಡೆ ಸಮೀಪಿಸಿದಾಗ ದೋಣಿಯನ್ನು ಮುಳುಗಿಸಬೇಡ.''

* * * *

ಅಂದು ರಾತ್ರಿ ನೃತ್ಯಕೇಳಿಯಲ್ಲಿ ಜಾನ್ ಪಿಟರ್ಸ್ ಹಠಾತ್ತಾಗಿ ಗ್ರೇಸ ಳನ್ನು ಬಿಟ್ಟು ಹೊರಟುಹೋಗಿದ್ದ. ಬಹಳ ರಾತ್ರಿಗೆ ತಿರುಗಿ ಹೋದಾಗ ಗ್ರೇಸ್ "ಇಷ್ಟು ಹೊತ್ತು ಎಲ್ಲಿದ್ದಿರಿ ? ಇನ್ನು ಅರ್ಧಗಂಟೆಯಲ್ಲಿ ನಾನಿಲ್ಲಿಂದ ಹೊರಡುವೆ; ಇನ್ನೊಂದು ನರ್ತನ ಮಾತ್ರ ಉಳಿದಿದೆ." ಎಂದಳು.

"ಹಾಗಾದರೆ ತಡವೇಕೆ ? ಕುಣಿತವನ್ನು ಮುಗಿಸು.''

"ನನ್ನ ಮಾತಿಗೆ ಉತ್ತರವನ್ನೇ ಕೊಡಲಿಲ್ಲವಲ್ಲ, ಎಲ್ಲಿ ಹೋಗಿದ್ದಿರಿ ?"

"ನಾನೂ ಬರ್ನಾರ್ಡರೂ ಕೂಡಿ ಇತಿಹಾಸವನ್ನು ರಚಿಸುತ್ತಿದ್ದೇವೆ. ಆ ಕೆಲಸದಲ್ಲಿ ವಿಲಂಬವಾಯಿತು. ಈ ಮಾತಿನಲ್ಲಿ ನಿನಗೆ ನಂಬಿಕೆಯಾಗ ದಿದ್ದರೆ ಬರ್ನಾರ್ಡರನ್ನು ಕೇಳಬಹುದು ; ಅವರಿಂದ ಎಲ್ಲ ತಿಳಿಯುತ್ತದೆ." ಎನ್ನುತ್ತ ಪಿಟರ್ಸ್ ಗ್ರೇಸಳೊಂದಿಗೆ ನೃತ್ಯಶಾಲೆಯನ್ನು ಪ್ರವೇಶಿಸಿದ.

**೨೫**

ಊರ ಹೊರವಳಯದ ಪೂರ್ವತ್ಯಭಾಗದಲ್ಲಿ ದೊಡ್ಡದೊಂದು ತೈಲಶಕಟವು ಪೂರ್ಣವೇಗದಿಂದ ಸಾಗಿತ್ತು. ಅದರಲ್ಲಿ ಜಾನ್ ಪಿಟರ್ಸ್ ಗ್ರೇಸಳೊಂದಿಗೆ

ಸಂಚಾರಕ್ಕೆ ಹೊರಟಿದ್ದ. ದಾರಿಯ ಇಕ್ಕೆಲಗಳಲ್ಲಿ ಅನೇಕ ಕಾರಖಾನೆಗಳಿದ್ದವು. ಬರ್ಜಿಲಂಡಿನ ನಿಸರ್ಗ ಸೌಂದರ್ಯವನ್ನೂ ಶಿಲ್ಪಸೌಂದರ್ಯವನ್ನೂ ಕಂಡು ಗ್ರೇಸಳು ಮುಗ್ಧಳಾದಳು. ನಿಮ್ಮ ದೇಶವನ್ನು ಕಂಡು ನಾನು ಮುಗ್ಧಳಾದೆ. ನಿಮ್ಮ ನಾಡು ಇಷ್ಟು ಸಸ್ಯಶ್ಯಾಮಲವಾಗಿದ್ದೀತು, ಸಂಪತ್ಸಮೃದ್ಧವಾಗಿದ್ದೀತು ಎಂದು ನಾನು ಬಗೆದಿರಲಿಲ್ಲ. ಬರ್ಜಿಲಂಡ್ ಚಿಕ್ಕದಾದರೂ ಯುರೋಪದ ಅತ್ಯಂತ ಸಮೃದ್ಧರಾಜ್ಯಗಳ ಮಾಲಿಕೆಯಲ್ಲಿ ಬರುವುದು.'' ಎಂದು ಗ್ರೇಸ್ ಮೆಚ್ಚಿ ಮಾತನಾಡಿದಳು.

"ನಿಜ, ನಮ್ಮ ತಾಯ್ನಾಡು ಬಡವಲ್ಲ; ಚಿನ್ನದ ಬೀಡು. ಆದರೆ ದುರ್ದೈವದಿಂದ ಈ ನಾಡ ಸಿರಿಯೆಲ್ಲ ಅಪವ್ಯಯವಾಗುತ್ತಿದೆ ಈಗೀಗ ಜನಕ್ಕೆ ಅರಿವು ಹುಟ್ಟಿದ್ದು ಇದ್ದದ್ದರಲ್ಲಿಯೇ ಸಂತೋಷದ ಸಂಗತಿ. ಇನ್ನೊಂದು ವರ್ಷದಲ್ಲಿಯೇ ರಾಜ್ಯದಲ್ಲಿ ಆಂತರಿಕ ಸುಧಾರಣೆಯಾದೀತು, ಜನರು ಕುರುಡರಂತೆ ನಡೆಯಲಿಕ್ಕಿಲ್ಲ, ಸ್ವಾವಲಂಬಿಯಾಗಿ ಬಾಳಿಯಾರು ಎಂದು ನಮ್ಮ ಭರವಸೆ."

"ನೀವು ಈ ರಾಜ್ಯದ ಯುವರಾಜರು. ಸಾಮಾನ್ಯಪ್ರಜೆಯಂತೆ ಏಕೆ ಮಾತಾಡುತ್ತಿರುವಿರಿ?" ಗ್ರೇಸ್ ವಿಸ್ಮಯದಿಂದ ಕೇಳಿದಳು.

"ಪ್ರಜೆಗಳದೂ ಒಂದು ಪಕ್ಷವಿದೆ ಎಲ್ಲ ವಿಷಯಗಳನ್ನು ಅವರು ತಮ್ಮ ದೃಷ್ಟಿಕೋನದಿಂದ ನೋಡುವರು. ಅದು ಸರ್ವಥಾ ಉಪೇಕ್ಷಣೀಯವಲ್ಲ ಅವರ ಹಕ್ಕು ಯಥಾಯೋಗ್ಯವೆಂದೇ, ಅವರ ವಾದ ಸುಸಂಗತವೆಂದೇ ನನ್ನ ವಿಶ್ವಾಸ. ಸ್ವಾರ್ಥಕ್ಕಾಗಿ ಅವರ ಹಕ್ಕನ್ನು ಹೇಗೆ ಅಲ್ಲಗಳೆಯಲಿ?"

"ಆದರೆ ನಿಮ್ಮ ಬಾಯಲ್ಲಿ ಈ ಮಾತು ಒಪ್ಪುವುದಿಲ್ಲ. ನಿಮಗೆ ಯುವರಾಜರಾಗಿರುವುದಕ್ಕಿಂತ ಮಿ. ಜಾನ್ ಪಿಟರ್ಸ್ ಎಂಬ ಸಾಮಾನ್ಯ ಸದ್ಗೃಹಸ್ಥರಾಗಿರುವುದೇ ಬೇಕಾಗಿದೆಯೆಂದು ತೋರುತ್ತಿದೆ.''

"ಹೌದು, ಸತ್ಯವಾಗಿ ಅದೇ ನನಗೆ ಇಷ್ಟ. ನಿನ್ನೊಂದಿಗಿದ್ದರೆ, ಪದಚ್ಯುತನಾಗಿ ರಾಜ್ಯಭ್ರಷ್ಟನಾದರೂ ಸ್ವರ್ಗಸುಖವನ್ನೇ ಅನುಭವಿಸುವೆನೆಂದು ನನಗೆನಿಸುತ್ತದೆ."

ಗ್ರೇಸ್ ನಿಟ್ಟುಸಿರುಗರೆದು, "ನಾನು ಥೇಟರನ್ನು ಬಿಡಬೇಕಾಗಿ ಬರುವುದೋ ಏನೋ" ಎಂದಳು.

"ನನ್ನ ಇಷ್ಟವಂತೂ ಅದೇ. ಥೇಟರ್ ಬಿಟ್ಟರೆ ನಿನ್ನ ಎದೆ ಒಡೆದು ಹೋಗಲಾರದಷ್ಟೆ ?"

"ನಿಮಗಾಗಿ ನಾನು ಎಲ್ಲವನ್ನೂ ಮಾಡಬಲ್ಲೆ. ಥೇಟರ್ ಬಿಡುವುದು ಅತಿ ಕ್ಷುದ್ರವಿಷಯ."

ಬಂಡಿ ಅಂಕುಡೊಂಕಾದ ಪಾರ್ವತ್ಯಪಥವನ್ನು ಅತಿಕ್ರಮಿಸಿ ಇನ್ನೊಂದು ನಗರವನ್ನು ಪ್ರವೇಶಿಸಿತು ಸಾಧಾರಣ ಶ್ರಮಜೀವಿಗಳು ಹಾದಿಯ ಬದಿಗಳಲ್ಲಿ ನಿಂತು ವಿಸ್ಮಯದಿಂದ ಬಂಡಿಯನ್ನು ನೋಡುತ್ತಿದ್ದರು. ಅದು ದ್ರುತವೇಗದಿಂದ ಮುಂಬರಿದಿತ್ತು.

"ಇಷ್ಟೇಕೆ ಓಡಿಸುತ್ತೀರಿ ?" ಗ್ರೇಸ್ ಪ್ರಶ್ನಿಸಿದಳು.

"ಇಲ್ಲಿಯ ಜನ ಸಾಧಾರಣತಂತ್ರವಾದಿಗಳು. ರಾಜವಂಶವನ್ನು ಕಿತ್ತೊತ್ತಯಲು ಪ್ರಯತ್ನಿಸುವವರು ಇವರ ಹೃದಯದಲ್ಲಿ ನಮ್ಮ ಬಗ್ಗೆ ತಿರಸ್ಕಾರ-ದ್ವೇಷ ಭಾವನೆ ಬದ್ಧಮೂಲವಾಗಿದೆ. ನನ್ನನ್ನು ಗುರುತಿಸಿಬಿಟ್ಟರೆ ಬಂಡಿಯನ್ನು ತಡೆಬಿ ನನ್ನನ್ನು ಗತಿಗಾಣಿಸದೆ ಬಿಡರು."

ಭಯದಿಂದ ಗ್ರೇಸಳ ಮೈ ಜುಮ್ಮೆಂದಿತು. ಅವಳೆಂದಳು: "ಸರ್ವನಾಶ ! ಇಷ್ಟೊಂದು ಪ್ರಜೆಗಳ ತಿರಸ್ಕಾರಕ್ಕೆ ಪಾತ್ರವಾದ ರಾಜವಂಶ ಮಹಾ ದುರ್ದೈವಿಯೆ ಸರಿ !"

"ಇವರು ನನ್ನ ಬಗ್ಗೆ ಎಷ್ಟು ಹೇಸಿಕೊಂಡಿರುವರೋ, ನಿಜವಾಗಿ ನಾನಷ್ಟು ಹೇಸಿಯಲ್ಲ ನಗರದಲ್ಲಿ ನನಗೆ ಅನೇಕಶತ್ರುಗಳಿದ್ದಾರೆ; ಅವರು ನನ್ನನ್ನು ಕ್ಷೇಮದಿಂದ ಊರುಬಿಟ್ಟು ಹೋಗಗೊಟ್ಟಾರೆಂದು ನನಗೆ ಎನಿಸುವುದಿಲ್ಲ."

"ನಿಜವಾಗಿ ನಿಮ್ಮ ಜೀವನ ಸಂಕಟದಲ್ಲಿ ಸಿಕ್ಕುವ ಸಂಭವವಿದೆಯೆ ?"

"ಇಲ್ಲಿ ಕ್ರಾಂತಿಕಾರರ ದಳವೊಂದಿದೆ. ರಕ್ತಪಾತವಿಲ್ಲದೆ ಶಾಸನ ಪದ್ಧತಿ ಬದಲಾಗುವುದಿಲ್ಲವೆಂದು ಅವರ ಅಭಿಪ್ರಾಯ."

"ಅವರ ದಳಪತಿ ಮಾತ್ರ ಅತ್ಯದ್ಭುತಮನುಷ್ಯ. ನಿನ್ನೆ ರಾತ್ರಿ ಅವನು ಒಂದು ಕತ್ತಲೆಯ ಮನೆಯಲ್ಲಿ ಮುನ್ನೂರು ಜನ ವಿದ್ರೋಹಿಗಳನ್ನು ವಿದ್ರೋ

ಹಕ್ಕಾಗಿ ಪ್ರೋತ್ಸಾಹಿಸಿದನೆಂದು ಕೇಳಿದ್ದೇನೆ. ಆದರೆ ಸಭಿಕರು ಯಾರೂ ಅವನನ್ನು ಗುರುತಿಸಲಿಲ್ಲವಂತೆ."

" ನಾನೂ ಕೇಳಿದ್ದೇನೆ. ಹೌದಂತೆ "

ರಾಜನ ಮೇಲೆ ಅತ್ಯಾಚಾರವೆಸಗುವುದು ದಲಪತಿಗೆ ಬೇಡವಂತೆ; ಅವನನ್ನು ವೈಗೆ ಪೆಟ್ಟಾಗದಂತೆ ರಾಜ್ಯದಿಂದ ಅಟ್ಟುವುದು ಅವನಿಗಿಷ್ಟವಂತೆ; ನಿಮ್ಮ ಬಗ್ಗೆ ಮಾತ್ರ ಅವನಿಗೆ ಸ್ವಲ್ಪ ರೋಷವಂತೆ. ನೀವು ಸಹಜವಾಗಿ ಸಿಂಹಾಸನವನ್ನು ಬಿಡದಿದ್ದರೆ ನಿಮ್ಮನ್ನು ಸುಮ್ಮನೆ ಬಿಡಲಾರರು "

" ಅದನ್ನೂ ಕೇಳಿದ್ದೇನೆ. ಜನಸಾಮಾನ್ಯರು ನನ್ನ ಪಕ್ಷಪಾತಿಗಳಲ್ಲವೆಂದು ಇದರಿಂದಲೇ ನಿನಗೆ ತಿಳಿಯಬಹುದು."

" ನಿಮ್ಮ ವಾಸ್ತವಪರಿಚಯ ಜನಕ್ಕಿದ್ದರೆ, ನಿಮ್ಮ ಬಗ್ಗೆ ಅವರ ಭಾವನೆಯೇ ಬೇರೆಯಾಗಿರುತ್ತಿತ್ತು."

" ಹಾಗೇನೂ ಹೇಳಲಾಗುವುದಿಲ್ಲ ನಾವು ವಂಶಪರಂಪರೆಯಿಂದಲೂ ಅತ್ಯಾಚಾರಿಗಳು. ನಮ್ಮ ವಂಶ ಅಧಃಪತನ ಹೊಂದಿದೆ. ಯುರೋಪಿನಲ್ಲಿಯ ಯಾವ ರಾಜವಂಶವೂ ನಮ್ಮಷ್ಟು ಪ್ರಜಾಪೀಡಕವಾಗಿಲ್ಲ."

ಮೇರಿ ನಿಡಿದಾಗಿ ಉಸಿರು ಹಾಕಿಳು. ಬಳಿಕೆಂದಳು: "ಇವೆಲ್ಲ ಅಪ್ರಿಯ ಪ್ರಸಂಗಗಳ ಬಗ್ಗೆ ಆಲೋಚಿಸಲು ನನಗೆ ಮನಸಿಲ್ಲ ಆಗುವುದು ಆದೀತು. ರಾಜನ ಅಥವಾ ರಾಜವಂಶೀಯರ ಜೀವನವು ಅತ್ಯಂತ ವಿಡಂಬನಾಪೂರ್ಣವೆಂದು ನನಗೆನಿಸುತ್ತದೆ. ಹೀಗಿರುವಲ್ಲಿ ನೀವು ಯುವರಾಜರಾಗಿರುವುದಕ್ಕಿಂತ ಮಿ. ಜಾನ್ ಪಿಟರ್ಸ್ ಆಗಿರುವುದೇ ಒಳ್ಳೇದು."

" ಸಾವಿರಾರಪಾಲು ಒಳ್ಳೇದು. ನಾನು ಬಯಸುವುದು ಅದನ್ನೇ." ಪಿಟರ್ಸ್ ಉತ್ಸಾಹದಿಂದ ನುಡಿದ.

ಅಷ್ಟರಲ್ಲಿ ಬಂಡಿ ನಗರಪ್ರಾಂತ್ಯದಲ್ಲಿದ್ದ ಉಪವನವನ್ನು ಸಮೀಪಿಸಿತು. ದಾರಿಯ ಇಕ್ಕೆಲಗಳಲ್ಲಿ ಸುಂದರವಾದ ಮಧ್ಯಮಶ್ರೇಣಿಯ ಜನರ ಮನೆಗಳಿದ್ದವು. ಅವುಗಳನ್ನು ನೋಡಿ ಗ್ರೇಸ್ ಕೇಳಿದಳು: " ನಿಮ್ಮ ದೇಶದ ಮಧ್ಯಮಶ್ರೇಣಿಯ ಜನರ ಅರ್ಥಾತ್ ವ್ಯಾಪಾರಿಗಳು, ಶಿಲ್ಪಿಗಳು, ಕಾರಖಾನೆದಾರರ ಕೂಡ ಶ್ರಮಜೀವಿ ಸಂಪ್ರದಾಯದವರ ಸಾಮಂಜಸ್ಯವೆಲ್ಲಿದೆಯೋ

ನನಗೆ ತಿಳಿಯಲಿಲ್ಲ. ಸಾಮಾನ್ಯ ಶ್ರಮಜೀವಿಗಳು ವಿಪ್ಲವವಾದಿಗಳಾಗಿದ್ದರೆ ಈ ಮಧ್ಯಮವರ್ಗದವರೆಲ್ಲ ವಿಪ್ಲವವಾದವನ್ನು ಎದುರಿಸುವುದೇ ಕರ್ತವ್ಯವೆಂದು ತಿಳಿದಿರುವಂತೆ ನನಗೆ ತೋರುತ್ತದೆ."

"ಸಾಮಂಜಸ್ಯವೆಲ್ಲಿದೆಯೆಂಬುದು ಇನ್ನು ಐವತ್ತು ವರ್ಷಗಳ ಮೇಲೆ ಗೊತ್ತಾಗುವುದು ಐವತ್ತು ವರ್ಷಗಳ ತರುವಾಯ ನಮ್ಮ ಈ ಪುಟ್ಟ ಬರ್ಜಿಲಂಡ್ ರಾಜ್ಯ ಪ್ರಪಂಚದಲ್ಲಿ ಮಹಾಬಲಿಷ್ಠವಾದ ಮಾದರಿಯ ರಾಜ್ಯವಾಗಿ ಮಾರ್ಪಟ್ಟಿರುವುದು. ನಡುದಾರಿಯಲ್ಲಿಯೆ ಇದರ ಏಳಿಗೆಗೆ ತಡೆಯುಂಟಾದರೆ, ಸ್ವಾತಂತ್ರ್ಯ ನಷ್ಟವಾದರೆ, ಈ ಆಶೆ ಪೂರ್ಣವಾಗುವ ಸಂಭವವಿಲ್ಲ"

"ಇದರ ಏಳಿಗೆಯಲ್ಲಿ ಅಡ್ಡ ಬರುವವರು ಯಾರು ?"

"ಈ ಸಾಹಸ ಯಾರಾದರೂ ಮಾಡುವವರಿದ್ದರೆ ಜರ್ಮನಿಯೊಂದು ಮಾಡೀತು. ನಮ್ಮ ರಾಜ್ಯವನ್ನು ಮುಷ್ಟಿಯಲ್ಲಿ ಹಿಡಿಯಲು ಜರ್ಮನಿ ಈಗಿನಿಂದಲೇ ಪ್ರಯತ್ನಿಸುತ್ತಲಿದೆ. ಜರ್ಮನಿ ಮುಂದಿನ ವಿಚಾರ ಮಾಡಿ ನೋಡಿದೆ. ಸ್ವಲ್ಪ ಸಮಯದಲ್ಲಿ ಬರ್ಜಿಲಂಡ್ ರಾಜ್ಯವು ತನ್ನ ಪ್ರಬಲ ಪ್ರತಿದ್ವಂದ್ವಿಯಾಗುವುದೆಂದು ಅದು ತಿಳಿದುಕೊಂಡಿದೆ. ಎಂತಲೇ ಜರ್ಮನಿ ತನ್ನ ಹಾದಿಯನ್ನು ಪರಿಷ್ಕರಿಸಿಕೊಳ್ಳಲು ಯತ್ನಿಸುತ್ತಿದೆ. 'ಸಿಕ್ಕಷ್ಟೂ ಬೇಕು.' ಎಂಬುದು ಕೈಸರನ ಮೂಲಮಂತ್ರ. ಆ ಮೇರೆಗೆ ಜರ್ಮನಿ ಯಾವಾಗಲೂ ಎರಡೂ ಕೈಗಳನ್ನು ಚಾಚಿಕೊಂಡಿದ್ದು, ಸಿಕ್ಕಷ್ಟನ್ನು ಬಳಿದುಕೊಂಡು ನುಂಗುತ್ತಿದೆ; ಭವಿಷ್ಯತ್ತಿನಲ್ಲಿ ಯಾರು ಬೆಳೆದು ಮುಲೆತು ನಿಂತಾರೆಂದು ತೋರುವುದೋ ಅವರನ್ನು ಬಗ್ಗುಬಡಿಯಲು ನೋಡುತ್ತಿದೆ ಇದಕ್ಕೂ ಕೆಟ್ಟ ಸುದ್ದಿಯೆಂದರೆ ನಮ್ಮ ಕಕ್ಕನ ಕಿವಿಗಳು ಜರ್ಮನಿಯ ದುರ್ಮಂತ್ರಕ್ಕೆ ಸೋತಿರುವುದು."

"ಇದನ್ನೇನು ಹೇಳುತ್ತಿರುವಿರಿ ನೀವು! ನಿಮ್ಮ ಕಕ್ಕ ತಮ್ಮ ಗದ್ದುಗೆ ಉಳಿಸಿಕೊಳ್ಳಲು ಜರ್ಮನಿಯ ಸಹಾಯವನ್ನು ಕೋರುತ್ತಿರುವರೇ?"

'ಜರ್ಮನಿಯ ರಾಯಭಾರಿಯೊಡನೆ ಗುಟ್ಟಾಗಿ ಮಾತನಾಡಿ ನಮ್ಮ ಕಕ್ಕ ಈ ಹಂಚಿಕೆಯನ್ನೇ ಹೂಡುತ್ತಿರಬೇಕೆಂದು ನನ್ನ ಅನುಮಾನ. ಅವರು ಜರ್ಮನಿಯ ನೆರವನ್ನು ಪಡೆದರೆ, ನಾವು ಉಳಿಯುವ ಆಶೆಯೇ ಇಲ್ಲ.

ಹಾಗಾದರೆ ಪ್ರಜಾಸಾಮಾನ್ಯರು ನಮ್ಮ ನೆತ್ತರನ್ನು ಹೀರಲು ಮತ್ತಷ್ಟು ಉನ್ಮತ್ತರಾಗುವರು. ನಮ್ಮ ಕಕ್ಕನೇ ಮೊಟ್ಟಮೊದಲು ಅದರ ಫಲವನ್ನುಣ್ಣ-ಬೇಕಾಗುವುದು. ಓ, ಅದೇನಲ್ಲಿ ? ”

ನಗರದ ಕಡೆಯಿಂದ ಕೆಲ ಜನ ಪೋಲಿಸರು ಕುದುರೆಯೇರಿಕೊಂಡು ಅವರ ಕಡೆಗೆ ಬರುತ್ತಲಿದ್ದರು. ಹತ್ತಿರ ಬಂದೊಡನೆ ಪೋಲಿಸರ ಹಿರಿಯನು ಬಂಡಿಯನ್ನು ತರುಬಲು ಸನ್ನೆ ಮಾಡಿದ. ಜಾನ್ ಪಿಟರ್ಸ್ ಕೂಡಲೆ ಬಂಡಿಯನ್ನು ನಿಲ್ಲಿಸಿದ. ದಳನಾಯಕ ಚಿಕ್ಕ ವಯಸಿನ ಲೆಫ್ಟನಂಟ್. ಪಿಟರ್ಸನ ಎದುರಿಗೆ ಬಂದು ವಂದಿಸಿ ನುಡಿದ: “ಯುವರಾಜ, ಬ್ಯಾರಣ ಬರ್ನಾರ್ಡರು ತಮ್ಮ ಕಡೆ ಕಳಿಸಿದ್ದಾರೆ. ಅವರು ತಮಗೆ ಹೇಳಿದ್ದಾರೆ— ರಾಜಧಾನಿಯಲ್ಲಿ ಪ್ರಜೆಗಳ ಗೊಂದಲವೆದ್ದಿದೆ; ವಿಪ್ಲವದ ಲಕ್ಷಣಗಳು ತೋರುತ್ತಿವೆ; ರಾಜ-ಬೀದಿ ತಮ್ಮ ಸಂಚಾರಕ್ಕೆ ಸುರಕ್ಷಿತವಾಗಿಲ್ಲ; ಗುಪ್ತಪಥದಿಂದ ಅರಮನೆಗೆ ಹೋಗಬೇಕಂತೆ. ”

“ ಯಾರನ್ನಾದರೂ ಹಿಡಿದಿದ್ದಾರೆಯೆ ? ” ಪಿಟರ್ಸ್ ಕೇಳಿದ.

“ ಗೊಂದಲವೆದ್ದಿದಾದರೆ ಗೊಂದಲಿಗರನ್ನು ಚದುರಿಸಬೇಕು, ಅವರು ಅಸಗೊಳ್ಳದೆ ಹೆಚ್ಚು ಅನಿಷ್ಟ ಮಾಡತೊಡಗಿದರೆ ಮಾತ್ರ ಅವರನ್ನು ಬಂಧಿಸಬೇಕೆಂದು ಮೇಲಧಿಕಾರಿಗಳ ಅಪ್ಪಣೆಯಿದೆ. ” ಲೆಫ್ಟನಂಟ್ ಹೇಳಿದ.

“ ಬರ್ನಾರ್ಡ್ ಬುದ್ಧಿವಂತರು ; ಅವರಿಗೆ ಕಾಲಗತಿ ಸರಿಯಾಗಿ ಅರ್ಥವಾಗಿದೆ. ಶಾಸನ ಪ್ರಣಾಲಿ ಬದಲಾದರೂ ಅವರ ಕೆಲಸಕ್ಕೆ ಚ್ಯುತಿ ಬರಲಾರದೆಂದು ನನಗೆನಿಸುತ್ತದೆ ” ಎಂದ ಪಿಟರ್ಸ್.

ಪಿಟರ್ಸ್ ಶಕಟವನ್ನು ತಿರುಗಿಸಿದ. ಪ್ರಕಾಶ್ಯ ರಾಜಬೀದಿಯನ್ನು ಬಿಟ್ಟು ಕಿರಿಯಗಲಾದ ಜನಶೂನ್ಯ ಅರಣ್ಯಪಥದಿಂದ ರಾಜಧಾನಿಯನ್ನು ಸೇರಿ, ಮ್ಯಾಡಂ ಸೇಯರ್ಸಳ ಮನೆಯೆದುರು ಗ್ರೇಸಳನ್ನು ಇಳಿಸಿದ. “ನೀನು ಇಂಗ್ಲಂಡಿಗೆ, ಇಲ್ಲದೆ ಹೋದರೆ ಪ್ಯಾರಿಸಿಗೆ ಹೋಗಿ ಇಲ್ಲಿಯ ಗಲಭೆ ಶಾಂತ-ವಾಗುವ ವರೆಗೂ ಕಾಯಬೇಕೆಂದು ನನ್ನಿಚ್ಛೆ. ಇಲ್ಲಿ ಏನಾದೀತು ಏನು ಬಿಟ್ಟೀತು ಎಂದು ಹೇಳುವಂತಿಲ್ಲ. ಬಹುಸಂಖ್ಯ ಪ್ರಜೆಗಳು ಹುಚ್ಚೆದ್ದು ಹುಡದಿ ಹಾಕಿದರೆ ಈ ನಗರ ಹೆಣ್ಣುಮಕ್ಕಳಿಗೆ ವಿಪಜ್ಜನಕವಾದೀತು.” ಎಂದು ಪಿಟರ್ಸ್ ಅವಳಿಗೆ ಸಲಹೆಯಿತ್ತ.

ಗ್ರೇಸ್ ಅಸ್ಫುಟಸ್ವರದಲ್ಲಿ ಉತ್ತರವಿತ್ತಳು : "ನಲ್ಲನು ನಗರದಲ್ಲಿಯೇ ಇರುತ್ತಿದ್ದರೆ, ಅಲ್ಲಿ ಸಾವಿರ ಸಂಕಟಗಳಿದ್ದರೂ, ಅದು ಹೆಂಗುಸಿನ ವಾಸಕ್ಕೆ ಸಂಪೂರ್ಣ ಉಪಯುಕ್ತ ಸ್ಥಾನವೇ; ಆತನನ್ನು ಬಿಟ್ಟು ಆಕೆಯಿಲ್ಲ."

"ನೀನು ಹೇಳುವುದು ಒಳ್ಳೇ ಧಾರಾಳ ಮನಸಿನ ಮಾತೇನೋ ಹೌದು. ಆದರೆ ಅದರಿಂದ ಆ ಹೆಂಗುಸಿನ ನಲ್ಲನ ಮನಸ್ಸಿನ ಅಶಾಂತಿ ನೂರ್ಮಡಿ ಹೆಚ್ಚುತ್ತದೆಂಬುದನ್ನು ಯೋಚಿಸಿದೆಯಾ ?"

"ಬಲು ಸ್ವಾರ್ಥಿಗಳಂತೆ ಮಾತನಾಡುತ್ತೀರಿ ನೀವು ಪ್ರಿಯತಮನನ್ನು ವಿಪತ್ತಿನ ಸಮುದ್ರದಲ್ಲಿ ನೂಕಿಬಿಟ್ಟು, ತಾನು ನಿರಾಪದ ಸ್ಥಾನದಲ್ಲಿ ನಿಶ್ಚಿಂತ-ಳಾಗಿರುವಂಥ ಅಧಮನಾರಿ ಯಾವಳಿದ್ದಾಳೆ ?"

"ವಾದದಲ್ಲಿ ನಿನ್ನನ್ನು ಗೆಲ್ಲುವುದು ಸಾಧ್ಯವಿಲ್ಲ, ವೇರಿ; ಇನ್ನು ಬರುತ್ತೇನೆ." ಎಂದು ಜಾನ್ ಪಿಟರ್ಸ್ ಅರಮನೆಯ ಕಡೆ ಬಂಡಿಯನ್ನು ಬಿಟ್ಟ ಮಹಾದ್ವಾರದ ಹತ್ತಿರ ಬರುತ್ತಿದ್ದ ಸರ್ ಚಾರ್ಲ್ಸನನ್ನು ಕಂಡು ಬಂಡಿಯನ್ನು ನಿಲ್ಲಿಸಿ "'ಸರ್ ಚಾರ್ಲ್ಸ್, ತಮ್ಮೊಡನೆ ಒಂದೆರಡು ಮಾತಾ-ಡುವುದಿದೆ. ಸಮಯವುಂಟೆ ?"

ಸರ್ ಚಾರ್ಲ್ಸ್ ಆಂಗ್ಲರಾಯಭಾರಿ. ಜಾನ್ ಪಿಟರ್ಸನ ಮಾತಿನಿಂದ ಅವನಿಗೆ ಕೊಂಚ ವಿಸ್ಮಯವಾದರೂ ಅದನ್ನು ತೋರಗೊಡದೆ ಅವನೆಂದ : "ಆಗಬಹುದು. ನಾನಿದೇ ಅರಮನೆಯಿಂದ ಬರುತ್ತಿದ್ದೇನೆ."

"ನಮ್ಮ ಕಕ್ಕನ ಭೆಟ್ಟಿಯಾಗಿತ್ತೆ ?"

"ಇಲ್ಲ. ಅವರ ಮೈಯಲ್ಲಿ ನೆಟ್ಟಗಿಲ್ಲವೆಂದು ಕೇಳಿದೆ. ಅವಕ್ಕೇ ನಾನೆಷ್ಟು ಆಗ್ರಹಪಟ್ಟರೂ ಅವರ ದರ್ಶನ ದೊರೆಯಲಿಲ್ಲ ಒಮ್ಮೆಯಲ್ಲ ಬಹಳ ಸಲ ಪ್ರಯತ್ನಿಸಿದೆ, ಒಮ್ಮೆಯೂ ಅವರ ದರ್ಶನ ಸಾಧ್ಯವಾಗಲಿಲ್ಲ. ಅದರಿಂದ ನನಗೆ ಬಹಳ ನಿರಾಶೆಯಾಗಿದೆ. ಅವರು ಬೇಕೆಂತಲೇ ನನ್ನ ಭೆಟ್ಟಿ-ಯನ್ನು ತಪ್ಪಿಸಿಕೊಳ್ಳುತ್ತಿರುವರೆಂದು ನನಗನಿಸುತ್ತದೆ. ಇಂದು ಮುಂಜಾ-ನೆಯೂ ರಾಜರು ಜವರ್ನ್ ರಾಯಭಾರಿಯೊಡನೆ ಬಹಳ ಹೊತ್ತು ಮಾತ-ನಾಡಿದರೆಂದು ಕೇಳಿದ್ದೇನೆ."

"ಸರ್ ಚಾರ್ಲಸ್, ತಮ್ಮ ಆಕ್ಷೇಪವೇನೂ ಇಲ್ಲದಿದ್ದರೆ ನನ್ನ ಬಂಡಿಯಲ್ಲಿಯೇ ಬನ್ನಿ. ನಿಮ್ಮನ್ನು ನಿಮ್ಮ ಮನೆಗೊಯ್ದು ಬಿಡುತ್ತೇನೆ. ಹೋಗುಹೋಗುತ್ತ ಮಾತುಕತೆಯೂ ಸಾಗುತ್ತದೆ." ಎಂದ ಪಿಟರ್ಸ್.

ಸರ್ ಚಾರ್ಲಸ್ ಬಂಡಿಯನ್ನ ಹರಿ ಪಿಟರ್ಸನ ಬದಿಯಲ್ಲಿ ಕುಳಿತ.

## ೨೬

"ಕಕ್ಕನೊಡನೆ ಮಾತಾಡುವಂತೆಯೆ ನನ್ನೊಡನೆಯೂ ಮನಬಿಚ್ಚಿ ಮಾತನಾಡಿರಿ ಸರ್ ಚಾರ್ಲಸ್. ಕಕ್ಕನನ್ನು ಏಕೆ ಕಾಣಲು ಹೋಗಿದ್ದಿರಿ?"

ಸರ್ ಚಾರ್ಲಸ್ಗೆ ಇನ್ನಷ್ಟು ವಿಸ್ಮಯ. ಕ್ಷಣಹೊತ್ತು ಏನು ಮಾತನಾಡಬೇಕೆಂದು ಅನುಮಾನಕ್ಕೀಟ್ಟುಕೊಂಡಿತು ಕೊನೆಗೆಂದ: "ರಾಜರೊಡನೆ ಒಂದು ವಿಷಯ ಯೋಚಿಸಬೇಕಿತ್ತು. ಅವರೊಡನೆ ನಾನು ಆಡಲಿದ್ದ ಮಾತನ್ನು ಅರಿತುಕೊಳ್ಳುವುದಕ್ಕೆ ತಮಗಿರುವ ಆತುರವನ್ನು ಕಂಡು ಆಶ್ಚರ್ಯವಾಗಿದೆ. ರಾಜಕಾರ್ಯದಲ್ಲಿ ತಾವು ಪೂರ್ಣ ಉದಾಶೀನರೆಂದು ನನ್ನ ತಿಳಿವಳಿಕೆಯಾಗಿತ್ತು. ರಾಜ್ಯ ಉಳಿದರೂ ಸರಿ ಅಳಿದರೂ ಸರಿ, ಆಕಡೆ ತಮ್ಮ ಲಕ್ಷ್ಯವೇ ಇಲ್ಲ ಎಂದುಕೊಂಡಿದ್ದೆ."

ತನ್ನ ಚಾರಿತ್ರ್ಯದ ಬಗ್ಗೆ ಸರ್ ಚಾರ್ಲಸನ ಭಾವನೆಯೂ ಜನಸಾಮಾನ್ಯರಂತೆಯೆ ಇರುವುದೆಂದು ಜಾನ್ ಪಿಟರ್ಸ್ ತಿಳಿದುಕೊಂಡ. ಮುಗುಳುನಕ್ಕು ಅವನೆಂದ: "ಸರ್ ಚಾರ್ಲಸ್, ಈ ವರೆಗೆ ನನ್ನ ವಿಷಯದಲ್ಲಿ ಕೇಳಿದ ವದಂತಿಗಳನ್ನೆಲ್ಲ ಕ್ಷಣಹೊತ್ತು ಮರೆಯಿರಿ. ಸ್ವದೇಶ ಹಿತದ ಚಿಂತೆಯಿಂದ ನನ್ನ ಮನಸು ತುಂಬಿದೆಯೆಂದು ನಂಬಿ ನನ್ನೊಡನೆ ರಾಜಕಾರಣವನ್ನು ಕುರಿತು ಈಗ ಮಾತನಾಡಿರಿ. ನಮ್ಮ ಕಕ್ಕನಿಂದ ತಾವು ಏನೇನು ತಿಳಿದುಕೊಳ್ಳಲು ಇಚ್ಛಿಸಿದ್ದಿರೋ ಅದನ್ನೆಲ್ಲ ನನ್ನಿಂದಲೂ ತಿಳಿದುಕೊಳ್ಳಬಹುದು."

ಸರ್ ಚಾರ್ಲಸ್ ಯುವರಾಜನ ಮೊಗವನ್ನು ದಿಟ್ಟಿಸಿದ. ಪ್ರಭಾಯುತವಾದ ಅವನ ಮೊಗವನ್ನು ನೋಡಿ, ತಾನು ಅವನ ಬಗ್ಗೆ ಕೇಳಿದ ವದಂತಿಗಳು ಸತ್ಯವೆಂದು ನಂಬಲಾಗಲಿಲ್ಲ. ಅವನೆಂದ: "ಯುವರಾಜ, ತಮ್ಮ ಮಾತನ್ನು ಕೇಳಿ ನನಗೆ ಅಚ್ಚರಿಯಾದುದೇನು ಸುಳ್ಳಲ್ಲ ಅದರ ಕಾರಣ ತಮಗೆ ತಿಳಿಯದಲ್ಲ. ತಮ್ಮ ಬಗ್ಗೆ ಜನಕ್ಕಿದ್ದ ಭಾವನೆ ಭ್ರಮೆಯದಾಗಿದರೆ

ವಿಚಿತ್ರವಲ್ಲ. ಆದೇನೇ ಇದ್ದರೂ ತಾವು ಕೇಳುವ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುವುದು ನನ್ನ ಕರ್ತವ್ಯವೆ. ಮುಖ್ಯ ವಿಷಯವೆಂದರೆ ಹೊಸ ಪಾರ್ಲಿಮೆಂಟು ಸಭೆ ಸೇರಿದರೆ ಉಂಟಾಗಬಹುದಾದ ಪರಿಸ್ಥಿತಿಯಲ್ಲಿ ರಾಜ್ಯರಥವನ್ನು ಅರಸರು ಹೇಗೆ ನಡೆಸುವರೆಂಬುದನ್ನು ಅರಿತುಕೊಳ್ಳಲು ನಾನವರ ಕಡೆಗೆ ಬಂದಿದ್ದೆ."

"ನಿಜ, ಇದು ಅರಿತುಕೊಳ್ಳಬೇಕಾದ ವಿಷಯವೆ. ಈಗ ರಾಜಕಾರ್ಯದಲ್ಲಿ ಬಹಳ ಗೊಂದಲವೆದ್ದಿದೆ."

"ಜರ್ಮನಿಯ ದೊಡ್ಡ ದಂಡು ಈ ನಾಡಿನ ಗಡಿಯಲ್ಲಿ ಸೇರುತ್ತಲಿದೆ. ಅದಕ್ಕೇನು ಕಾರಣವೆಂಬುದನ್ನೂ ತಿಳಿದುಕೊಳ್ಳಬೇಕಿತ್ತು. ಒಂದು ಲಕ್ಷ ಜರ್ಮನ್ ಸೈನಿಕರು ತೋಪು-ತುಬಾಕಿಗಳಿಂದ ಸುಸಜ್ಜಿತರಾಗಿ ಹೋರಾಟಕ್ಕೆ ಅಣಿಯಾಗುತ್ತಿದ್ದಾರೆಂದೂ ವಿಶ್ವಸನೀಯವಾಗಿ ತಿಳಿದಿದೆ. ನಮ್ಮ ಸರಕಾರಕ್ಕೆ ಅದರ ಉದ್ದೇಶವೇನೆಂದು ತಿಳಿಯದಾಗಿದೆ ; ವಸ್ತುಸ್ಥಿತಿಯನ್ನು ಬರೆದು ತಿಳಿಸುವಂತೆ ನನಗೆ ಅಪ್ಪಣೆಯಾಗಿದೆ. ಸತ್ಯಸಂಗತಿಯನ್ನು ಅರಿತುಕೊಳ್ಳುವುದಕ್ಕೆ ರಾಜನನ್ನು ಕಾಣುವ ಹೊರತು ಬೇರೆ ಉಪಾಯ ನನಗೆ ತೋರಲಿಲ್ಲ. ಆದರೆ ಮೂರು ಸಲ ಪ್ರಯತ್ನಪಟ್ಟರೂ ಅವರ ಭೆಟ್ಟಿಯೇ ಆಗಲಿಲ್ಲ."

"ಸರ್ ಚಾರ್ಲೆಸ್, ತಮ್ಮ ಮನಸಿನೊಳಗಿದ್ದ ಮಾತನ್ನು ನನ್ನೆದುರು ಸರಳವಾಗಿ ಆಡಿದ್ದು ಸಂತೋಷ. ತಮಗೆ ಬೇಕಾದ ಸಂಗತಿಗಳನ್ನು ನಾನು ತಮಗೆ ಹೇಳಬಲ್ಲೆ. ಹೆಚ್ಚಿನ ವಿವರವನ್ನು ಕೂಡ ಹೇಳಬಲ್ಲೆ."

ಯುವರಾಜನ ಮಾತನ್ನು ಕೇಳಿ ಆಂಗ್ಲರಾಯಭಾರಿಯ ಕುತೂಹಲ ಹೆಚ್ಚಿತು. "ಏನು ಹೇಳಿ" ಎಂದ. ಜಾನ್ ಪಿಟರ್ಸ್ ಆರಂಭಿಸಿದ :"ತಮಗೆ ಗೊತ್ತುಂಟೋ ಇಲ್ಲವೋ— ಈ ಸಲ ಆರಿಸಿಬಂದ ಪಾರ್ಲಿಮೆಂಟ್ ಸದಸ್ಯರಲ್ಲಿ ಬಹುಮಂದಿ ಸಾಧಾರಣ ತಂತ್ರವಾದಿಗಳು ; ರಾಜತಂತ್ರದ ಕಡು ವಿರೋಧಿಗಳು. ಪಾರ್ಲಿಮೆಂಟ್ ಸೇರುವುದೇ ತಡ, ಅವರು ತಮಗೆ ಬೇಕಾದ ಮಂತ್ರಿಮಂಡಲವನ್ನು ರಚಿಸುವರು; ರಾಜತಂತ್ರವನ್ನು ನಿರ್ಮೂಲಿಸಿ ಸಾಧಾರಣ ತಂತ್ರವನ್ನು ನೆಲೆಗೊಳಿಸಬೇಕೆಂದು ನಿರ್ಣಯಿಸುವರು. ನಮ್ಮ ಕಕ್ಕನಿಗೆ ದೇಶತ್ಯಾಗ ಮಾಡುವಂತೆ ಸೂಚಿಸಲಾಗುವುದು, ಅಥವಾ ವಿಧಿಸ-

ಲಾಗುವುದು. ನನ್ನ ಅವಸ್ಥೆಯೂ ಹಾಗೆಯೇ ಆಗುವುದು. ಇಬ್ಬರಿಗೂ ದೇಶಾಂತರವೇ ಗತಿ!"

"ಹೀಗೆ ವದಂತಿಯಿರುವುದನ್ನೇನೋ ನಾನು ಕೇಳಿದ್ದೇನೆ. ಆದರೆ ಪರಿಸ್ಥಿತಿ ನಿಜವಾಗಿ ಇಷ್ಟು ದೂರ ಮುಂದುವರಿದಿದೆಯೆಂದು ನಂಬಲಾಗಲಿಲ್ಲ. ಇದು ಸತ್ಯವೇ?"

"ಪೂರ್ಣ ಸತ್ಯ. ನನ್ನ ಮಾತಿನಲ್ಲಿ ಒಂದಕ್ಷರವೂ ಬಣ್ಣ ಕೊಟ್ಟದ್ದಿಲ್ಲ. ಈ ಪರಿವರ್ತನೆ ಒಳ್ಳೇ ವ್ಯವಸ್ಥಿತವಾಗಿ ಜರಗುವುದೆಂದು ಸ್ಪಷ್ಟವಾಗಿ ಕಾಣು-ತ್ತಿದೆ. ಆದರೆ ಅದನ್ನು ತಡೆಯುವ ಯಾವ ಹಂಚಿಕೆಯೂ ತೋರಲೊಲ್ಲದು. ಶಿಕ್ಷಿತ ಅಶಿಕ್ಷಿತ ಎಲ್ಲ ಕ್ಷೇತ್ರಗಳಲ್ಲಿಯೂ ಸಾಧಾರಣ ತಂತ್ರದ ಭಾವನೆ ಬದ್ಧ-ಮೂಲವಾಗಿದೆ. ಶೀಘ್ರವೇ ಈ ನಾಡಿನಲ್ಲಿ ರಾಜತಂತ್ರ ಕೊನೆಗೊಳ್ಳುವುದು ಖಂಡಿತವೆಂದು ನನಗೆನಿಸುತ್ತದೆ."

"ಹೀಗಿದ್ದರೆ ಪರಿಸ್ಥಿತಿ ಅತ್ಯಂತ ಗಂಭೀರವಾಗಿದೆ ಆದರೂ ಘೋರ ಸಂಕಟ ಎದುರಿಗೇ ನಿಂತಿದ್ದರೂ ತಾವು ನಿಶ್ಚಿಂತೆಯಿಂದಲೇ ಈ ವಿಷಯವನ್ನು ಚರ್ಚಿಸುತ್ತಿದ್ದೀರಿ. ಇದನ್ನು ನೋಡಿದರೆ, ತಾವು ತಮ್ಮ ಕರ್ತವ್ಯವನ್ನು ಸ್ಥಿರಪಡಿಸಿಕೊಂಡಿರುವಿರೆಂದು ತೋರುತ್ತದೆ."

"ವ್ಯಾಕುಲತೆಯಿಂದ ಪ್ರಯೋಜನವೇ ಇಲ್ಲವಲ್ಲ. ಆಗುವುದು ಆಗಿಯೇ ಆಗುತ್ತದೆ; ನಿಲ್ಲಿಸಲಾಗುವುದಿಲ್ಲ. ನಮಗೆ ಬೇಕಾಗಲಿ ಬೇಡವಾ-ಗಲಿ, ಈ ಪರಿವರ್ತನೆಗೆ ತಲೆ ತಗ್ಗಿಸಲೇಬೇಕು." ಎಂದು ಜಾನ್ ಪಿಟರ್ಸ್ ಸರ್ ಚಾರ್ಲಸನ ಎರಡನೆಯ ವಿಷಯವನ್ನೆತ್ತಿದ: "ನಮ್ಮ ಕಕ್ಕನಿಗೆ ವಯಸ್ಸಾಗಿದೆ. ಸಿಂಹಾಸನವನ್ನು ಬಿಡುವುದು ಆತನಿಗಿಷ್ಟವಿಲ್ಲ ಶಾಸನ ಪದ್ಧತಿ-ಬದಲಾಗುವುದೂ ಆತನಿಗೆ ಬೇಕಾಗಿಲ್ಲ. ಮೂವತ್ತು ವರುಷಗಳಿಂದಲೂ ಅನುಭವಿಸುತ್ತಿದ್ದ ಆರಸುತನವನ್ನು ಈಗ ಸಾಯುವ ಮುಂದೆ ಬಿಡುವುದು ಅಸಾಧ್ಯವಾಗಿದೆ. ಗದ್ದುಗೆಯನ್ನು ಬಿಟ್ಟುಬಿಡಬೇಕೆಂದು ಪಾರ್ಲಿಮೆಂಟು ಅಪ್ಪಣೆ ವಿಧಿಸಿದರೆ, ಆತನು ಕೇಳಲಾರನೆಂದು ಹೇಳುವುದೇ ಬೇಡ"

"ನಿಮ್ಮ ಕಕ್ಕ ಹಟಹಿಡಿದರೆ ಪಾರ್ಲಿಮೆಂಟು ಮುಂದೇನು ಮಾಡೀತು?" ಸರ್ ಚಾರ್ಲಸ್ ಕೇಳಿದ.

“ಪಾರ್ಲಿಮೆಂಟಿನ ಬಲಾತ್ಕಾರ ನಡೆಯದ ಹಾಗೆ ಏನು ಮಾಡಬೇಕೆಂದೇ ಕಕ್ಕ ಯೋಚಿಸುತ್ತಿದ್ದಾನೆ. ನಮ್ಮ ದಂಡಿನ ನೆರವಿನಿಂದ ಅವನು ಗದ್ದುಗೆ ಕಾಯ್ದುಕೊಳ್ಳಬಹುದೆಂದು ತಾವು ತಿಳಿದಿದ್ದೀರಿ. ಆದರೆ ತನ್ನ ಚಿಕ್ಕ ದಂಡು ಎಣಿಕೆಯಿಲ್ಲದ ಪ್ರಜೆಗಳನ್ನೆದುರಿಸಿ ಸಫಲವಾಗಲಾರದೆಂದು ಆತನಿಗೀಗ ಎನಿಸಿದೆ. ಅದಕ್ಕಾಗಿ ಪರದೇಶದವರ ಸಹಾಯವನ್ನು ಪಡೆಯುವ ಯೋಚನೆಯಲ್ಲಿದ್ದಾನೆ. ಜರ್ಮನಿ ನಮ್ಮ ನೆರೆನಾಡು, ಕಡುಗಲಿ ರಾಷ್ಟ್ರ. ಅದನ್ನೇ ಮೊರೆಹೊಗುವುದು ಒಳಿತೆಂದು ಆತನ ವಿಚಾರ. ಪರರಾಜ್ಯವನ್ನು ನುಂಗುವುದಕ್ಕೆ ಸಿಕ್ಕ ಇಂಥ ಸಂಯೋಗವನ್ನು ಜರ್ಮನಿ ಕಳೆದುಕೊಳ್ಳಲಾರದೆಂದು ಬೇರೆ ಹೇಳಲಿಕ್ಕೆ ಬೇಕೆ? ಜರ್ಮನ್ ದೊರೆ ಕೈಸರ್ ಆನಂದದಿಂದ ಸಹಾಯವನ್ನೊದಗಿಸಲು ಒಪ್ಪಿಕೊಂಡಿದ್ದಾನೆ. ಆತನ ಅಮಿತ ಸೇನೆ ಯಾವ ಗಳಿಗೆಯಲ್ಲಿ ಬೇಕೆಂದರೂ ನುಗ್ಗಿ ಬರಲು ಅಣಿಯಾಗಿ ನಿಂತಿದೆ. ಸಾಧಾರಣ ತಂತ್ರವಾದಿಗಳು ನಮ್ಮ ಕಕ್ಕನ ಸಿಂಹಾಸನವನ್ನು ಬಲಾತ್ಕಾರದಿಂದ ಕಸಿದುಕೊಳ್ಳಲು ಉದ್ಯುಕ್ತರಾದರೆ, ನಮ್ಮ ಈ ಚಿಕ್ಕನಾಡನ್ನು ಜರ್ಮನ್ ಸೇನೆ ಆ ಕ್ಷಣದಲ್ಲಿ ಆಕ್ರಮಿಸಿಬಿಡುವುದು. ಏನಾದರೂ ನೆವದಿಂದ ಅವರು ಇಲ್ಲಿ ಒಮ್ಮೆ ಹೊಕ್ಕರೆಂದರೆ ತೀರಿತು; ಈ ದೇಶದ ಸ್ವಾತಂತ್ರ್ಯದ ಆಸೆ, ಸಾಧಾರಣ ತಂತ್ರದ ಸ್ಥಾಪನೆಯು ಸುಖಸ್ವಪ್ನ ಚೀವಾಗಿ ಲುಪ್ತವಾಗುವುದು.”

“ಮುಂದೇನಾದೀತೆಂಬುದು ನಿಮ್ಮ ಕಕ್ಕನಿಗೆ ತಿಳಿಯದೆ?”

“ಇಂಥ ಸಹಜ ವಿಷಯ ಆತನಿಗೆ ತಿಳಿಯುವುದಿಲ್ಲವೆ? ಚೆನ್ನಾಗಿ ತಿಳಿದಿದೆ. ಬಹಳ ವಿಚಾರ ಮಾಡಿಯೆ ಆತ ಹೀಗೆ ನಿಶ್ಚಯಿಸಿರಬೇಕು,—ರಾಜ್ಯ ಹೋದರೆ ಹೋಗಲಿ, ತನ್ನ ಸಿಂಹಾಸನ ತನಗೆ ಉಳಿದರೆ ಸಾಕು. ಇದೇ ಮುಖ್ಯ ವಿಷಯ.”

“ರಾಜ್ಯ ಹೋದರೆ ಸಿಂಹಾಸನ ಹೇಗೆ ಉಳಿಯುತ್ತದೆ?”

“ಅದು ಮಾತ್ರ ಕಕ್ಕನಿಗೆ ಗೊತ್ತಾಗಿಲ್ಲ. ಹೇಗಾದರೂ ಆತನ ಸಿಂಹಾಸನ ಉಳಿಯುವುದಿಲ್ಲ. ಜರ್ಮನಿಯನ್ನು ಒಳಗೆ ಹೊಗಿಸಿಕೊಂಡು ದೇಶದ ಸರ್ವನಾಶ ಮಾಡುತ್ತಾನೆ ಮಾತ್ರ. ಆತ ಬದುಕುವ ಆಶೆ ನನಗೇನೂ ಕಾಣುವುದಿಲ್ಲ.”

" ಜರ್ಮನಿ ಸಹಾಯಕ್ಕಿದ್ದ ಬಳಿಕ ಅರಸನ ಜೀವಕ್ಕೆ ಭಯವೇಕೆ ? ''

'' ಜರ್ಮನಿಯನ್ನು ಸಹಾಯಕ್ಕೆ ಕರೆಯದಿದ್ದರೆ ಪ್ರಜೆಗಳು ಕಕ್ಕನನ್ನು ಮುದುಕ ಮನುಷ್ಯನೆಂದು ಕರುಣಿಸಿ ಬಿಟ್ಟುಬಿಡಬಹುದಿತ್ತು ; ದೂರ ದೇಶಕ್ಕೆ ಹೊರಟುಹೋಗಿದ್ದರೆ, ಆತನನ್ನು ಯಾರೂ ತಡೆಯುತ್ತಿರಲಿಲ್ಲ. ಆದರೆ ಹೊರಗಿನ ದೆವ್ವವನ್ನು ಒಳಗೆ ತಂದು ಪ್ರಜೆಗಳ ಕೊಲೆಗೆ ನಿಯಮಿಸಿದರೆ ಆತನನ್ನು ಮುದುಕನೆಂದು ಯಾರೂ ಕ್ಷಮಿಸಲಾರರು ; ಒಂದು ವಾರದೊಳಗೇ ಕಕ್ಕನ ಅವತಾರ ಮುಗಿಯಿತೆಂದೇ ತಿಳಿಯಿರಿ. ಕಕ್ಕನ ಭವಿತವ್ಯದ ಚಿಂತೆಯಿಲ್ಲ ನನಗೆ ; ಆತನ ಅದೃಷ್ಟದಲ್ಲಿದ್ದಂತೆ ಆಗುವುದು. ದೇಶದ ನಾಳಿನ ದುರ್ದೆಸೆಯನ್ನು ನೆನೆದು ನಾನು ವ್ಯಾಕುಲನಾಗಿದ್ದೇನೆ. ಸರ್ ಚಾರ್ಲಸ್, ನಮ್ಮ ಕಕ್ಕನ ಕರೆಯಂತೆ ಜರ್ಮನರು ಇಲ್ಲಿ ಬಂದು ಹಾವಳಿ ಮಾಡಿದರೆ ನೀವು ಸುಮ್ಮನೆ ನೋಡುತ್ತಿರುವಿರಾ ? ''

'' ತಮ್ಮ ಪ್ರಶ್ನೆಗೆ ಉತ್ತರವನ್ನು ಕೊಡುವುದು ನನಗಸಾಧ್ಯ ಆದರೂ ನನ್ನ ಅಭಿಪ್ರಾಯವನ್ನು ಕೇಳುವಿರಾದರೆ, ಜರ್ಮನಿಯ ಈ ಅನಧಿಕಾರ ಚರ್ಚೆಯನ್ನು ಫ್ರಾನ್ಸ್ ಇಂಗ್ಲಂಡ ಯಾವುದೂ ಬಾಯಿ ಮುಚ್ಚಿಕೊಂಡು, ಕೈ ಕಟ್ಟಿಕೊಂಡು ಸಹಿಸಲಾರದೆಂದು ಹೇಳಬಲ್ಲೆ.''

ಸರ್ ಚಾರ್ಲಸನ ಮಾತಿನಿಂದ ಜಾನ್ ಪಿಟರ್ಸನಿಗೆ ಸಂತೋಷವಾಯಿತು. ಆದರೆ ಉತ್ಸಾಹವನ್ನು ಪ್ರಕಟಗೊಳಿಸದೆ ಅವನೆಂದ : ''ನನಗೂ ಹಾಗೆಯೇ ಎನಿಸುತ್ತದೆ. ನಿಜ ಹೇಳುವುದೆಂದರೆ ಈ ಬಗ್ಗೆ ತಮ್ಮ ಅಭಿಪ್ರಾಯವನ್ನು ತಿಳಿದುಕೊಳ್ಳಲೆಂದೇ ಇಷ್ಟು ದೂರ ತಮ್ಮೊಡನೆ ಬಂದದ್ದು. ನನ್ನಿಂದ ಕೇಳಿಕೊಂಡದ್ದನ್ನು ತಮ್ಮ ಸರಕಾರಕ್ಕೆ ತಿಳಿಸಬಹುದು ; ಫ್ರೆಂಚ್ ಸರಕಾರಕ್ಕ ತಿಳಿಸಿದರೂ ತಪ್ಪಾಗಲಿಕ್ಕಿಲ್ಲ. ಇಂಗ್ಲಂಡ್ ಫ್ರಾನ್ಸ್‌ಗಳು ಜರ್ಮನಿಯ ಅನಧಿಕಾರ ಚರ್ಚೆಯನ್ನು ನಿಷೇಧಿಸಿದರೆ, ಈ ದೇಶದ ಕಡೆಗೆ ಒಂದು ಹೆಜ್ಜೆಯನ್ನಿಡಲೂ ಅದಕ್ಕೆ ಎದೆಯಾಗಲಾರದು. ''

ಸರ್ ಚಾರ್ಲಸನಿಗೆ ಆನಂದವಾಯಿತು. '' ತಾವು ಹೇಳಿದಂತೆಯೆ ಆಗಬಹುದು. ಆದರೆ ಯುವರಾಜರೆ, ನನ್ನ ದಿಟ್ಟತನವನ್ನು ತಾವು ಕ್ಷಮಿಸುವುದಾದರೆ ಒಂದು ಮಾತು ಕೇಳಬೇಕೆಂದಿದ್ದೇನೆ. '' ಎಂದ.

"ಕೇಳಿರಿ; ಏನೂ ಅಭ್ಯಂತರವಿಲ್ಲ."

"ತಾವು ಈ ಜಗಳದಲ್ಲಿ ಯಾವ ಪಕ್ಷವನ್ನು ಹಿಡಿಯುತ್ತೀರಿ ?"

"ಏನೇ ಆಗಲಿ; ನಾನೀ ನಾಡಿನ ಪ್ರಜಾವರ್ಗದ ಕಲ್ಯಾಣವನ್ನೇ ಬಯಸುವವನು ; ಅವರ ಹಿತಕ್ಕಾಗಿ ರಾಜ್ಯವನ್ನು ತೊರೆದು ಸಾಮಾನ್ಯರಂತೆ ಜೀವಿಸಿರಲಿಕ್ಕೂ ಆನಂದದಿಂದ ಸಿದ್ಧನಿದ್ದೇನೆ. ಎಲ್ಲರ ಟೀಕೆಗಳನ್ನು, ವಕ್ರ-ದೃಷ್ಟಿಗಳನ್ನು ತಪ್ಪಿಸಿಕೊಂಡು ದೂರ ಅಜ್ಞಾತವಾಸದಲ್ಲಿರುವುದರಲ್ಲಿಯೆ ಸುಖವಿದೆ, ಶಾಂತಿಯಿದೆ ; ಆ ಶಾಂತಿಸುಖಗಳನ್ನು ನಾನು ಇಚ್ಛಿಸುತ್ತೇನೆ. ನನ್ನ ದೇಶ ವಿದೇಶೀಯರ ಅಂಕೆಯಲ್ಲಿರುವುದು ನನಗೆ ಸರ್ವಥಾ ಇಷ್ಟವಿಲ್ಲ."

"ತಮ್ಮ ಮನೋಗತ ತಿಳಿಯದಂತಾಯಿತು ; ನಾನೀಗಲೇ ನಮ್ಮ ಸರಕಾರಕ್ಕೆ ತಂತಿ ಕೊಡುತ್ತೇನೆ."

"ತಮ್ಮ ತಂತಿಗೆ ಸರಕಾರ ಕೊಡುವ ಉತ್ತರವನ್ನು ನನಗೆ ತಿಳಿಸುವಿರಾ ?"

"ನಿಶ್ಚಯವಾಗಿ."

## ೨೭

ಜಾನ್ ಪಿಟರ್ಸ್ ತನ್ನ ಕೋಣೆಯಲ್ಲಿ ಕುಳಿತಿದ್ದಾಗ ಮೇರಿ ಹಠಾ-ತ್ತಾಗಿ ಅಲ್ಲಿಗೆ ಬಂದಳು.

"ಮೇರಿ, ಈಗಿಲ್ಲಿಗೆ ಬಂದೆ ಏಕೆ ? ನೀನು ನಾಟ್ಯರಂಗಕ್ಕೆ ಹೋಗಿ-ದ್ದೀಯೆಂದುಕೊಂಡಿದ್ದೆ." ಎಂದ ಜಾನ್‌ಪಿಟರ್ಸ್.

ತಟ್ಟನೆ ಮೇರಿಯ ಬಾಯಿಂದ ಮಾತು ಹೊರಡಲಿಲ್ಲ. ಜಾನ್ ಪಿಟರ್ಸ್ ಅವಳ ಮುಖದ ಕಡೆ ನೋಡಿದ. ಅದು ಮಸಳಿಸಿತ್ತು. ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು. ಅವನು ಪ್ರೀತಿಪೂರ್ವಕವಾಗಿ ಅವಳ-ನ್ನೊಂದು ಕುರ್ಚಿಯಲ್ಲಿ ಕುಳ್ಳಿರಿಸಿದ. ಆಗವಳು ಹೇಳಿದಳು :

"ಈವೊತ್ತು ನನ್ನ ಮೈಯಲ್ಲಿ ನೆಟ್ಟಗಿಲ್ಲ; ಅದಕ್ಕೇ ಥೇಟರಿಗೆ ಹೋಗಲಿಲ್ಲ. ಒಂದು ವಿಶೇಷ ಕೆಲಸಕ್ಕಾಗಿ ನಿಮ್ಮ ಹತ್ತಿರ ಬಂದೆ. ಬಹಳ ಮಹತ್ವದ ಮಾತಿದೆ."

"ಅಂಥದೇನು ಮಹತ್ವದ ಮಾತು ಮೇರಿ ?"

"ನಮ್ಮಪ್ಪನ ರಾಜಕೀಯ ವಿಚಾರ ನಿಮಗೆ ಗೊತ್ತೇ ಇರಬೇಕು."

"ಚೆನ್ನಾಗಿ ಗೊತ್ತು. ನಿಮ್ಮಪ್ಪ ಅಣ್ಣ ಇಬ್ಬರೂ ರಾಜತಂತ್ರದ ಕಡು-ವಿರೋಧಿಗಳು. ಆದರೆ ಅದರಿಂದೇನು ತೊಂದರೆ? ಅವರ ರಾಜಕೀಯ ಮತಕ್ಕಾಗಿ ನಾನು ನಿನ್ನನ್ನು ದೂಷಿಸುವುದಿಲ್ಲ. ನಿನ್ನ ಬಗ್ಗೆ ನನಗೆ ಅಸಂತೋಷವಿಲ್ಲ."

"ಅದನ್ನು ನಾನು ಬಲ್ಲೆ. ಆದರೆ ಅವರಿಬ್ಬರೂ ನನ್ನ ಮೇಲೆ ಸಿಟ್ಟಿ-ಗೆದ್ದಿರುವುದೇ ಒಂದು ತೊಂದರೆ. ನಾನು ನಿಮ್ಮ ಕಡೆ ಬರುತ್ತಿರುವುದು ಅವರಿಗೆ ಸೇರಿಕೆಯಿಲ್ಲ."

"ಅದರಿಂದ ನಿನಗೇನು ನಷ್ಟ? ಅಲ್ಲದೆ ಅವರಿಗೆ ಸಿಟ್ಟು ಬರಲಿಕ್ಕೆ ಕಾರಣವಾದರೂ ಏನು? ನೀನು ನನ್ನ ಕಡೆ ಮಾತ್ರ ಬರುತ್ತೀ, ಮತ್ತೆಲ್ಲಿಯೂ ಹೋಗುವುದಿಲ್ಲ ಎಂದಿಲ್ಲ."

"ನನ್ನ ಮಾತಿನರ್ಥ ಹಾಗಲ್ಲ. ನೀವೊಬ್ಬ ಸಾಮಾನ್ಯ ಮನುಷ್ಯ-ರಾಗಿದ್ದರೆ ಅವರು ಕೋಪಿಸುತ್ತಿರಲಿಲ್ಲ ನಾನು ಯುವರಾಜರನ್ನು ಪ್ರೀತಿಸು-ತ್ತೇನೆಂಬೇ ಅವರ ಕೋಪ. ಇಂದು ನಾನು ಮರೆಯಲ್ಲಿ ನಿಂತು ಅವರ ಗುಟ್ಟಿನ ಮಾತುಗಳನ್ನು ಕೇಳಿದೆ."

"ಏನದು?"

"ರಾಜರ ಬಗ್ಗೆಯೂ ನಿಮ್ಮ ಬಗ್ಗೆಯೂ ಅವರು ಯೋಚಿಸುತ್ತಿದ್ದರು. ಹೇಗಾದರೂ ಸರಿ, ನಿಮ್ಮನ್ನು ಕೊಲ್ಲಬೇಕೆನ್ನುತ್ತಿದ್ದರು. ಹಾಗವರು ನಿರ್ಧಾರ ವನ್ನೇ ಮಾಡಿದಂತೆ ಅವರ ಮಾತಿನಿಂದ ನನಗೆನಿಸಿತು. ನೀವು ದೇಶಾಂತರಕ್ಕೆ ಹೋದರೂ ಹಂಚಿಕೆಯಿಂದ ಬರಮಾಡಿಕೊಂಡು ಕೊಲೆಮಾಡುವರಂತೆ. ಹೊಸ ಪಾರ್ಲಿಮೆಂಟು ಸೇರುವುದರೊಳಗೇ ಈ ಕೆಲಸ ನೆರವೇರಬೇಕೆಂದು ಅವರ ವಿಚಾರ."

ಇದನ್ನು ಕೇಳಿ ಜಾನ್ ಪಿಟರ್ಸ್ ಕೊಂಚವೂ ವಿಚಲಿತನಾಗಲಿಲ್ಲ. ಅವನು ಸಹಜ ಸ್ವರದಲ್ಲಿಯೇ ಉತ್ತರವಿತ್ತ: "ನನ್ನ ಕೊಲೆಗಾಗಿ ಸಂಚು ನಡೆದದ್ದು, ಹಲಕೆಲವರು ಕತ್ತಿ ಮಸೆಯುತ್ತಿದ್ದದ್ದು ನನಗೆ ಗೊತ್ತಿದೆ. ಇದೇನು ಹೊಸ ಸುದ್ದಿಯಲ್ಲ; ಅಂಜುವ ಕಾರಣವಿಲ್ಲ. ಯಾರು ಯಾರನ್ನೇ ಕೊಲ್ಲಲು ಪ್ರಯತ್ನಿಸಲಿ, ಅದು ಸಫಲವಾಗಿಯೇ ಆಗುವುದೆಂದಿಲ್ಲ ಎಲ್ಲಾ

ಗಿಂತ ಹೆಚ್ಚು ಗಂಡಾಂತರದಲ್ಲಿದ್ದವರೇ ಎಲ್ಲರಿಗಿಂತ ಹೆಚ್ಚು ಕಾಲ ಬಾಳು-ವುದೂ ಉಂಟು ಲೋಕದಲ್ಲಿ. ”

ಮೇರಿಗೆ ಇದರಿಂದ ಸಮಾಧಾನವಾಗಲಿಲ್ಲ. ಅವಳು ರಂಗವಿಲಾಸಿನಿಯಾದರೂ ಅವಳ ಹೃದಯದಲ್ಲಿ ಪ್ರೇಮವಿತ್ತು ಯುವರಾಜನನ್ನು ಅವಳು ಪ್ರೀತಿಸುತ್ತಿದ್ದಳು. ಅವನಿಗೊದಗಬಹುದಾದ ಪ್ರಾಣಸಂಕಟದ ಭಯದಿಂದ ಅವಳು ವ್ಯಾಕುಲೆಯಾಗಿದ್ದಳು. ಅವಳೆಂದಳು : “ ನಿವು ಈ ದೇಶ ಬಿಟ್ಟು ಓಡಿಹೋಗಿರಿ; ಇಲ್ಲಿದ್ದಾದರೂ ಏನು ಪ್ರಯೋಜನ? ಬೇಗನೆ ಓಡಿಹೋಗದಿದ್ದರೆ ಕೊನೆಯಲ್ಲಿ ಓಡಿಹೋಗಲು ಸಮಯ ಸಿಕ್ಕಲಾರದು ಇಂದು ರಾತ್ರಿಯೆ ಪ್ಯಾರಿಸಿಗೆ ಓಡಿರಿ ; ಸಂಗಡ ಯಾರಾದರೂ ಬರಬೇಕೆಂದಿದ್ದರೆ— ”

ಮೇರಿಗೆ ಮಾತನ್ನು ಪೂರಯಿಸುವುದಾಗಲಿಲ್ಲ ಜಾನ್ ಪಿಟರ್ಸ್ ಅವಳ ಮನದ ಮಾತನ್ನರಿತುಕೊಂಡು ನುಡಿದ : “ನಾನು ಓಡಿಹೋಗಬೇಕು, ಸಂಗಡ ನಿನ್ನನ್ನು ಕರೆದುಕೊಂಡು ಹೋಗಬೇಕು, ಎಂದಲ್ಲವೇ ನಿನ್ನ ಅಭಿಪ್ರಾಯ? ಇಲ್ಲ, ಮೇರಿ, ಅದು ಸಾಧ್ಯವಿಲ್ಲ ಇಲ್ಲಿ ನನಗಿನ್ನೂ ಅನೇಕ ಕೆಲಸಗಳಿವೆ ಕೈಕೊಂಡ ಕೆಲಸ ಇನ್ನೂ ಪೂರ್ತಿಯಾಗಿಲ್ಲ ಅದು ಮುಗಿಯುವುದಕ್ಕೆ ಇನ್ನೂ ಅವಕಾಶವಿದೆ. ಅದನ್ನು ಹಾಗೇ ಬಿಟ್ಟು ಹೋಗುವುದು ಶಕ್ಯವಿಲ್ಲ. ಅದೃಷ್ಟದಲ್ಲಿ ಏನಿದ್ದರೂ ಕೊನೆತನಕ ಇಲ್ಲಿರಲೇ ಬೇಕು. ನನ್ನೆ-ದುರು ಓಡಿ ಹೋಗುವ ಮಾತನ್ನೇ ತೆಗೆಯಬೇಡ ನನ್ನ ಬಗ್ಗೆ ನಿಶ್ಚಿಂತಳಾಗಿರು.”

“ ನಿಮ್ಮ ಮೈಯಲ್ಲಿ ತ್ರಾಣವಿದೆ, ನಿಮ್ಮನ್ನು ಕೊಲ್ಲುವುದು ಶತ್ರುವಿಗೆ ಸಹಜವಲ್ಲ ಎಂದು ನೀವು ಭಾವಿಸಿಕೊಂಡಂತಿದೆ. ಶತ್ರು ಎದುರಾ ಎದುರು ಬಂದರೆ ಈ ಮಾತು ಸತ್ಯವೆ. ಆದರೆ ಕತ್ತಲೆಯಲ್ಲಿ ಅಡಗಿ ಹೊಂಚು ಹಾಕಿ ಎರಗುವ ಕೊಲೆಗಾರರ ಕೈಯಿಂದ ಹೇಗೆ ಉಳಿದುಕೊಳ್ಳುವಿರಿ? ಇನ್ನಿಲ್ಲಿ ನಿಲ್ಲಬೇಡಿರಿ, ಇಂದು ರಾತ್ರಿಯೋ ಹೊರಟುಹೋಗಿರಿ ” ಎಂದು ಮೇರಿ ಕಳವಳ-ದಿಂದ ಅಂಗಲಾಚಿದಳು.

“ ಇಂಥ ಸಲಹೆ ಕೊಡಬೇಡ ನನಗೆ ಎಂದು ಹೇಳಲಿಲ್ಲವೆ ಮೇರಿ? ಸಾಧಾರಣರು ಜೀವವೇ ಮುಖ್ಯವೆನ್ನುತ್ತಾರೆ. ನೀನೂ ಹಾಗೆಯೇ ತಿಳಿದು ನನಗಾಗಿ ಚಡಪಡಿಸುತ್ತೀ. ಇದು ಸಲ್ಲದು. ನೀನು ಗಂಡಸಾಗಿದ್ದರೆ ನನ್ನ ಮಾತು ನಿನಗರ್ಥವಾಗುತ್ತಿತ್ತು. ನನಗೆ ಬಾಳು ಸಾವುಗಳಲ್ಲಿ ಹೆಚ್ಚು ಅಂತರ

ಕಾಣುವುದಿಲ್ಲ. ಅಕರ್ಮಣ್ಯರಾಗಿ ದೀರ್ಘಕಾಲ ಬಾಳುವುದಕ್ಕಿಂತ ಮಹಾ-ಸಂಕಲ್ಪವನ್ನು ಈಡೇರಿಸುವುದಕ್ಕಾಗಿ ಸಾವನ್ನು ಅಪ್ಪಿಕೊಳ್ಳುವುದು ಲೇಸು. ನಾನು ಆರಂಭಿಸಿದ ಕೆಲಸವನ್ನು ಏನಾದರೂ ಅರ್ಧಕ್ಕೆ ಬಿಡಲಾರೆ; ಅದು ಕೈಗೂಡುವ ಮೊದಲೇ ಗುಪ್ತಶತ್ರುವಿನಿಂದ ಸತ್ತರೂ ಅಷ್ಟೇ ಹೋಯಿತು. ಓಡಿಹೋಗಿ ವಿಧಾತನ ವಿಧಾನವನ್ನು ಅತಿಕ್ರಮಿಸುವುದು ಯಾರಿಗೆ ಅಸಾಧ್ಯ?''

ಮೇರಿಯ ಕಣ್ಣುಗಳಲ್ಲಿ ನೀರು ತುಂಬಿತು. "ಜೀವದ ಮೇಲಿನ ಮಮತೆಯಿಂದ ಓಡಿಹೋಗದಿದ್ದರೆ ಬಿಡಿರಿ. ನಿಮ್ಮನ್ನು ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುವವರ ಮನೋವೇದನೆಯನ್ನು ದೂರಗೊಳಿಸುವುದಕ್ಕಾದರೂ ನೀವು ಈ ರಾಜ್ಯವನ್ನು ತ್ಯಜಿಸುವುದು ಉಚಿತ'' ಎಂದಳು.

ಜಾನ್ ಪಿಟರ್ಸ್ ತನ್ನ ದೃಢನಿಶ್ಚಯದಿಂದ ವಿಚಲಿತನಾಗಲಿಲ್ಲ. ಅವನೆಂದ: "ನನ್ನನ್ನು ಮನಸಾ ಪ್ರೀತಿಸುವವರು, ನಾನು ಹೇಡಿಯಂತೆ ಓಡಿಹೋಗುವುದನ್ನು ನೋಡುವುದಕ್ಕಂತ ಬಂಟನಂತೆ ಸಾಯುವುದನ್ನೇನು ನೋಡಲು ಇಷ್ಟಪಡುವರು. ಅಥವಾ ಅವರಿಂದ ನಾನೀ ಅನುಗ್ರಹವನ್ನು ಅಪೇಕ್ಷಿಸುತ್ತೇನೆ.''

"ನಿಮ್ಮನ್ನು ಪ್ರೀತಿಸುವವರೆಲ್ಲಾ ಅಷ್ಟು ಕರ್ತವ್ಯನಿಷ್ಠರಿರುತ್ತಾರೆ, ಸಾಹಸಿಗಳಿರುತ್ತಾರೆ ಎಂದು ನೀವು ಆಶಿಸಬೇಡಿರಿ. ಸುಮ್ಮನೆ ನನ್ನೊಡನೆ ಏಕೆ ವಾದಿಸುತ್ತೀರಿ? ಮೊದಲು ಬದುಕಿರಿ, ಆಮೇಲೆ ಕರ್ತವ್ಯವನ್ನು ನೆರವೇರಿಸಿರಿ. ಜೀವವೇ ಹೋದರೆ ಕರ್ತವ್ಯ ಮಾಡುವುದು ಹೇಗೆ? ನಾನು ಹೀಗೇಕೆ ಹೇಳುತ್ತೇನೆ ಗೊತ್ತೆ? ಅಲ್ಬರ್ಟ್ ಎಂಥ ಭೀಕರ ಮನುಷ್ಯ! ಅವನನ್ನು ನೆನೆದರೆ ನನ್ನ ಮೈ ಜುಮ್ಮೆನ್ನುತ್ತದೆ.''

"ಅಲ್ಬರ್ಟ್ ನನ್ನನ್ನು ಕೊಲ್ಲುವನೇ? ಅವನು ಆ ಭಾರ ಹೊತ್ತು ಕೊಂಡಿದ್ದರೆ ಪ್ರಯತ್ನ ಮಾಡಿ ನೋಡಲಿ ಏನಿದ್ದರೂ ನೀನು ದುಃಖ ಹಚ್ಚಿ ಕೊಳ್ಳಬೇಡ. ಓಡಿ ಹೋಗದಿದ್ದರೂ ನಾನು ಪ್ರಾಣವನ್ನು ಉಪೇಕ್ಷಿಸು-ತ್ತಿದ್ದೇನೆಂದು ತಿಳಿಯಬೇಡ. ಯಾವಾಗಲೂ ಜೋಕೆಯಿಂದಿರುವೆ."

"ನಿಮ್ಮ ಮಿತ್ರ ಬರ್ನಾರ್ಡರಲ್ಲಿಯೂ ನನಗೇಕೋ ನಂಬುಗೆಯಿಲ್ಲ. ಅವರು ದಿನಾಲು ಎಂಬಂತೆ ನನ್ನನ್ನು ಕಾಣುತ್ತಾರೆ; ಅವರ ಗುಪ್ತಚಾರರು ನನ್ನ ಮನೆಯನ್ನು ಕಾಯುತ್ತಾರೆ;– ಅವರಿಗೆ ಸಂದೇಹವುಂಟಾಗಿರಬೇಕು."

“ ಏನು ಸಂದೇಹ ? ”

“ ನೀವು ವಿದ್ರೋಹಿಗಳ ದಳಪತಿಗೆ ಸಹಾಯ ಮಾಡುತ್ತೀರೆಂಬ ಸಂದೇಹವಿರಬೇಕು. ಮೊದಲ ಸಲ ನನ್ನ ಮನೆಯನ್ನು ಶೋಧಿಸಲು ಬಂದಿದ್ದರಲ್ಲ, ಅಂದಿನಿಂದಲೂ ನನ್ನ ಮನೆಯ ಮೇಲೆ ಅವರು ಕಣ್ಣಿಟ್ಟಿದ್ದಾರೆ. ”

“ ಅವರು ಕೇಳುವ ಪ್ರಶ್ನೆಗಳಿಗೆ ಜೋಕೆಯಿಂದ ಉತ್ತರ ಕೊಟ್ಟೆಯಷ್ಟೆ ನೀನು ? ಏನು ಹೇಳಿದೆ ? ”

“ ಏನೂ ಹೇಳಲಿಲ್ಲ.– ನನಗೇನೂ ಗೊತ್ತಿರಲಿಲ್ಲ. ”

“ ಏನೆಂದೂ ಹೇಳಲಿಲ್ಲವೆ ? ”

“ ಹೇಳಿದೆ. ನೀವು ನನ್ನ ಉಪಪತಿಯೆ ಎಂದವರು ಕೇಳಿದರು ; ಅದಕ್ಕೆ ನಾನು ಅಸಮ್ಮತಿಯನ್ನು ಸೂಚಿಸಲಿಲ್ಲ ನಿಮ್ಮೊಡನೆ ನನ್ನ ವಾಸನ ವಿರುದ್ಧವಾದ ಸಂಬಂಧವೇನೂ ಇರುವುದಿಲ್ಲ. ನಿಜ. ಆದರೆ ಈ ರೀತಿ ನಮ್ಮಿಬ್ಬರಲ್ಲಿ ಒಂದು ಸಂಬಂಧವಿದೆ ; ಅದು ಜನರಿಗೆಲ್ಲ ಗೊತ್ತಿದೆ ; ನಿಮ್ಮ ಅಭಿಪ್ರಾಯ ಕೂಡ ಹೀಗೆಯೆ, ಉಂಟೆಂದು ನಾನು ವಾಸ್ತವ ಸಂಗತಿಯನ್ನು ಖಂಡಿಸಲಿಲ್ಲ. ”

“ ಚೆಲೋ ಮಾಡಿದೆ. ಇನ್ನು ನೀನು ಮನೆಗೆ ಹೋಗು ಇಂದು ನೀನು ಥೇಟರಿಗೆ ಹೋಗುವುದಿಲ್ಲವಷ್ಟೆ ? ”

“ ಇಲ್ಲ. ಇಂದು ಮೈ ಸ್ವಸ್ಥವಿಲ್ಲ. ನನಗೆ ಬಹಳ ಭಯವಾಗುತ್ತಿದೆ, ಮನೆಗೆ ಹೋಗುವ ಮನಸ್ಸೂ ಇಲ್ಲ. ”

“ ಹಾಗಾದರೆ ಬರ್ಜಿಮನ್ ಹೋಟೆಲಿಗೆ ಹೋಗು. ರಾತ್ರಿ ಹನ್ನೊಂದಕ್ಕೆ ನಮಗಾಗಿ ಊಟದ ಏರ್ಪಾಟು ಮಾಡುವಂತೆ ತಿಳಿಸು. ಇಂದು ಬರ್ನಾರ್ಡರ ಜೇಬನ್ನು ಕೊಂಚ ಹಗುರುಮಾಡುವೆ. ”

ಜಾನ್ ಪಿಟರ್ಸ್ ಒಬ್ಬ ಆಳನ್ನು ಕರೆದು ಮೇರಿಯ ಜೋಡಿಗೆ ಹೋಗುವಂತೆ ವಿಧಿಸಿದ. ಅವಳು ಹೊರಟುಹೋದಳು. ಅವನು ನಾನಾ ವಿಚಾರಗಳಲ್ಲಿ ಮಗ್ನನಾದ.

೨೮

ನಿರ್ದಿಷ್ಟ ಸಮಯಕ್ಕೆ ಜಾನ್ ಪಿಟರ್ಸ್ ತನ್ನ ಛದ್ಮವೇಷದಲ್ಲಿ ತಿರು-ಗಾಡುವ ಮೋಟರಿನಲ್ಲಿ ಬರ್ಜಿಮನ್ ಹೋಟಲಿಗೆ ಹೋದ. ಓವ್ಹರ್ ಕೋಟನ್ನು ಒಂದು ಕುರ್ಚಿಯ ಬೆನ್ನ ಹೆಗಲಮೇಲಿಟ್ಟು ಊಟದ ಮೇಜಿ-ನತ್ತ ಸಾಗಿದ. ಮೇರಿ ಬಹಳ ಹೊತ್ತಿನಿಂದಲೂ ಅವನಿಗಾಗಿ ಕಾದು ಕುಳಿ-ತಿದ್ದಳು. ವಿಷಣ್ಣಭಾವವಿನ್ನೂ ಅವಳ ಮೊಗದಿಂದ ತೊಲಗಿರಲಿಲ್ಲ. ಜಾನ್ ಪಿಟರ್ಸನನ್ನು ಕಂಡು ಅವಳೆಂದಳು : “ಮೂವರ ಊಟದ ಏರ್ಪಾಟಿದೆ. ನಾವಂತೂ ಇಬ್ಬರು, ಇನ್ನೊಬ್ಬರೂ ಬರುತ್ತಾರಷ್ಟೆ ? ”

“ಬರುತ್ತಾರೋ ಇಲ್ಲವೋ ಹೇಗೆ ಹೇಳಲಿ ? ನಾನಂತೂ ಅವರಿಗೆ ಔತಣ ಕೊಟ್ಟಿದ್ದೇನೆ.”

“ಅವರಿಗೇಕೆ ಔತಣ ಕೊಟ್ಟಿರಿ ? ಬಲು ಕಿಡಿಗೇಡಿ ಮನುಷ್ಯ. ಅವರು ಬಂದರೆಂದರೆ ಪ್ರಶ್ನೆಯ ಮೇಲೆ ಪ್ರಶ್ನೆ ಕೇಳಿ ಉರಿಸುತ್ತಾರೆ ಪೋಲಿಸರ ಗೆಳೆತನ ಹಿತಕರವಲ್ಲ. ಆಮೋದ-ಪ್ರಮೋದಗಳ ಸಮಯದಲ್ಲಿಯೂ ಅವರಿ-ಗಿರುವುದು ಒಂದೇ ಲಕ್ಷ್ಯ—ತಮ್ಮ ಕೆಲಸವನ್ನು ಹೇಗೆ ಸಾಧಿಸ-ಬೇಕೆಂಬುದು. ನಮ್ಮೀ ಮಿತ್ರವರ್ಯರು ಯಾವನನ್ನು ಹಿಡಿಯಲು ಇಷ್ಟು ತೊಳ-ಲಾಡುತ್ತಿರುವರೋ, ಅವನು ಬೇಗ ಸಿಕ್ಕದಿದ್ದರೆ, ಅವರ ತಲೆಯೇ ಕೆಡುತ್ತದೆ.”

“ಹೆಂಗುಸಾದರೂ ನಿನಗೆ ಹೇಗೆ ಅವರ ಉದ್ದೇಶ ತಿಳಿಯಿತು ? ”

“ರಾಜದ್ರೋಹಿಗಳ ದಳಪತಿಯನ್ನು ಹಿಡಿಯಲು ಅವರು ಹೆಣಗು-ತ್ತಿದ್ದಾರೆಂದು ನಾನು ಖಂಡಿತ ಬಲ್ಲೆ. ಅವನನ್ನು ಹಿಡಿಯುವುದಕ್ಕಾಗಿ ಅವರು ತಮ್ಮ ಜೀವವನ್ನೂ ಲೆಕ್ಕಿಸದೆ ಪ್ರಯತ್ನಿಸುತ್ತಿದ್ದಾರೆ. ಎರಡು ಮೂರು ದಿನ-ಗಳಲ್ಲಿ ತಮ್ಮ ಪ್ರಯತ್ನ ಫಲಿಸಿದರೆ ಅರಾಜಕತೆಯ ಭಯವೇ ಇಲ್ಲವೆಂದು ಅವರ ಭರವಸೆ.”

“ಅವರು ಹಾಗೆ ನಂಬುವುದು ಅನ್ಯಾಯವಲ್ಲ. ಅವರ ಮನೋಗತ ನನಗೂ ಗೊತ್ತು. ಗೊತ್ತಿದೆಯೆಂದೇ ಈಹೊತ್ತು ಅವರನ್ನು ಊಟಕ್ಕೆ ಕರೆದದ್ದು.”

“ಅವರ ಹೇರತನಕ್ಕೂ ಈ ಔತಣಕ್ಕೂ ಸಂಬಂಧವೇನೋ ನನಗೆ ತಿಳಿಯದು. ಅವರ ಸಂಬಂಧ ಹಚ್ಚಿಕೊಳ್ಳದಿರುವುದೇ ಒಳಿತು. ನಿಮ್ಮ

ಮೇಲೂ ನನ್ನ ಮೇಲೂ ಅವರ ತೀಕ್ಷ್ಣ ದೃಷ್ಟಿಯಿದೆ. ವಕ್ರದೃಷ್ಟಿಯಿದೆ. ಇಂತಹ ಕಪಟಿಯ ಗೆಳೆತನವನ್ನು ಒಟ್ಟರೆ ಏನಾಗುವುದು ? ”

ಸಿಗಾರೇಟನ್ನು ಸೇದುತ್ತ ಜಾನ್ ಪಿಟರ್ಸ್ ಹೇಳಿದ : “ರಾಜಕೀಯ ಕ್ಷೇತ್ರದಲ್ಲಿ ಈ ಸಂಬಂಧ ಅಪರಿಹಾರ್ಯ. ಮತಾಂತರವಿದ್ದವರೊಡನೆಯೂ ಅತ್ಯಂತ ಆತ್ಮೀಯತೆಯಿಂದ ನಡೆದುಕೊಳ್ಳಬೇಕಾಗುವುದು ಇಲ್ಲದಿದ್ದರೆ ಕೆಲಸವೇ ಸಾಗುವುದಿಲ್ಲ. ಬರ್ನಾರ್ಡ್ ಒಳ್ಳೇ ಚತುರರು, ನಿಜ ; ನಾನೂ ತಿಳಿಗೇಡಿಯಲ್ಲ, ಇಬ್ಬರಲ್ಲಿಯೂ ಕಣ್ಣುಮುಚ್ಚಾಟ ನಡೆದು ಕೆಲವು ತಿಂಗಳುಗಳಾದವು. ಅದರಲ್ಲಿ ನಾನು ಒಮ್ಮೆಯೂ ಸೋತಿಲ್ಲ. ಆದರೂ ನೀನೇಕೆ ಇಷ್ಟು ಹೆದರುತ್ತೀ ? ”

“ನಿಮ್ಮ ಬಲವಿರುವವರೆಗೂ ನನಗವರ ಭಯವಿಲ್ಲ ” ಮೇರಿಯೆಂದಳು.

ಜಾನ್ ಪಿಟರ್ಸ್ ಈ ಮಾತಿಗೆ ಪ್ರತಿವಾದಿಸಿದ : “ ನೀನು ಹೇಳುವುದು ಸರಿಯಲ್ಲ. ನೀನು ಬರ್ನಾರ್ಡರನ್ನು ಸೋಲಿಸಿದ್ದು ನನ್ನ ಬಲದಿಂದಲ್ಲ ; ಬುದ್ಧಿಬಲದಿಂದಲೆ. ಬರ್ನಾರ್ಡ್ ನಿನಗೆ ಲಂಚದ ಆಶೆ ತೋರಿಸಿರಲಿಲ್ಲವೆ ? ”

“ ಹೌದು, ರತ್ನಹಾರವನ್ನು ಕೊಡಲು ಬಂದಿದ್ದರು. ”

“ ಲಂಚದಿಂದ ನಿನ್ನನ್ನು ವಶಪಡಿಸಿಕೊಳ್ಳುವುದು ಅವರಿಗೆ ಸಾಧ್ಯವಾಗಲಿಲ್ಲ ಈ ನಿನ್ನ ಸದ್ಗುಣವನ್ನು ನಾನು ಬಲುಮೆಚ್ಚಿದೆ. ಈ ನಿರ್ಲೋಭ ಗುಣಕ್ಕಾಗಿ ನಾನೊಂದು ಕಂಠಹಾರವನ್ನು ನಿನಗೆ ಮೆಚ್ಚಾಗಿ ಕೊಡುತ್ತೇನೆ.”

“ ನಿಮ್ಮ ಈ ದಯೆಗಾಗಿ ನಾನು ಋಣಿಯಾಗಿದ್ದೇನೆ. ಆದರೆ ನಾನು ಬರ್ನಾರ್ಡರ ಲಂಚದ ಲೋಭಕ್ಕೆ ಬಲಿಬೀಳದಿದ್ದುದು ನಿಮ್ಮ ಪುರಸ್ಕಾರದ ಆಸೆಯಿಂದ ಎಂದು ಮಾತ್ರ ಭಾವಿಸಬೇಡಿರಿ. ”

“ ಇಲ್ಲ, ಹಾಗೆಂದಿಗೂ ನಾನು ತಿಳಿದಿಲ್ಲ. ”

ಅಷ್ಟರಲ್ಲಿ ಬಾಗಿಲ ಸದ್ದಾಗಿ ಬರ್ನಾರ್ಡ್ ಒಳಕ್ಕೆ ಬಂದ. ಮೇರಿ ತೀಕ್ಷ್ಣ ದೃಷ್ಟಿಯಿಂದ ಅವನನ್ನು ನೋಡತೊಡಗಿದಳು. ಜಾನ್ ಪಿಟರ್ಸ್ ಶಿಷ್ಟಾಚಾರದ ಮಾತುಗಳೊಡನೆ ಅವನನ್ನು ಸ್ವಾಗತಿಸಿ ತೆರವಿದ್ದ ಕುರ್ಚಿಯಲ್ಲಿ ಕುಳ್ಳಿರಿಸಿದ.

"ಊಟವನ್ನು ತರಲಿಕ್ಕೆ ಹೇಳಿದ್ದೇನೆ. ಮದ್ಯದ ಸೀಸೆಗಳು ಮೊದಲೇ ಬಂದಿವೆ—ಊರ ಸುದ್ದಿಯೇನು ಬರ್ನಾರ್ಡ್ ?" ಎಂದ ಜಾನ್ ಪಿಟರ್ಸ್.

"ಇನ್ನೂ ಗಲಭೆಗಳು ನಡೆದಿವೆ, ವಿದ್ರೋಹಿಗಳ ಹುಮ್ಮಸ್ಸು ಇನ್ನೂ ಕುಗ್ಗಿಲ್ಲ. ಆದರೆ ಇನ್ನೆರಡು ಮೂರು ದಿನಗಳಲ್ಲಿ ಎಲ್ಲಾ ತಣ್ಣಗಾಗುವುದೆಂದು ನನ್ನ ಭರವಸೆ." ಬರ್ನಾರ್ಡ್ ಹೇಳಿದ.

"ಆಶಾಜನಕವಾದ ಸುದ್ದಿ. ಇರಲಿ ಬರ್ನಾರ್ಡ್, ಇನ್ನು ಬಾಯಿ ಕಾಯಬೇಕಾದ ಅಗತ್ಯವಿಲ್ಲ; ಮದ್ಯಪಾನ ಆರಂಭವಾಗಲಿ. ಒಳ್ಳೇ ಉತ್ಕೃಷ್ಟ ವಾದ ಮದ್ಯವಿದು. ನಿಶ್ಚಿಂತ ಮನಸಿನಿಂದ ಸೇವಿಸಿರಿ."

"ನಗರದಲ್ಲಿಯ ಗಲಭೆಗಳಿಂದ ನಾನೆಷ್ಟೂ ವಿಚಲಿತನಾಗಿಲ್ಲ; ನಾನು ನಿಶ್ಚಿಂತನೇ ಇದ್ದೇನೆ. ನಗರದ ಹೊರಗೆ ಏನು ನಡೆದಿದೆ ಏನು ಬಿಟ್ಟಿದೆ ಎಂಬುದು ಮಾತ್ರ ತಿಳಿಯದೆ ಬಹಳ ಚಿಂತೆಗೀಡಾಗಿದ್ದೇನೆ."

"ಅದಕ್ಕೆ ನೀವೇ ಹೊಣೆ. ನನ್ನ ಮಾತು ಅರ್ಥವಾಯಿತೆ ?" ಎಂದ ಜಾನ್ ಪಿಟರ್ಸ್.

"ಇಲ್ಲ. ನನಗಷ್ಟು ಬುದ್ಧಿಯಿಲ್ಲ." ಎಂದ ಬರ್ನಾರ್ಡ್.

"ತಿಳಿದಿದೆ, ನಿಮಗೆ ಚೆನ್ನಾಗಿ ತಿಳಿದಿದೆ. ಆದರೆ ತಿಳಿದಿದೆಯೆಂದು ಒಪ್ಪುವುದಿಲ್ಲವಷ್ಟೆ. ಆರು ತಿಂಗಳ ಹಿಂದೆಯೆ ಒಬ್ಬ ಮನುಷನನ್ನು ಹಿಡಿದು ಬಿಟ್ಟಿದ್ದರೆ ದೇಶದಲ್ಲಿ ಈ ವಿದ್ರೋಹದ ಬೇಗೆ ಹೊತ್ತಿ ಹಬ್ಬುತ್ತಿರಲಿಲ್ಲ. ಈ ಎಲ್ಲ ಗೊಂದಲಕ್ಕೂ ಆ ವಿದ್ರೋಹಿಗಳ ದಳಪತಿಯೆ ಮೂಲ. ಅವನೇ ಜನರನ್ನು ಎಚ್ಚರಿಸಿ ಸರಕಾರಕ್ಕೆ ಎದುರು ನಿಲ್ಲಿಸಿದ್ದಾನೆ."

"ಅದೇನೋ ಸರಿ. ಆದರೆ ಆ ವ್ಯಕ್ತಿಯ ಅಸ್ತಿತ್ವವೇ ನನಗೆ ಕೃತಕ-ವಾಗಿ ತೋರುತ್ತದೆ. ಎಲ್ಲರ ಬಾಯಲ್ಲಿಯೂ ದಳಪತಿಯ ಮಾತು ಕೇಳು-ತ್ತಿದೆ. ಆದರೆ ನನಗೆ ತಿಳಿದ ಮಟ್ಟಿಗೆ, ಅಂಥ ಮನುಷ್ಯ ಪ್ರಪಂಚದಲ್ಲೇ ಇಲ್ಲವೆಂದು ಎನಿಸುತ್ತದೆ. ಕೆಲವು ದುಷ್ಟರು ಗುಂಪುಕಟ್ಟಿಕೊಂಡು ಒಳಗೊಳಗೆ ರಾಜದ್ರೋಹವನ್ನು ಹರಡುತ್ತಿದ್ದಾರೆ, ಅದರೆಲ್ಲ ತಪ್ಪುಗಳನ್ನೂ ಒಂದು ಕಾಲ್ಪನಿಕ ವ್ಯಕ್ತಿಯ ತಲೆಗೆ ಕಟ್ಟುತ್ತಿದ್ದಾರೆ. ನಿಜವಾಗಿ ಆ ನಾಯಕ ಎಂಬವನು ಬಿಸಿಲ್ಗುದುರೆ; ನಾವು ಎರಳೆಯಂತೆ ಅವನ ಬೆನ್ನು ಹತ್ತಿ ತೊಳಲಾಡುತ್ತಿದ್ದೇವೆ."

"ಭಲೆ, ನೀವು ಒಳ್ಳೇ ಹಂಚಿಕೆ ಹುಡುಕಿ ಪ್ರರಾಗುತ್ತಿದ್ದೀರಿ! ಆದರೆ ನಿಮ್ಮ ಹಂಚಿಕೆ ನಿಲ್ಲಲಾರದು. ಇರಲಿ, ಮೊದಲು ಗ್ಲಾಸನ್ನು ತೆರವು ಮಾಡಿರಿ. ಆಮೇಲೆ ನಿಮಗೊಂದು ಮಹತ್ವದ ಸುದ್ದಿಯನ್ನು ಅರುಹುತ್ತೇನೆ. ವಿದ್ರೋಹಿಗಳ ದಳಪತಿ ಕಾಲ್ಪನಿಕ ವ್ಯಕ್ತಿಯಲ್ಲ; ರಕ್ತಮಾಂಸಗಳಿಂದಾದ ಶರೀರದ ಮನುಷ್ಯನೇ ಅವನೊಬ್ಬ. ನನಗವನ ದರ್ಶನವೂ ಆಗಿತ್ತು; ಇಬ್ಬರೂ ಎಷ್ಟೋ ಮಾತುಕತೆಗಳನ್ನೂ ಆಡಿದ್ದೇವೆ!"

ಒಂದು ಕಾಜಿನ ಬಟ್ಟಲನ್ನು ಬರ್ನಾರ್ಡ್ ಬರಿದುಗೊಳಿಸಿದ. ಗ್ಲಾಸನ್ನು ನಿಧಾನವಾಗಿ ಕೆಳಗಿರಿಸುತ್ತ ಅಚ್ಚರಿಯಿಂದ ಮಾತನಾಡಿದ: "ಏನೆಂದಿರಿ? ವಿದ್ರೋಹಿಗಳ ದಳಪತಿಯ ಭೆಟ್ಟಿಯಾಗಿತ್ತೇ ತಮಗೆ? ಅವನನ್ನು ಹಾಗೇ ಬಿಟ್ಟುಬಿಟ್ಟಿರಾ? ತಮ್ಮ ಸರ್ವನಾಶಕ್ಕಾಗಿ ಪ್ರಯತ್ನಿಸುತ್ತಿರುವ ದ್ರೋಹಿಯನ್ನು ಬಂಧಿಸಲಿಲ್ಲವೆ? ಆಶ್ಚರ್ಯ!"

"ಇಲ್ಲ, ಅವನನ್ನು ಬಂಧಿಸಲಿಲ್ಲ. ಶಾಸನವಿರುದ್ಧವಾದ ಯಾವ ಕಾರ್ಯವನ್ನೂ ಅವನು ಮಾಡಿಲ್ಲವಲ್ಲ ಹಿಡಿಯಲಿಕ್ಕೆ? ಅಲ್ಲದೆ ಅವನು ಮಾಡುವುದನ್ನೆಲ್ಲ ಪ್ರಜೆಗಳ ಕಲ್ಯಾಣಕ್ಕಾಗಿಯೆ ಮಾಡಿದ್ದಾನೆ. ಆದರಿಂದ ನಮ್ಮ ಸರ್ವನಾಶವೇ ಸಂಭವಿಸಿದರೂ ಅವನನ್ನು ದಂಡಿಸುವುದಕ್ಕೆ ಮಾರ್ಗವೇ ಇಲ್ಲ."

"ಆದರೆ ಹಿಡಿದಿದ್ದರೆ ನಾವು ಅವನಿಗೆ ಸರಿಯಾಗಿ ಶಾಸನ ಮಾಡುತ್ತಿದ್ದೆವು. ಅವನು ನಮ್ಮ ಶಾಸನವನ್ನು ಮೀರಿದ್ದಾನೆ, ಅವನಿಂದಾಗಿ ನಮಗೆ ಪದೇ ಪದೇ ಮುಖಭಂಗವಾಗಿದೆ, ಪೋಲಿಸ್ ಖಾತೆ ಕೈಲಾಗದ್ದೆಂದು ಜನರಿಂದ ಹೀಯಾಳಿಸಿಕೊಳ್ಳಬೇಕಾಗಿದೆ. ಯುವರಾಜರೆ, ನನ್ನನ್ನು ಈ ಕಷ್ಟದಿಂದ ಉಳಿಸಿರಿ. ವಿದ್ರೋಹಿಗಳ ದಳಪತಿ ಯಾರು, ಹೇಗಾದರೆ ಸಿಕ್ಕಾನು, ಎಲ್ಲಿ ಸಿಕ್ಕಾನು, ಎಂಬುದನ್ನು ಹೇಳಿರಿ; ನನಗಿಷ್ಟು ಸಹಾಯ ಮಾಡಿರಿ. ಅವನನ್ನು ಹಿಡಿಯುವುದರಿಂದ ತಮಗೇ ಹೆಚ್ಚು ಕಲ್ಯಾಣವಾಗುವುದು, ನನಗಲ್ಲ. ತಮ್ಮ ಸ್ವಾರ್ಥರಕ್ಷಣೆಗಾಗಿಯೆ ನನ್ನದಿಷ್ಟು ಆಗ್ರಹ; ತೊಳಲಾಟ; ನನಗಾಗಿ ಅಲ್ಲ. ಹೇಳಿರಿ" ಎಂದು ಬೇಡಿಕೊಂಡ ಬರ್ನಾರ್ಡ್.

"ನೀವು ಅವನನ್ನು ಬಂಧಿಸಬೇಕೆನ್ನುವಿರಾ? ಒಳ್ಳೇದು. ನನಗೊಪ್ಪಿತು ಆ ಕೆಲಸ. ಇನ್ನು ನಾಲ್ಕು ದಿನಗಳೊಳಗೇ—ಅಷ್ಟರಲ್ಲಿ ಹೆಚ್ಚೆಂದ

ಅನಿಷ್ಟವೇನೂ ಸಂಭವಿಸಲಿಕ್ಕಿಲ್ಲ–ಅವನನ್ನು ನಿಮ್ಮೆದುರು ತಂದು ನಿಲ್ಲಿಸುತ್ತೇನೆ. ಆದರೆ ನೀವೂ ನನಗೊಂದು ಮಾತು ಕೊಡಬೇಕು; ಅವನನ್ನು ಹಿಡಿಯುವ ಭಾರವನ್ನು ನನಗೊಪ್ಪಿಸಿ ನೀವು ಅಷ್ಟು ದಿನ ಈ ವಿಷಯದಲ್ಲಿ ನಿರ್ಲಿಪ್ತರಾಗಿ ಉಳಿಯಬೇಕು; ನಾನೇ ನಿಮ್ಮ ಪರವಾಗಿ ಎಲ್ಲವನ್ನೂ ಮಾಡುವೆ. ಇಂದಿನಿಂದ ನಾಲ್ಕನೆಯ ದಿನ, ಏನಾದರೂ ಮಾಡಿ ವಿದ್ರೋಹಿಗಳ ದಳಪತಿಯನ್ನು ನಿಮ್ಮ ಮುಂದೆ ನಿಲ್ಲಿಸುವುದು ನನ್ನನ್ನು ಕೂಡಿತು. ಒಪ್ಪಿಗೆಯೆ ?''

" ನಿಶ್ಚಯವಾಗಿ ಅವನನ್ನು ನನ್ನೆದುರಿಗೆ ನಿಲ್ಲಿಸುತ್ತೀರೆಂಬುದಕ್ಕೆ ಪ್ರಮಾಣವೇನು ?"

'' ನನ್ನ ಮಾತನ್ನೇ ನಂಬಬೇಕಲ್ಲದೆ ಬೇರೆ ಯಾವ ಹೊಣೆಯನ್ನೂ ಕೊಡಲಿಕ್ಕಾಗುವುದಿಲ್ಲ."

'' ನಿಮಗಿಷ್ಟು ದೃಢನಿಶ್ಚಯವಿದ್ದರೆ ಮೂರು ದಿನಗಳ ಅವಕಾಶವೇಕೆ ? ಇಂದು ರಾತ್ರಿಯೇ ಅವನನ್ನು ಹಿಡಿಯಲಿಕ್ಕಾಗುವುದಿಲ್ಲವೆ ? ಅವನನ್ನು ಇಲ್ಲಿಗೇ ಕರೆದುಕೊಂಡು ಬರಲು ಅಡ್ಡಿಯಿದೆಯೆ ?"

'' ಈ ಕೆಲಸ ಅಷ್ಟು ಸಹಜವೆಂದು ಬಗೆಯಬೇಡಿರಿ. ನಾನು ಹೇಳಿದ್ದರಲ್ಲಿ ಒಂದಕ್ಷರವೂ ಸುಳ್ಳಿಲ್ಲ. ನೀವಿಷ್ಟು ದಿನ ಆಗದ ಪ್ರಯತ್ನದಲ್ಲಿ ತಿರುಗಿದಿರಿ; ನಾನು ಕೇಳುವುದು ಮೂರೇ ದಿನ. ಇಷ್ಟು ಕಾಲ ಕಳೆದಿದ್ದೀರಿ; ಇನ್ನು ಮೂರುದಿನ ತಾಳುವುದು ದೊಡ್ಡದೆ ?''

'' ತಮ್ಮ ಸೂಚನೆಯನ್ನು ಒಪ್ಪಿಕೊಳ್ಳುತ್ತೇನೆ. ಆದರೆ ಈ ಕೆಲದಿನ ನಾನೇಕೆ ನಿಷ್ಕ್ರಿಯನಾಗಿರಬೇಕು ? ಅಷ್ಟರಲ್ಲಿಯೇ ನನಗೆ ಕೂಡ ಅವನನ್ನು ಹಿಡಿಯುವ ಸುಸಂಧಿಯೊದಗಬಹುದು.''

'' ಅದು ಬೇರೆ ಮಾತು. ಆದರೆ ಈ ಅವಧಿಯಲ್ಲಿ ನೀವು ಆ ಕಸರತ್ತಿಗೆ ಕೈಹಾಕಬಾರದೆಂದು ನನ್ನಿಚ್ಛೆ; ಅದರಿಂದ ನನ್ನ ಕಾರ್ಯದಲ್ಲಿ ವಿಘ್ನವಾಗುವ ಸಂಭವವಿದೆ.''

ಭೋಜನಾದಿ ಕಾರ್ಯಗಳು ಮುಗಿದ ಬಳಿಕ ಬರ್ನಾರ್ಡ್ ಕುರ್ಚಿಯಿಂದೇಳುತ್ತ '' ತಾವು ಕರೆದಿದ್ದಿರೆಂದೇ ನೂರು ಕೆಲಸ ಬದಿಗಿಟ್ಟು ಬಂದೆ; ಇಂದು ನನಗೆ ಊಟ ನಿದ್ದೆಗಳಿಗೆ ಪುರಸತ್ತೇ ಇರಲಿಲ್ಲ. ನಗರದ ಪರಿಸ್ಥಿತಿ ತಮಗೆ

ತಿಳಿಯದಲ್ಲ. ಯಾವಾಗ ಗಲಭೆಯೆದ್ದೀತೋ ಹೇಳಲಿಕ್ಕೆ ಬರುವಂತಿಲ್ಲ. ನಾನಿನ್ನು ಹೊರಡುತ್ತೇನೆ. ನಾಲ್ಕುದಿನಗಳಲ್ಲಿ ಮರೆಯದೆ ಅಷ್ಟು ಕೆಲಸ ಮಾಡಿರಿ." ಎಂದು ನುಡಿದು ಹೊರಟುಹೋದ.

"ನೀವು ಅವರಿಗೆ ಹೇಳಿದ ಮಾತಿನ ಅರ್ಥ ನನಗೆ ತಿಳಿಯಲಿಲ್ಲ!' ಬರ್ನಾರ್ಡ್ ಹೊರಟುಹೋದ ಬಳಿಕ ಮೇರಿಯೆಂದಳು.

ಜಾನ್ ಪಿಟರ್ಸ್ ನಕ್ಕು ಉತ್ತರವಿತ್ತ : "ಈಗ ಅದನ್ನು ತಿಳಿದು ಕೊಳ್ಳುವ ಆಗತ್ಯವಿಲ್ಲ. ನೀನಿನ್ನು ಮನೆಗೆ ಹೋಗು. ಇಂದು ರಾತ್ರಿ ನಾನೊಂದು ಸಭೆಗೆ ಹೋಗಬೇಕಾಗಿದೆ. ಅದನ್ನು ಮುಗಿಸಿಕೊಂಡು ನಿನ್ನಲ್ಲಿಗೆ ಬರುವೆ, ಕೆಲಸವಿದೆ."

ಈ ಮಾತಿನ ಇಂಗಿತವೂ ಮೇರಿಗೆ ತಿಳಿಯಲಿಲ್ಲ. ಅವಳು ಯುವ ರಾಜನ ಮೊಗವನ್ನು ನೋಡತೊಡಗಿದಳು.

೨೯

ಅಂದೇ ರಾತ್ರಿ ಹಿಂದೆ ಬಣ್ಣಿಸಿದ ಹೋಟೆಲಿನ ಹನ್ನೆರಡನೆಯ ಕೋಣೆ ಯೊಳಗೆ ರಾಜದ್ರೋಹಿಗಳೇಳು ಜನ ಮಂದಸ್ವರದಲ್ಲಿ ಮಾತನಾಡುತ್ತಿದ್ದರು. ಎಲ್ಲರ ಮುಖಗಳೂ ಗಂಭೀರವಾಗಿದ್ದವು. ಯಾವುದೋ ನಿಕಟವರ್ತಿಯಾದ ವಿಪತ್ತಿನ ಭಯದಿಂದ ಎಲ್ಲರೂ ವ್ಯಾಕುಲರಾಗಿದ್ದರು ಅವರು ಕ್ರಾಂತಿಯ ವಿಷವಾಗಿ ಮಾತನಾಡುತ್ತ ದಳಪತಿಗಾಗಿ ಕಾಯ್ದುಕೊಂಡಿದ್ದರು.

ಲೆವ್ವಿಟ್ ನುಡಿದ : "ಎಷ್ಟೆಷ್ಟೊ ಸುದ್ದಿಗಳು ಬಂದಿವೆ ನಾವು ನಮ್ಮ ಕರ್ತವ್ಯವನ್ನು ಬೇಗನೆ ನಿಶ್ಚಿತಗೊಳಿಸಬೇಕಾಗಿದೆ. ರಾಜಯುವರಾಜರು ಜರ್ಮನಿಯೊಡನೆ ಗುಪ್ತಾಲೋಚನೆ ನಡೆಸಿದ್ದಾರೆ. ಇದಕ್ಕೆ ಪ್ರತೀಕಾರದ ಯೋಜನೆ ಮಾಡುವುದು ಅತ್ಯಗತ್ಯ. ರಾಜಯುವರಾಜರಿಬ್ಬರ ಜೀವಿತವನ್ನು ಮುಗಿಸಿಬಿಡುವುದೇ ಲೇಸೆಂದು ನನ್ನ ಅಭಿಪ್ರಾಯ ನೀವು ಯಾರಾದರೂ ನನ್ನ ನೆರವಿಗೆ ಬಂದರೆ ಇಂದು ರಾತ್ರಿಯೇ ಅರಮನೆಯನ್ನು ಹೊಕ್ಕು ಇಬ್ಬ ರನ್ನೂ ಗತಿಗಾಣಿಸುತ್ತೇನೆ. ಅವರಿಬ್ಬರ ಅತ್ಯಾಚಾರವು ಅಸಹನೀಯ "

"ಈ ಪ್ರಯತ್ನ ಸಫಲವಾಗುವುದು ಕಠಿನ: ಅರಮನೆಗೆ ಸರ್ಪಗಾವ ಲಿದೆ." ಎಂದನೊಬ್ಬ ವಿದ್ರೋಹಿ.

“ಆದಕ್ಕೇಕೆ ಹೆದರುವುದು ? ಅಗತ್ಯವಿದ್ದರೆ ನಾವು ನಾಲ್ಕೈದುನೂರು ಮಂದಿಯನ್ನು ಜೊತೆಗೊಯ್ಯಬಹುದು. ನಮ್ಮ ದಳದಲ್ಲಿಯ ಆರಿಸಿದ ಕೆಲವೊಂದು ಜನರು ಸಂಗಡ ಇದ್ದರೆ, ಕಾವಲುಗಾರರನ್ನು ಫೂತ್ಕಾರದಿಂದಲೇ ಹಾರಿಸಿಬಿಡುತ್ತಾರೆ. ಆವರೆ ಬಹುಶಃ ಅಷ್ಟು ಜನರನ್ನು ಕರೆದೊಯ್ಯುವ ಅಗತ್ಯವೂ ಉಂಟಾಗಲಿಕ್ಕಿಲ್ಲ;- ಕಾವಲುಗಾರರಲ್ಲಿ ಹೆಚ್ಚಾಗಿ ನಮ್ಮ ದಳದವರಿದ್ದಾರೆ.” ಎಂದ ಲೆವ್ವಿಟ್.

ಅಷ್ಟರಲ್ಲಿ ದಳಪತಿ ಮೆಲ್ಲಡಿಯಿಡುತ್ತ ಆ ಕೋಣೆಯಲ್ಲಿ ಪ್ರವೇಶಿಸಿದ. ದಳಪತಿ ಎಂದ: “ ಮಹಾಶಯರೆ, ನಿಮ್ಮ ಹಂಚಿಕೆ ಸಾಟೀತೆಂದು ಎನಿಸುವುದಿಲ್ಲ. ಯಾವ ಧೈರ್ಯದಿಂದ ನೀವಿಷ್ಟು ನಿಶ್ಚಿಂತರಾಗಿದ್ದೀರಿ ? ಅರಸನು ಇಪ್ಪತ್ತುನಾಲ್ಕು ಗಂಟೆಗಳಲ್ಲಿ ಎರಡು ಸಲ ಕಾವಲುಗಾರರನ್ನು ಬದಲಿಸುತ್ತಾನೆ. ಐವತ್ತು ಜನ ಹಳೆಯ ಕಾವಲುಗಾರರನ್ನು ತೆಗೆದಿದ್ದಾನೆ. ಅವರ ಬದಲು ಕಾವಲಿಗೆ ಬಂದ ಜನರು ಅರಸನ ಸ್ವಂತ ರೆಜಿಮೆಂಟಿನವರು; ಅವರು ರಾಜನಿಗಾಗಿ ಪ್ರಾಣಕೊಡಲೂ ಹಿಂಜರಿಯುವವರಲ್ಲ.”

“ ತಮ್ಮ ಸುದ್ದಿಯಿದು ಸತ್ಯವೆ ? ” ಎಂದು ಲೆವ್ವಿಟ್ ಪ್ರಶ್ನಿಸಿದ. ಸದ್ಯ ದಲಪತಿಯ ಸುದ್ದಿಯನ್ನವಲಂಬಿಸಿ ನಡೆಯುವುದಕ್ಕೆ ಅವನ ಮನಸು ಸಿದ್ಧವಿರಲಿಲ್ಲ. ಅರಮನೆಯ ಗುಟ್ಟುಗಳು ದಲಪತಿಗೆ ತಿಳಿಯುವ ಸಂಭವವಿಲ್ಲವೆಂದು ಅವನ ಭಾವನೆ.

ದಳಪತಿ ಹೇಳಿದ: “ ಸಂಪೂರ್ಣ ನಿಜ. ಅಲ್ಲದೆ ನಮ್ಮನಿಮ್ಮಲ್ಲಿ ಮಾತಾಗಿತ್ತು- ನೀವು ರಕ್ತಪಾತವನ್ನು ಅವಲಂಬಿಸಬಾರದು, ಶಾಸನಪದ್ಧತಿಯನ್ನು ಪರಿವರ್ತಿಸಲು ನರರಕ್ತದಿಂದ ಮಾತೃಭೂಮಿಯನ್ನೆರೆಯಲಾಗದು ಎಂದು. ಆದರೂ ರಾಜಯುವರಾಜರ ಕೊಲೆಯ ಸಂಚು ನಡೆಸಿರುತ್ತೀರಿ. ಹಿಂದಿನ ವಚನದಂತೆ ನಡೆಯಲು ನೀವು ಸಿದ್ಧರಿಲ್ಲವೆ ? ನಿಮ್ಮ ಅಭಿಪ್ರಾಯ ವೇನು ? ”

ಲೆವ್ವಿಟ್ ಹೇಳಿದ: “ ನಾವೇನು ಮಾತು ಮುರಿಯುತ್ತಿರಲಿಲ್ಲ. ಆದರೆ ಅರಸನು ಅನ್ಯದೇಶದ ನೆರವಿನಿಂದ ಸಿಂಹಾಸನವನ್ನು ದಕ್ಕಿಸಿಕೊಳ್ಳಲು ಪ್ರಯತ್ನ ನಡೆಸಿದ್ದಾನೆ. ಅವನನ್ನು ಕ್ಷಮಿಸುವುದು ಹೇಗೆ ? ”

ದಳಪತಿ ಹೇಳಿದ: “ ಪ್ರಪಂಚದ ಇತಿಹಾಸದಲ್ಲಿ ಹೀಗೆಯೇ ಆಗುತ್ತ ಬಂದಿದೆ. ಇದೇನು ಆಶ್ಚರ್ಯವಲ್ಲ. ಅಂಜುವ ಕಾರಣವೂ ಇಲ್ಲ. ಪ್ರಸಂಗವು ನೀವು ಭಾವಿಸಿದಷ್ಟು ಗುರುತರವಾಗಿಲ್ಲ. ರಾಜನು ಜರ್ಮನಿಯ ಸಹಾಯವನ್ನು ಪಡೆಯಲು ಹವಣಿಸುತ್ತಿದ್ದಾನೆ, ನಿಜ. ಆದರೆ ಇಡೀ ಯುರೋಪದ ಮಾತನ್ನು ಉಪೇಕ್ಷಿಸಿ, ಈ ಅಧಿಕ ಪ್ರಸಂಗದಲ್ಲಿ ಕೈಹಾಕುವಷ್ಟು ಸಾಹಸ ಜರ್ಮನಿಯಲ್ಲಿಲ್ಲ. ಯುರೋಪಿಗೆ ಯುರೋಪವೇ ನಮ್ಮ ಬೆನ್ನು ಕಟ್ಟುವುದು ಇತರ ಎಲ್ಲ ದೇಶಗಳೂ ಜರ್ಮನಿಯ ಅವ್ಯಾಪಾರವನ್ನು ದೂರ ನಿಂತು ಪಿಟ್ಟೆನ್ನದೆ ಉದಾಸೀನ ದೃಷ್ಟಿಯಿಂದ ನೋಡುವ ಸಂಭವವೇ ಇಲ್ಲ.”

ಈವರೆಗೆ ಮೌನವಾಗಿ ಕೇಳುತ್ತ ಕುಳಿತುಕೊಂಡಿದ್ದ ಪ್ರಾಧ್ಯಾಪಕ ಈಗ ಮಾತನಾಡಿದ : “ ಮಹಾಶಯರೆ, ಇದು ನಿಮ್ಮ ಮನೋರಾಜ್ಯದ ಮಾತೋ, ಈ ಬಗ್ಗೆ ವಿಶೇಷ ವರ್ತಮಾನವೇನಾದರೂ ಉಂಟೊ ?”

“ ಅಲ್ಲ, ಇದು ನನ್ನ ಬರೀ ಎಣಿಕೆಯ ಮಾತಲ್ಲ. ವಿಶೇಷವಾರ್ತೆಯ ಆಧಾರವಿಲ್ಲದಿದ್ದರೆ ನಾನು ಹೀಗೆ ಹೇಳುತ್ತಿರಲಿಲ್ಲ. ಇಂದಿನ ಸಂಜೆಯ ಪತ್ರಿಕೆಗಳಲ್ಲಿ ಪ್ರಕಟವಾದ ತಂತಿಸುದ್ದಿಯನ್ನೋದಿದರೆ ಎಲ್ಲ ತಿಳಿಯುವುದು. ಇಂದು ಇಳಿಹೊತ್ತಿನಲ್ಲಿ ಇಂಗ್ಲಂಡೇಶ್ವರನು ಮಂತ್ರಾಲೋಚನೆಯ ಸಭೆಗೆ ಉಪಸ್ಥಿತನಾಗಿದ್ದ ; ಆ ಬಳಿಕ ಫ್ರಾನ್ಸಿನ ರಾಯಭಾರಿ ಅವನನ್ನು ಸಂದರ್ಶಿಸಿದ ; ಇಲ್ಲಿನ ಆಂಗ್ಲರಾಯಭಾರಿ ಬಿಟ್ಟ ದೀರ್ಘವಾದ ತಂತಿ ಕೈಸೇರಿದ ತರುವಾಯವೇ ಇಂಗ್ಲಂಡಿನ ಮಂತ್ರಿಮಂಡಲದ ಈ ಸಭೆ ಸೇರಿತ್ತು.”

“ ಎಂದರೆ ನಮ್ಮ ದೇಶದ ಒಳ ರಾಜಕಾರಣದಲ್ಲಿ ಇಂಗ್ಲಂಡು ಜರ್ಮನಿಗೆ ಕೈಹಾಕಗೊಡುವುದಿಲ್ಲವೆಂದು ನಿಮ್ಮ ಅಭಿಪ್ರಾಯವೊ ?” ಅಧ್ಯಾಪಕ ಹೆಚ್ಚಿನ ಸ್ಪಷ್ಟೀಕರಣವನ್ನು ಪಡೆಯುವ ಅಪೇಕ್ಷೆಯಿಂದ ಕೇಳಿದ.

“ ಹೌದು, ಅದೇ ನಾನು ಹೇಳಿದ್ದು. ಜರ್ಮನಿ ಮುಂಗೈ ಕಸುವಿನಿಂದ ಇಲ್ಲಿ ಅಧಿಕಪ್ರಸಂಗತನ ಮಾಡಿದರೆ ಯುರೋಪಿನಲ್ಲಿ ಮಹಾಯುದ್ಧ ಅನಿವಾರ್ಯ. ಈಗ ಜರ್ಮನಿ ಯುದ್ಧಕ್ಕೆ ಸಿದ್ಧವಿಲ್ಲವೆಂದು ನನ್ನ ನಂಬುಗೆ.”

“ ಇಂಗ್ಲಂಡ್-ಫ್ರಾನ್ಸುಗಳು ಜರ್ಮನಿಯ ಕಿಲ್ಬಿಕೇತನಕ್ಕೆ ತಡೆಯೊಡ್ಡಿದರೆ, ಜರ್ಮನ್ ರಾಯಭಾರಿ ಪ್ರಿನ್ಸ್‌ಸುಯೇಸರು ಹಾಕಿದ ಹವಣಿಕೆ ಹಂಚಿಕೆ

ಗಳೆಲ್ಲಾ ವ್ಯರ್ಥವಾಗುವವು.” ಎಂದು ಅಧ್ಯಾಪಕನು ಸಮಾಧಾನದಿಂದ ನುಡಿದ.

“ಇದರಲ್ಲಿ ಸಂದೇಹವೇನು? ಈಗ ನನ್ನ ಮಾತು ಕೇಳಿ— ನೀವು ನನ್ನನ್ನು ನಿಮ್ಮ ದಳಪತಿಯೆಂದು ಅಂಗೀಕರಿಸಿದ್ದೀರಿ, ನನ್ನ ನಿರ್ದೇಶದಂತೆ ವರ್ತಿಸಲು ಒಪ್ಪಿದ್ದೀರಿ. ನಾನು ಸ್ಪಷ್ಟವಾಗಿ ಹೇಳಿದ್ದೇನೆ, ಶಾಸನಪದ್ಧತಿಯನ್ನು ಬದಲಿಸಲು ಯಾವ ಉಪಾಯುವನ್ನು ಅವಲಂಬಿಸಿದರೂ ರಕ್ತಪಾತ ಮಾತ್ರ ಮಾಡಲಾಗದು, ಯಾರನ್ನೂ ಕೊಲೆ ಮಾಡಲಾಗದು. ಆದಿರಲಿ. ಈಗ ರಾಜಯುವರಾಜರನ್ನು ಕೊಲ್ಲಲು ಹೊಂಚುಹಾಕುತ್ತಿರುವಂತೆ ನನ್ನ ಕಿವಿಗೆ ಬಿದ್ದಿದೆ. ನಮ್ಮ ದಳದಲ್ಲಿ ದೂರದೃಷ್ಟಿಯಿಲ್ಲದ, ಅಪಕ್ವಬುದ್ಧಿಯ ಯುವಕರು ಅನೇಕರಿದ್ದಾರೆ, ಅವರನ್ನು ಹಿಡಿಯುವುದು ನಿಮಗೆ ಕಠಿನವಾಗಿದೆ ಯೆಂಬುದನ್ನು ನಾನು ಒಪ್ಪುತ್ತೇನೆ. ಅವರಿಗೆ ನೆತ್ತರ ಆಸೆ ಪ್ರಬಲ ; ಆದರೂ ಹೇಗಾದರೂ ಮಾಡಿ ಅವರನ್ನು ಅಂಕೆಯಲ್ಲಿಟ್ಟುಕೊಳ್ಳಲೇ ಬೇಕು. ನಾನು ಮತ್ತೆ ನಿಮ್ಮನ್ನೆಚ್ಚರಿಸುತ್ತೇನೆ— ಹೊಸ ಪಾರ್ಲಿಮೆಂಟ್ ಸಭೆಸೇರುವ ಮುನ್ನ ನೀವು ನನ್ನ ಸಲಹೆಯನ್ನು ಮೀರಿ ನಡೆದರೆ, ಗುಪ್ತಹತ್ಯೆಗೆ ತೊಡಗಿದರೆ ಅಥವಾ ಅದಕ್ಕೆ ಆಶ್ರಯ ಕೊಟ್ಟರೆ ನಾನು ನಿಮ್ಮ ದಳದ ಹಿರಿಯತನವನ್ನು ಬಿಟ್ಟುಬಿಡುತ್ತೇನೆ ; ಇಷ್ಟೇ ಅಲ್ಲ, ಇದಿರು ಪಂಗಡವನ್ನು ಸೇರಿ ಪ್ರತಿಭಟಿಸುತ್ತೇನೆ; ತಿಳಿಯಿತೆ ?”

ದಲಪತಿಯ ಮಾತು ಸ್ಪಷ್ಟವಾಗಿಯೆ ಇತ್ತು. ಯಾರಿಗೂ ತಿಳಿದುಕೊಳ್ಳುವುದಕ್ಕೆ ಕಠಿನವಾಗಿರಲಿಲ್ಲ ಇದಕ್ಕೆ ಪ್ರತಿವಾದಿಸಲು ಯಾರಿಗೂ ಎದೆ ಸಾಲಲಿಲ್ಲ. ಎಲ್ಲರೂ ನೀರವವಾಗಿ ಕುಳಿತರು.

ದಲಪತಿ ಗಂಭೀರವಾಗಿ ಮತ್ತೆ ಹೇಳತೊಡಗಿದ : “ಹೊಸ ಪಾರ್ಲಿಮೆಂಟ್ ಸಭೆ ಸೇರಲು ಹೆಚ್ಚು ತಡವಿಲ್ಲ. ಇನ್ನು ಮೂರೇ ಮೂರು ದಿನಗಳ ಅವಕಾಶ. ಈ ಮೂರು ದಿನ ಮಾತ್ರ ತಾಳ್ಮೆಯಿಂದಿರಲಾರಿರಾ ? ಗ್ರಾಮೋ, ನನ್ನ ಮಾತು ಕೇಳಿರಿ.— ಪಾರ್ಲಿಮೆಂಟನ್ನು ಆರಂಭಿಸಲು ರಾಜರು ತಾವೇ ಬಂದರೆ. ಶಿಷ್ಟಾಚಾರದ ನಿಯಮದಲ್ಲಿ ಏನೂ ಕುಂದುಕೊರತೆ ಆಗಕೂಡದು ಈ ಸಮಯದಲ್ಲಿ ಜೋಕೆಯಿಂದ ಕೆಲಸ ಸಾಗಿಸದಿದ್ದರೆ, ಏನಾದರೂ ತಪ್ಪು ತಡೆಯಾದರೆ, ನಮ್ಮ ಆಸೆಭರವಸೆಗಳೆಲ್ಲಾ ಮಣ್ಣುಗೂಡುವವು; ಇಷ್ಟೇ ಅಲ್ಲ,

ಇಡೀ ಯುರೋಪಿನೆದುರು ನಾವು ಕೈಫಿಯಿತ್ತು ಒಪ್ಪಿಸಬೇಕಾಗುವುದು, ಮರೆಯಬೇಡಿರಿ. ಹಟಕ್ಕೆಬಿದ್ದು ಗಡಿಬಿಡಿಯಿಂದ ಏನಾದರೂ ಸಲ್ಲದ ಕೆಲಸ ಮಾಡೀರಿ. ತರುಣ ವಿಪ್ಲವವಾದಿಗಳು ಸಂಪೂರ್ಣ ನಿಷ್ಕ್ರಿಯರಾಗಿಯೆ ಇರಬೇಕು ಹೊಣೆಯ ಅರಿವುಳ್ಳವರ ಕೈಯಲ್ಲಿ ಮಾತ್ರ ಆಯುಧ ಕೊಡಿರಿ. ಅನಿವಾರ್ಯ ಪ್ರಸಂಗದಲ್ಲಿ ಮಾತ್ರ ಆಯುಧದ ಉಪಯೋಗ. ಬಹುಶಃ ಅದರ ಆವಶ್ಯಕತೆ ಉಂಟಾಗಲಿಕ್ಕಿಲ್ಲ. ಯುದ್ಧದ ಸಂಭವವಿಲ್ಲ. ನಾನು ಹೀಗೆ ಹೇಳುವುದಕ್ಕೆ ಕಾರಣವೆಂದರೆ, ಯಾರೂ ಯುದ್ಧಕ್ಕೆ ಬರುವುದಿಲ್ಲ.''

"ಎಂದರೆ ಸೈನಿಕರೆಲ್ಲರೂ ನಮ್ಮ ದಳಕ್ಕೆ ಸೇರಿರುವರೆ?" ಲೆವ್ವಿಟ್ ಕೇಳಿದ.

"ಅವರು ತಮ್ಮ ದೇಶವಾಸಿಗಳ ಮೇಲೆ ಗುಂಡುಗಳನ್ನು ಸುರಿಸುವುದಿಲ್ಲ. ರಾಜ ಮತ್ತು ಸೇನಾಪತಿ ಇಬ್ಬರೂ ಮಾತ್ರ ಸೈನಿಕರು ನಿಕರದಿಂದ ಕಾದುತ್ತಾರೆ, ಎದುರು ಪಕ್ಷದವರನ್ನು ಗುಂಡಿಕ್ಕಿ ಕೊಲ್ಲುತ್ತಾರೆ ಎಂದು ನಂಬಿರುತ್ತಾರೆ. ಅವರ ಈ ತಿಳವಳಿಕೆ 'ಭ್ರಮೆಯೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ ನನ್ನೊಡನೆ ಇನ್ನೇನಾದರೂ ಆಲೋಚಿಸುವುದಿದೆಯೆ?''

ಬಹಳ ಹೊತ್ತು ಯಾರೂ ಮಾತನಾಡಲಿಲ್ಲ. ಬೀದಿಯಲ್ಲಿ ಬಹುಜನರ ಸ್ವರ ಕೇಳಿಸಿತು. ಏನೆಂದು ನೋಡುವುದಕ್ಕೆ ಕೆಲವರು ಕಿಡಿಕಿಯ ಬಳಿ ಹೋದರು. ಅಸಂಖ್ಯ ನಾಗರಿಕರು ರಾಷ್ಟ್ರೀಯ ಗೀತಗಳನ್ನು ಹಾಡುತ್ತ ನಗರಪ್ರದಕ್ಷಿಣೆ ನಡೆಸಿದ್ದರು. ಅನೇಕರ ಕೈಗಳಲ್ಲಿ ಪತಾಕೆಗಳಿದ್ದವು. 'ಸ್ವತಂತ್ರ ಬರ್ಜಿಲೆಂಡ್' ಎಂದು ದೊಡ್ಡ ಅಕ್ಷರಗಳಿಂದ ಅವುಗಳಮೇಲೆ ಬರೆದಿದ್ದರು ಪಥಿಕರೂ ಅವರೊಡನೆ ಸೇರಿ ಮೆರವಣಿಗೆಯ ಭವ್ಯತೆಯನ್ನು ಹೆಚ್ಚಿಸುತ್ತಿದ್ದರು.

ಮೆರವಣಿಗೆ ಆ ಬೀದಿಯನ್ನು ದಾಟಿದ ಬಳಿಕ ಎಲ್ಲರೂ ಕಿಡಿಕಿಯಿಂದ ಸರಿದು ತಮ್ಮ ಸ್ಥಳದಲ್ಲಿ ಕುಳಿತರು. ಗ್ರಾಮೋ ನುಡಿದ: "ಇವರು ಬರೀ ಬಾಯಿಮಾಡುತ್ತ ತಿರುಗಾಡುವವರೆಗೆ ಇವರನ್ನು ಯಾರೂ ತಡೆಯಲಾರರು; ಸ್ವೇಚ್ಛೆಯಿಂದ ಬಾಯ್ತುಂಬ ತೀರಿಸಿಕೊಂಡು ಗಂಟಲ ಹರಿದುಕೊಳ್ಳಲಿ!"

* * * * *

ಅಂದೇ ರಾತ್ರಿ ೧ ಗಂಟೆಗೆ ಗ್ರೇಸಳ ಅಬಚಿಯ ಮನೆಯಲ್ಲಿ ಭೋಜನ

ಸಮಾರಂಭವಿತ್ತು. ಒಂದರ ತರುವಾಯ ಯುವರಾಜನು ಅಲ್ಲಿಗೆ ಹೋಗಿ ಗ್ರೇಸಳನ್ನು ಹುಡುಕಾಡಿದ. ಅವಳಾಗ ಬರ್ನಾರ್ಡನೊಡನೆ ಮಾತಾಡುತ್ತಿದ್ದಳು, ರಷ್ಯದ ರಾಯಭಾರಿ ಸಸಿಯದಲ್ಲಿಯೆ ನಿಂತು ಅವರ ಮಾತುಗಳನ್ನು ಕೇಳುತ್ತಿದ್ದ. ಯುವರಾಜನು ಬರುತ್ತಲೆ ಗ್ರೇಸ್ ಮಾತನ್ನು ಮುಗಿಸಿ ಅಪ್ರಸನ್ನ ದೃಷ್ಟಿಯಿಂದ ಅವನಕಡೆ ನೋಡಿದಳು.

"ಏನು ಸಮಾಚಾರ ? ಇಷ್ಟೇಕೆ ಗಂಭೀರಳಾಗಿದ್ದೀ ?" ಅವಳು ತನ್ನ ಬಗ್ಗೆ ಅಸಂತುಷ್ಟಳಾದುದನ್ನರಿತು ಯುವರಾಜ ಕೇಳಿದ.

"ನೀವು ಬರಲಿಕ್ಕೆ ಇಷ್ಟೇಕೆ ತಡ ? ನಾನಂತೂ ನಿಮ್ಮ ಆಸೆಯನ್ನೇ ಬಿಟ್ಟಿದ್ದೆ." ಗಡಿಯಾಳವನ್ನು ನೋಡಿಕೊಂಡು ಗ್ರೇಸ್ ನುಡಿದಳು.

"ತಪ್ಪಾಯಿತು, ಕ್ಷಮಿಸು. ಮತ್ತೇನಾದರೂ ಮಾತನಾಡುವುದಿದೆಯೆ?" ಯುವರಾಜ ಅನುತಪ್ತಸ್ವರದಲ್ಲಿ ಮಾತನಾಡಿದ.

"ನೀವು ಬರ್ಜಿಮನ್ ಹೋಟೆಲಿನಲ್ಲಿ ಬರ್ನಾರ್ಡ್‌ರೊಡನೆ ಊಟಮಾಡಿದಿರಾ ?"

"ಆ ಮಾತೇಕೆ ?"

"ನಿಮ್ಮೊಂದಿಗೆ ಮತ್ತೆ ಯಾರಿದ್ದರು ?"

"ನಿನ್ನೆದುರಿಗೆ ಹೇಳತಕ್ಕಂಥವರು ಯಾರೂ ಇರಲಿಲ್ಲ"

"ಏತಕ್ಕೆ ಹೋಗಿದ್ದಿರಿ ಅಲ್ಲಿಗೆ ?"

"ಬರ್ನಾರ್ಡರನ್ನು ಕೇಳು."

"ಅವರನ್ನೇಕೆ ಕೇಳಲಿ ? ಅವರು ತಮಗೆ ಬೇಕಾದಲ್ಲಿ ಹೋಗುತ್ತಾರೆ; ಅದನ್ನು ತಿಳಿದುಕೊಳ್ಳುವ ಅಗತ್ಯ ನನಗಿಲ್ಲ, ಅಧಿಕಾರವೂ ಇಲ್ಲ. ನಿಮ್ಮ ವಿಷಯವೇ ಬೇರೆ. ನಿಮ್ಮೊಡನೆ ಒಬ್ಬ ಯುವತಿಯಿದ್ದಳೆಂದು ನನಗೆ ಗೊತ್ತಾಗಿದೆ."

"ಹೌದು. ನಿಜ"

"ನಮ್ಮಲ್ಲಿಯ ಸಮಾರಂಭಕ್ಕೆ ಬರದೆ, ಒಬ್ಬ ಯುವತಿಯನ್ನು ಕಟ್ಟಿಕೊಂಡು ಹೋಟೆಲಿನಲ್ಲಿ ಉಂಡ ಕಾರಣವೇನು ?"

ಈಗ ಯುವರಾಜನು ಗಂಭೀರಸ್ವರದಲ್ಲಿ ಉತ್ತರವಿತ್ತ: "ಗ್ರೇಸ್, ಇನ್ನು ಮೂರು ದಿನಗಳ ತರುವಾಯ ಇದನ್ನು ಕೇಳಿದ್ದರೆ ನಿನಗೆ ಸರಿಯಾದ ಉತ್ತರ ಸಿಕ್ಕುತ್ತಿತ್ತು. ನಿನ್ನ ಮುಂದೆ ಹೇಳಬಾರದ್ದು ನನ್ನದೇನೂ ಇಲ್ಲ, ನಿಜ.

ಆದರೂ ಈಗ ಈ ಪ್ರಶ್ನೆಗೆ ಉತ್ತರ ದೊರೆಯಲಾರದು. ನನ್ನ ಅನೇಕ ಕಾರ್ಯಗಳು ನಿನಗೀಗ ಒಡಪುಗಳಂತೆ ಕಾಣಬಹುದು. ಆದರೆ ಇನ್ನು ಮೂರುದಿನ ನಿನ್ನ ಕೌತೂಹಲವನ್ನು ಹತ್ತಿಟ್ಟುಕೊಂಡಿರಬೇಕು. ಅಷ್ಟೇ ಅವ ವಾಧ್ಯ. ನಿನಗೆ ಸಮ್ಮತವೋ ? ”

“ ಹಾಗೇ ಆಗಲಿ. ಆದರೆ ಅಷ್ಟು ರಾತ್ರಿಯಲ್ಲಿ, ಕಾಡು ಕಡೆಯುಕ್ಕಡದ ಹೋಟೆಲಿನಲ್ಲಿ ಕೆಲಗಂಟೆಗಳ ಸಮಯವನ್ನು ಒಬ್ಬ ಯುವತಿಯೊಡನೆ ಕಳೆ ದದ್ದಕ್ಕೆ ಸರಿಯಾದ ಕಾರಣವನ್ನು ಹೇಳದಿದ್ದರೆ ನಾನೇನೂ ಬಿಡುವವಳಲ್ಲ. ನಿಮ್ಮಿಷ್ಟದಂತೆ ಮೂರು ದಿನ ಸಮಯ ಕೊಡುತ್ತೇನೆ; ಈ ಮೂರು ದಿನ ಗಳ ತರುವಾಯ ಮಾತ್ರ ನೀವು ನನ್ನನ್ನು ಬಿಟ್ಟು ಮತ್ತೆಲ್ಲಿಯೂ ಊಟ ಮಾಡಲಿಕ್ಕಾಗದು.”

“ ಅದಕ್ಕೆ ನನ್ನ ಹದಿನಾರಾಣೆ ಒಪ್ಪಿಗೆ.” ನಗುತ್ತ ಯುವರಾಜನು ನುಡಿದ. “ಇನ್ನೊಂದು ವಿಷಯ. ಫ್ರೆಂಚ್ ರಾಯಭಾರಿ ಇಲ್ಲಿಗೆ ಬಂದಿದ್ದರೆ ? ಎಲ್ಲಿದಾರೆ ? ”

“ ಆಗ್ಲ ರಾಯಭಾರಿಯೊಡನೆ ಮಾತಾಡುತ್ತಿದ್ದಾರೆ. ಎಷ್ಟೋ ಗಂಟೆ ಗಳಾದವು, ಮಾತನಾಡುತ್ತಲೇ ಇದ್ದಾರೆ. ಈಪೊತ್ತು ಮುಗಿಯುತ್ತವೊ ಇಲ್ಲವೋ ಅವರ ಮಾತು ! ”

೩೦

ಮರುದಿನ ಪ್ರಾತಃಕಾಲದಲ್ಲಿ ರಾಜಧಾನಿಯಲ್ಲಿ ಒಂದು ವಿಷಯವನ್ನು ಕುರಿತು ಮಹಾ ಆಂದೋಲನವೆದ್ದಿತು. ಎಲ್ಲ ಪತ್ರಿಕೆಗಳಲ್ಲಿಯೂ ಅದೇ ಮಾತು; ಅಲ್ಲಲ್ಲಿ ಸೇರುವ ಜನರ ಕೂಟಗಳಲ್ಲಿ ಆ ವಿಷಯದ ಹೊರತು ಬೇರೆ ಚರ್ಚೆಯೆ ಇರಲಿಲ್ಲ. ಮ್ಯಾಡಮ್ ಸೇಯರ್ಸ್—ಗ್ರೇಸಳ ಅಬಚಿ—ಬೆಳಗಿನ ಉಪ ಹಾರವನ್ನು ಮುಗಿಸಿ ಸಿಗಾರೇಟನ್ನು ಸೇದುತ್ತ ಪತ್ರಿಕೊಂದನ್ನು ಓದುತ್ತಿದ್ದಳು. ಕೆಲಹೊತ್ತು ಪತ್ರಿಕೆಯನ್ನು ನೋಡಿ, ಅಧೀರಭಾವದಿಂದ ಮೇಜಿನಮೇಲೆ ಅದ ನ್ನೆಸೆದು ತನ್ನಷ್ಟಕ್ಕೆ ಎಂದುಕೊಂಡಳು: ‘ ಮನುಷ್ಯ ಇಷ್ಟು ಹೇಡಿಯೆಂದು ನಾನೊಮ್ಮೆಯೂ ಬಗೆದಿರಲಿಲ್ಲ. ಅಂಥ ಅಪ್ಸರೆಯನ್ನು ಅವನೇಕೆ ಪಾ-ಶಿಗೆ?”

“ ಯಾರಮ್ಮ ? ” ಇದೂರದಲ್ಲಿ ಕುಳಿತಿದ್ದ ಗ್ರೇಸ್ ಕೇಳಿದಳು.

“ ಯುವರಾಜರು.”

“ ಅವರೇನು ಅನ್ಯಾಯ ಮಾಡಿದರು ?”

“ ಅನ್ಯಾಯವಲ್ಲವೆ ? ಊರಲ್ಲಿ ದೊಂಬಿ ಎದ್ದುದನ್ನು ಕಂಡು ಜೀವ ದಂಜಕೆಯಿಂದ ಗೌಪ್ಯವಾಗಿ ಪ್ಯಾರಿಸಿಗೆ ಓಡಿಹೋಗಿದ್ದಾರೆ ! ಇಂಥ ಹೇಡಿ ಯನ್ನು ಎಲ್ಲಿಯೂ ಕಾಣಲಿಲ್ಲ ಬಿಡು. ಮುದುಕ ದೊರೆಯೇ ಅವನಿಗಿಂತ ಎಷ್ಟೊ ಪಾಲಿಗೆ ಬೇಕು; ಅವನೇ ಧೈರ್ಯವಂತ. ಅದೃಷ್ಟದಲ್ಲಿದ್ದದ್ದಾಗಲೆಂದು ಅರಮನೆಯಲ್ಲಿ ಸುಮ್ಮನಿದ್ದುಬಿಟ್ಟಿದ್ದಾನೆ. ಓಡಿ ಹೋಗಲಿಲ್ಲ. ಮುದುಕನಿ ಗಿಂತ ಏಳುಕಡೆ,–ಯುವರಾಜನ ಹರಯ ಸುಟ್ಟಿತು ! ”

“ ನಿನ್ನ ಅನುಮಾನ ಸತ್ಯವಲ್ಲವೆಂದು ನನಗೆನಿಸುತ್ತದೆ. ನಿನ್ನೆ ರಾತ್ರಿ ಅವರೊಡನೆ ಎಷ್ಟೊ ಮಾತನಾಡಿದೆ. ಈ ವಿಷಯ ಅವರು ಹೇಳಲೇ ಇಲ್ಲ.”

“ ಹೇಳಿರಲಿಕ್ಕಿಲ್ಲ,–ಹೋದದ್ದಂತೂ ನಿಜವಷ್ಟೆ ? ಎಲ್ಲ ಪತ್ರಿಕೆಗಳೂ ಯುವರಾಜರ ಈ ನಡತೆಯನ್ನು ಹಿಯ್ಯಾಳಿಸಿವೆ. ಅವರು ಇಂದು ರಾತ್ರಿ ಪ್ಯಾರಿಸಿನಲ್ಲಿ ಯಾವುದೊಂದು ಹೇಯಸ್ಥಳದಲ್ಲಿ ಸೊಗಸು ಸೂರೆಗೊಳ್ಳಬಹು ದೆಂದು ಕಾಣುತ್ತದೆ ರಾಜತಂತ್ರದ ಪಕ್ಷಪಾತಿಯಾದ ನನಗೂ ಯುವರಾಜರ ಈ ನಡತೆಯಿಂದ ಅವರ ಬಗ್ಗೆ ಹೇಸಿಕೆ ಹುಟ್ಟಿದೆ.”

ಬರ್ನಾರ್ಡ್ ಈ ಸುದ್ದಿಯನ್ನು ಕೇಳಿ, ತತ್‌ಕ್ಷಣವೇ ಅರಮನೆಗೆ ಹೋಗಿ ರಾಜನಿಗರುಹಿದ. ರಾಜನ ಪ್ರಕೃತಿಯಾಗ ಅತ್ಯಂತ ರುಕ್ಷನಾಗಿತ್ತು.

ಜಾನನ ಸುದ್ದಿಯೇ ನನಗೆ ಗೊತ್ತಿಲ್ಲ. ಅವನು ಏಕೆ ಓಡಿಹೋದ ನೆಂಬುದೂ ಗೊತ್ತಿಲ್ಲ. ಹೋದವ ಇನ್ನು ತಿರುಗಿ ಬರುವುದೇ ಬೇಡ. ನಾನಿನ್ನು ಆ ಕುಲಾಂಗಾರನ ಮೋರೆಯನ್ನೇ ನೋಡಲಾರೆ” ಎಂದ.

“ ಪಕ್ಕನೆ ಅವರು ಹೀಗೆ ರಾಜ್ಯತ್ಯಾಗ ಮಾಡಲಿಕ್ಕೇನು ಕಾರಣವೆಂದು ತಮ್ಮ ಮುಂದೆ ಹೇಳಿಯೇ ಇಲ್ಲವೆ ?” ಎಂದು ಕೇಳಿದ ಬರ್ನಾರ್ಡ್.

“ ಇಲ್ಲ. ಇಲ್ಲಿ ನಿಲಾಸಕ್ಕೆ ಎಡೆಯಿಲ್ಲವೆಂದು ಹೋಗಿದ್ದಾನು. ಪ್ರಾಣ ಭಯದಿಂದ ಓಡಿದನೋ ಹೇಗೋ ಹೇಳಲಾರೆ. ಆ ದೈವಗೇಡಿಯ ವ್ಯವ ಹಾರದಿಂದ ನಾನು ಮರ್ಮಾಹತನಾಗಿದ್ದೇನೆ. ಅವನಿಷ್ಟು ಅಂಜುಬುರುಕ ನೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ.”

“ ಯುವರಾಜರಲ್ಲಿ ಬೇರೆ ಯಾವ ದೋಷಗಳೇ ಇದ್ದಿರಲಿ, ಅವರು ಹೇಡಿಯೆಂದು ನನಗೂ ಎನಿಸಿರಲಿಲ್ಲ; ಈಗಲೂ ಎನಿಸಿಲ್ಲ. ಯಾವುದೋ

ಗುಪ್ತ ಕಾರಸ್ಥಾನಕ್ಕಾಗಿ ಪ್ಯಾರಿಸಿಗೆ ಹೋಗಿರಬೇಕೆಂದೇ ನನ್ನ ನಂಬುಗೆ. ಆ ಕಾರಸ್ಥಾನವೇನೆಂದು ಗೊತ್ತಾಗಿದ್ದರೆ ಚೆನ್ನಾಗಿತ್ತು.'' ಎಂದ ಬರ್ನಾರ್ಡ್.

ಬರ್ನಾರ್ಡ್ ರಾಜನನ್ನು ಕಾಣಿಸಿಕೊಂಡ ತರುವಾಯ, ಕೆಲನಿಮಿಷಗಳಲ್ಲಿಯೆ ಜರ್ಮನ್ ರಾಯಭಾರಿ ತನ್ನ ಶೀಘ್ರಗಾಮಿ ಮೋಟರನ್ನು ರೆಂಪ್ಳ್ಗಡಿಸುತ್ತ ಅರಮನೆಗೆ ಬಂದ.

'' ಮಹಾರಾಜ, ಯುವರಾಜರ ಆಕಸ್ಮಿಕ ಅಂತರ್ಧಾನಕ್ಕೆ ಕಾರಣ ವೇನೋ ತಿಳಿಯದ ಅವರು ಪ್ಯಾರಿಸಿಗೆ ಹೋಗಿದ್ದಾರೆಂಬುದು ಸತ್ಯವೆ ? ಅದಕ್ಕೇನಾದರೂ ರಾಜಕೀಯ ಉದ್ದೇಶವಿದೆಯೆ ? '' ಜರ್ಮನ್ ರಾಯಭಾರಿ ಪ್ರಿನ್ಸ್ ಸುಯೋಸ್ ರಾಜನನ್ನು ವಿಚಾರಿಸಿದಿರಿ.

ರಾಜನು ಹತಾಶಭಾವದಿಂದ ಉತ್ತರವಿತ್ತ: '' ಅವನು ನನ್ನ ಸೋದರ ಪುತ್ರನೇನೋ ನಿಜ. ಆದರೆ ಅವನ ಸಮಾಚಾರ ನನಗಿಂತ ನಿಮಗೇ ಹೆಚ್ಚಾಗಿ ತಿಳಿದಿರುತ್ತದೆ. ನಿನ್ನೆ ರಾತ್ರಿ ನನಗೆ ಭೆಟ್ಟಿಯಾಗಿದ್ದ. ಎಲ್ಲಿಗಾದರೂ ಹೋಗುವೆನೆಂದೇನೂ ಹೇಳಲಿಲ್ಲ ನನ್ನೊಡನೆ ಯೋಚಿಸದೆಯೇ ಅವನು ಹಠಾತ್ ಹೋಗಿದ್ದಾನೆಂದ ಬಳಿಕ, ರಾಜಕೀಯ ತಂತ್ರಕ್ಕಾಗಿ ಹೋಗಿದ್ದಾನೆಂದು ತೋರುವುದಿಲ್ಲ. ನಮ್ಮ ದೇಶದ ರಾಜಕೀಯ ವಾತಾವರಣದಲ್ಲಿ ಮೋಡಗಳು ಕಗ್ಗವಿದಿದ್ದರೂ ರಾಜಕುಟುಂಬಕ್ಕೆ ಪ್ರಾಣಸಂಕಟವೊದಗುವ ಸಂಭವ ತುಂಬ ಇದ್ದರೂ, ನಮ್ಮನಿಮ್ಮ ಒಡಂಬಡಿಕೆಯಂತೆ ಕೆಲಸವಾದರೆ ಶೀಘ್ರವೆ ಕುತ್ತ ದೂರಾಗುವುದೆಂದು ತಿಳಿದೂ ತಿಳಿದೂ ಆವನೇಕೆ ಓಡಿ ಹೋದನೋ ಹೇಗೆ ತಿಳಿಯಬೇಕು ? ಅವನು ಓಡಿಹೋದದ್ದರಿಂದ ನಾನೊಳ್ಳೇ ಸೀಕಲಾಟದಲ್ಲಿ ಬಿದ್ದಿದ್ದೇನೆ.''

'' ತಾವು ಬೆದರುವ ಕಾರಣವಿಲ್ಲ. ನಮ್ಮ ಸಂಕಲ್ಪದಂತೆ ಎಲ್ಲ ಕಾರ್ಯಗಳೂ ನೆರವೇರುವವು, ವಿದ್ರೋಹಿಗಳಿಗೆ ತಕ್ಕ ಶಾಸನವಾಗುವುದು. ಆದರೆ ಈ ಪ್ರಸಂಗದಲ್ಲಿ ಯುವರಾಜರು ಓಡಿ ಹೋದದ್ದು ಮಾತ್ರ ವಿಹಿತವಾಗಲಿಲ್ಲ. ನಾವಿರಲಿಕ್ಕೂ ತಮಗೆ ಭಯವೆ ? '' ಎಂದ ಪ್ರಿನ್ಸ್ ಸುಯೋಸ್.

'' ಆದರೆ ನನಗೆ ಅಷ್ಟೊಂದು ಧೈರ್ಯವಾಗಲೊಲ್ಲದು. ತಮ್ಮ ಸೈನ್ಯ ನಾಲ್ಕಾರು ಗಂಟೆಗಳಲ್ಲಿ ರಾಜಧಾನಿಯನ್ನು ತಲುಪಲಾರದು. ಅದು ಬರುವುದ

ರೊಳಗೇ ವಿದ್ರೋಹಿಗಳು ಅರಮನೆಯನ್ನು ಮುತ್ತಿ ನನ್ನನ್ನು ಕೊಂದುಬಿಟ್ಟರೆ, ಆಮೇಲೆ ತಮ್ಮ ಸೇನೆ ಬಂದು ಏನು ಪ್ರಯೋಜನ ?”

“ನಾನು ಸರಿಯಾಗಿ ವ್ಯವಸ್ಥೆ ಮಾಡಿದ್ದೇನೆ ; ನಮ್ಮ ಸೇನೆ ಹೊತ್ತಿಗೆ ಸರಿಯಾಗಿ ರಾಜಧಾನಿಗೆ ಬಂದು ಒದಗುವುದು, ಸಂದೇಹವೇ ಬೇಡ. ಈ ಹೊತ್ತನಲ್ಲಿ ಯುವರಾಜರು ಪ್ಯಾರಿಸಿಗೆ ಹೋಗದಿದ್ದರೇ ನೆಟ್ಟಗಿತ್ತು. ಇಂಗ್ಲಂಡಿನ ರಾಜರಾಣಿಯರು ಗುಟ್ಟಾಗಿ ಪ್ಯಾರಿಸಿಗೆ ಹೋಗಿದ್ದಾರೆಂದು ತಾವು ಓದಿಲ್ಲವೇ ಪತ್ರಿಕೆಯಲ್ಲಿ ? ನಿನ್ನೆ ನಸುಕಿನಲ್ಲಿ ಅವರು ಹಠಾತ್ ಲಂಡನಿನಿಂದ ಹೊರಟರಂತೆ. ಆ ಸುದ್ದಿ ಮೊದಲು ಯಾರಿಗೂ ಗೊತ್ತಿರಲಿಲ್ಲ”

“ನಾನು ಪತ್ರಿಕೆ ಓದಿಲ್ಲ. ನಿಮ್ಮ ಅಭಿಪ್ರಾಯವೇನು ? ಇಂಗ್ಲೆಂಡಿನ ರಾಜರ ಪ್ಯಾರಿಸ್ ಗಮನಕ್ಕೂ ಜಾನನ ಪಲಾಯನಕ್ಕೂ ಸಂಬಂಧವಿದೆ ಎನ್ನುವಿರಾ ?”

“ಆ ಬಗ್ಗೆ ನನಗೆ ಸಂದೇಹವೇ ಇಲ್ಲ ಆದರೆ ನಮ್ಮ ರಾಜರು ಈ ಸುದ್ದಿಯಿಂದ ವಿಚಲಿತರಾದಾರೆಂದು ನನಗೆನಿಸುವುದಿಲ್ಲ.”

“ನಮ್ಮ ಜಾನನನ್ನು ನನ್ನಂತೆ ನಿಮ್ಮ ರಾಜರು ಸರಿಯಾಗಿ ತಿಳಿದುಕೊಂಡಿದ್ದರೆ ಅವನ ಪ್ಯಾರಿಸ್ ಗಮನದಿಂದ ಅವರು ಕೊಂಚವೂ ಉತ್ಕಂಠಿತರಾಗಲಾರರು.”

“ಯುವರಾಜರು ಹೊರಟುಹೋಗುವ ಮೊದಲು ಇಂಗ್ಲಂಡ್ ರಾಯಭಾರಿಯ ಭೆಟ್ಟಿ ಅವರಿಗಾಗಿತ್ತೆ ?” ಜರ್ಮನ್ ರಾಯಭಾರಿ ಕೇಳಿದ.

“ಸರ್ ಚಾರ್ಲಸ್ ನನ್ನನ್ನು ಕಾಣಲೆಂದು ಎರಡು ದಿನ ಅರಮನೆಗೆ ಬಂದಿದ್ದರು. ಅವರ ಉದ್ದೇಶವನ್ನು ಅರಿತುಕೊಂಡು ನಾನು ಮೊದಲೇ ಎಚ್ಚರಗೊಂಡಿದ್ದೆ. ಅವರನ್ನು ನನ್ನ ಹತ್ತಿರವೇ ಬರಗೊಡಲಿಲ್ಲ.” ರಾಜನೆಂದ.

“ಚೆನ್ನಾಗಿ ಮಾಡಿದಿರಿ. ಅವರಿಗೆ ದರ್ಶನವಿತ್ತಿದ್ದರೆ ನಮ್ಮ ಸಂಕಲ್ಪಕ್ಕೆ ಅಡ್ಡಿಯುಂಟಾಗುತ್ತಿತ್ತು. ನಾವು ತಮ್ಮ ನೆರೆಯವರು, ಹಿತಚಿಂತಕರು. ನೆರೆಮನೆಯವರಿಗೆ ವಿಪತ್ತಿನಲ್ಲಿ ಸಹಾಯಮಾಡುವುದು ನಮ್ಮ ಧರ್ಮವೆ. ಈ ವ್ಯಾಪಾರದಿಂದ ಯುರೋಪಿನ ಯಾವ ರಾಜ್ಯವಾದರೂ ಧೈರ್ಯಚ್ಯುತವಾದರೆ ಅದನ್ನು ಯಾರೂ ಸಮರ್ಥಿಸಲಾರರು. ಅದು ಹಿಂಸಕರ ಕೆಲಸ, ಹಿಂಸೆಯೇ ಇಂಥ ಆಪತ್ತಿಗೆ ಕಾರಣ. ಆದರೆ ನಾವು ಯಾರಿಗೂ ಹೆದರುವುದಿಲ್ಲ.

ಫ್ರೆಂಚರು ಕದನಕ್ಕೆ ನಿಂತರೆ ನಾವು ಹಿಂಜರಿಯುವೆವೆ? ಉಪಸಾಗರದ ಮತ್ತು ಉತ್ತರಸಾಗರದ ಹಡಗುಪಡೆಗಳು ಒಂದಾಗಿವೆಯೆಂದು ಸುದ್ದಿ ಪ್ರಕಟವಾಗಿದೆ; ಫ್ರಾನ್ಸಿನ ಸೈನ್ಯ ಸೀಮಾಂತಕ್ಕೆ ಸಾಗುತ್ತಿದೆಯೆಂದೂ ವದಂತಿಯಿದೆ ಇದರ ನಿಜವಾದ ಉದ್ದೇಶವೇನೆಂದು ಯಾರು ಹೇಳಬಲ್ಲರು? ತಮ್ಮ ತಮ್ಮ ಗಡಿಯಲ್ಲಿ ತಾವು ತಾವು ಬೇಕಾದ್ದು ಮಾಡಬಹುದು. ಅದಕ್ಕೆ ಯಾರೂ ಆಕ್ಷೇಪವೆತ್ತಲು ಬರಲಾರದು. ಆದರೆ ಇನ್ನೊಂದು ಪ್ರಶ್ನೆ–ತಮ್ಮ ಸೋದರರ ಮಗನಿಗೂ ಸರ್ ಚಾರ್ಲ್ಸರಿಗೂ ಗೆಳೆತನವುಂಟೆ ?"

"ಅಷ್ಟು ಗೊತ್ತಿಲ್ಲ. ಅವರಿಬ್ಬರಲ್ಲಿಯೂ ಗೆಳೆತನವಿಲ್ಲವೆಂದು ತೋರುತ್ತದೆ. ಜಾನ್ ಸ್ವಚ್ಛಂದ ಮನುಷ್ಯ, ಅಸ್ಥಿರಮತಿ; ಸರ್ ಚಾರ್ಲ್ಸರೋ ಒಳ್ಳೇ ಸುಶೀಲರು. ಅವರು ಈ ದುಃಶೀಲನೊಡನೆ ಸೇರುವ ಸಂಭವವಿಲ್ಲ ನಾನಂತೂ ಅವರಿಬ್ಬರೂ ಒಟ್ಟಿಗಿದ್ದದ್ದನ್ನು ಎಂದೂ ನೋಡಿಲ್ಲ."

ಜರ್ಮನ್ ರಾಯಭಾರಿ ಕಿಂಚಿತ್ ಉತ್ಕಂಠಿತನಾದ. "ತಾವು ಹೇಳುವುದು ಸತ್ಯವಿದ್ದೀತು ಆದರೆ ಮೊನ್ನೆ ಸರ್ ಚಾರ್ಲ್ಸರು ಯುವರಾಜರೊಡನೆ ಅವರ ಮೋಟಾರಿನಲ್ಲಿಯೆ ತಿರುಗಾಡುತ್ತಿದ್ದರೆಂದು ಕೇಳಿದ್ದೇನೆ. ಅದನ್ನು ಬಹಳ ಜನರು ನೋಡಿದ್ದರಂತೆ." ಎಂದ

ರಾಜನು ಗಂಭೀರನಾಗಿ ಉತ್ತರವಿತ್ತ : "ಪ್ರಿನ್ಸ್ ಇಂಥ ಸಾಮಾನ್ಯ ವಿಷಯಕ್ಕಾಗಿ ತಲೆ ಕೆಡಿಸಿಕೊಳ್ಳಬೇಡಿರಿ ನಮ್ಮ ಹುಡುಗ ಶುದ್ಧ ಎರಡು ಕಾಲಿನ ಕತ್ತೆ ಬ್ರಹ್ಮ ಅವನಿಗೊಂದು ಬಾಲ ಹಚ್ಚುವುದಕ್ಕೆ ಮರೆದ್ದಾನೆ. ಅಷ್ಟೆ ಆವನು ಯಾರೊಡನೆಯೂ ರಾಜಕಾರಣದ ಮಾತನಾಡಿಯಾನೆಂದು ಕನಸಿನಲ್ಲಿಯೂ ಎನಿಸುವಂತಿಲ್ಲ. ಅವನಂಥ ವಿಲಾಸಲೋಲುಪ, ದುರಾಚಾರಿ ಎಲ್ಲಿಯೂ ಇಲ್ಲ. ಅವನು ನೋಡಿದ–ಈಗ ಇಲ್ಲಿ ದೊಡ್ಡ ಗೊಂದಲವೆದ್ದಿದೆ, ತನ್ನ ವಿಲಾಸವಿನೋದಕ್ಕೆ ತೊಂದರೆ; ಎಂತಲೆ ಗಾಳಿ ಬದಲಿಸಲು ಪ್ಯಾರಿಸಿಗೆ ಹೋಗಿದ್ದಾನೆ. ಅಲ್ಲಿ ಅವನು ಸೊಗಸು ಸೂರೆಗೊಳ್ಳುತ್ತಿದ್ದಾನೆ. ರಾಜನೀತಿಯ ವಿಚಾರಕ್ಕೆ ಅವನ ಮನಸಿನಲ್ಲಿ ಎಡೆ ಸಿಕ್ಕೀತೆಂದು ಭಾವಿಸಲೇ ಬೇಡಿರಿ."

"ಸರಿ. ಸಂತೋಷ."

* * * *

ಅಂದೇ ಅಪರಾಹ್ನದಲ್ಲಿ ಬ್ಯಾರನ್ ಬರ್ನಾರ್ಡ್ ಮ್ಯಾಡಂ ಸೇಯರ್ಸಳ ಭೆಟ್ಟಿಗೆ ಹೋದ. ಪಕ್ಕನೆ ಅವನೇಕೆ ಬಂದನೆಂದು ಆಕೆಗೆ ಗೊತ್ತಾಗಲಿಲ್ಲ. ಆದರೂ ಅವಳು ಶಿಷ್ಟಾಚಾರದಂತೆ ಅವನನ್ನು ಬರಮಾಡಿಕೊಂಡಳು. ಅವ ಳೊಡನೆ ನಾಲ್ಕು ಮಾತುಕತೆಯಾಡಿ ಬ್ಯಾರನ್ ಗ್ರೇಸಳ ಪಕ್ಕದಲ್ಲಿ ಹೋಗಿ ಕುಳಿತ. ಏನೋ ವಿಷಾದ ಅವಳ ಮುಖವನ್ನು ಬಾಡಿಸಿತ್ತು.

ಹಾಗೆ ಮಾತನಾಡುತ್ತ ಬರ್ನಾರ್ಡ್ ಅವಳಿಗೆಂದ: "ಒಂದೆರಡು ಕಾರ್ಯಗಳನ್ನು ನೋಡಿ ಮನುಷ್ಯನನ್ನು ಗುರುತಿಸುವುದು ಕಠಿನ. ಅಂದು ರಾತ್ರಿ ಯುವರಾಜರ ಶೌರ್ಯಸಾಹಸಗಳನ್ನು ಕಂಡು ನಾವೆಲ್ಲ ಮುಗ್ಧರಾಗಿ ದ್ದೆವು. ಆದರೀಗ ಅವರು ಹೀಗೆ ಒಮ್ಮೆಲೆ ಅವಿಚಾರಿಗಳಂತೆ ವರ್ತಿಸಿದ್ದನ್ನು ಕಂಡರೆ ನಿಜವಾಗಿಯೂ ಆಶ್ಚರ್ಯವಾಗುತ್ತದೆ."

ಗ್ರೇಸ್ ಮುಖವೆತ್ತಿ ನೋಡಿ, "ತಮ್ಮ ಅಭಿಪ್ರಾಯವೂ ಯುವ ರಾಜರು ಪ್ಯಾರಿಸಿಗೆ ಓಡಿಹೋಗಿದ್ದಾರೆಂದೇ?" ಎಂದು ಕೇಳಿದಳು.

"ಹಾಗಲ್ಲದೆ ಮತ್ತೇನು ತಿಳಿದುಕೊಳ್ಳಬೇಕು? ಅವರ ಆಕಸ್ಮಿಕ ಅಂತರ್ಧಾನಕ್ಕೆ ಬೇರೆ ಕಾರಣವೇ ಕಾಣುವುದಿಲ್ಲ. ಇನ್ನೆರಡು ದಿನಗಳಲ್ಲಿ ರಾಜ್ಯಕ್ಕೆ ಸಂಕಟವೊದಗುವುದೆಂಬುದನ್ನು ಅರಿತೇ ಯಾರಿಗೂ ತಿಳಿಯ ದಂತೆ ರಾಜ್ಯತ್ಯಾಗ ಮಾಡಿದ್ದಾರೆ. ಇದಕ್ಕೆ ಪ್ರಾಣಭಯವೆನ್ನದೆ ಏನೆನ್ನಬೇಕು?"

ಗ್ರೇಸ್ ಪೂರ್ಣದೃಷ್ಟಿಯಿಂದ ನೋಡುತ್ತ ಕೊಂಚ ಹೊತ್ತು ಮೌನ ವಾಗಿದ್ದು ನುಡಿದಳು: "ನಾನಿಲ್ಲಿಗೆ ಹೊಸಬಳು. ಇಲ್ಲಿಯ ರಾಜಕೀಯ ಆಂದೋಲನದ ವಿಷಯವೇ ಯಾವುದೂ ಗೊತ್ತಿಲ್ಲ. ಯುವರಾಜರು ಹೆದರಿ ಕೊಂಡು ಓಡಿಹೋಗಿದ್ದಾರೆಂದು ನಾನೇನು ಬಲ್ಲೆ? ಆದರೆ ಬೇರೆ ಉದ್ದೇಶ ವಿರುವುದು ಅಸಂಭವವೇನು?"

"ಯುವರಾಜರು ತಮ್ಮ ಗಮನದ ಉದ್ದೇಶವನ್ನು ನಿಮ್ಮ ಮುಂದೆ ಹೇಳಿ ಹೋಗಿಲ್ಲವೆ? ನಿಮ್ಮಲ್ಲಿ ಅವರಿಗೆ ಬಹಳ ವಿಶ್ವಾಸ. ಅವರು ಹೋಗುವ ಮುಂದೆ ನಿಮಗೆ ಹೇಳದೆ ಹೋಗಿದ್ದಾರೆಂದು ಎನಿಸುವುದಿಲ್ಲ."

"ಇಲ್ಲ ರಾಯರೆ, ತಾವು ಹಾಗೆ ಭಾವಿಸುವುದು ತಪ್ಪು. ಅವರ ನನ್ನ ಗುರುತು ಹೆಚ್ಚು ದಿನದ್ದಲ್ಲ. ಹೀಗಿರಲು ಅವರು ನನ್ನೊಡನೆ ತಮ್ಮ ಮನ ದೊಳಗಿನ ಗುಟ್ಟನ್ನು ಒಡೆದು ಆಡುವರೆಂದು ತಿಳಿಯುವುದು ಅಸಂಗತ."

ಬಳಿಕ ಬರ್ನಾರ್ಡ್ ತಿರುಗಿಮುರುಗಿ ಹಲವು ಪರಿಯಿಂದ ಪ್ರಶ್ನಿಸಿದ. ಯಾವ ವಿಷಯವೂ ಹೊರಡಲಿಲ್ಲ ಕೊನೆಗೆ ನಿರುಪಾಯನಾಗಿ ವಿಷಣ್ಣ ಚಿತ್ತದಿಂದ ಹೊರಟುಹೋದ. ಯುವರಾಜನ ಆಕಸ್ಮಿಕ ಅಂತರ್ಧಾನದಿಂದ ಗ್ರೇಸಳ ಮನಸಿಗೆ ಪೆಟ್ಟುತಗಲಿದೆಯೆಂದು ಆ ಮಾತುಕತೆಯಲ್ಲಿ ಬರ್ನಾರ್ಡನಿಗೆನಿಸಿತು. ಯುವರಾಜನು ಅವಳನ್ನು ಕಂಡು ಮಾತಾಡಿ ಹೋಗಿದ್ದರೆ ಅವಳು ಖಿನ್ನಳಾಗುತ್ತಿರಲಿಲ್ಲ; ಈ ವ್ಯಾಪಾರದಿಂದ ಎಲ್ಲರಂತೆ ಗ್ರೇಸಳಿಗೂ ವಿಸ್ಮಯವಾಗಿದೆಯೆಂದು ಬರ್ನಾರ್ಡ್ ತಿಳಿದುಕೊಂಡ.

ಬರ್ನಾರ್ಡ್ ತನ್ನ ಚಾವಡಿಗೆ ಹೋಗಿ ಟೆಲಿಫೋನಿನಲ್ಲಿ ಪ್ಯಾರಿಸಿನಲ್ಲಿದ್ದ ರಿಕಾರ್ಡಿಯೊಡನೆ ಮಾತನಾಡಿದ.

"ಮಿ. ರಿಕಾರ್ಡಿ, ನನ್ನ ಮೊದಲಿನ ಸುದ್ದಿ ನಿಮಗೆ ತಲುಪಿತೆ ?"

"ತಲುಪಿತು."

"ನಮ್ಮ ಮಿತ್ರರು ಎಲ್ಲಿ ಇಳಿದಿದ್ದಾರೆ ?"

"ಹೋಟೆಲ್ ರಿಜ್ನಲ್ಲಿ. ಅರ್ಧಗಂಟೆ ಮಾತ್ರ ಅಲ್ಲಿದ್ದರು ಬಳಿಕ ಕೆಫೆ-ಡಿ-ಪ್ಯಾರಿಸ್ಗೆ ಊಟಕ್ಕೆ ಹೋದರು."

"ಹೋಟೆಲಿನಿಂದ ಯಾರಿಗಾದರೂ ಕಾಗದ ಬರೆದಿದ್ದಾರೆಯೆ ?"

"ಬರೆದಿದ್ದಾರೆ, ಇಲ್ಲಿಯ ಆಂಗ್ಲರಾಯಭಾರಿ ಭವನಕ್ಕೆ ಜಾರ್ಜ ಹ್ಯಾರಿಂಗ್ಟನ್ನರಿಗೆ"

ಕೇಳಿ ಬರ್ನಾರ್ಡ್ ಸ್ತಂಭಿತನಾದ. ಮರುಕ್ಷಣದಲ್ಲಿ ಸಾವರಿಸಿಕೊಂಡು "ಎಡ್ವರ್ಡ್ ದೊರೆ ಈಗ ಪ್ಯಾರಿಸಿಗೆ ಬಂದಿದ್ದಾರೆಯೆ ?" ಎಂದು ಕೇಳಿದ.

"ಹೂಂ."

"ನಮ್ಮ ಮಿತ್ರರ ಹಿಂದೆ ಗುಪ್ತಚಾರರು ತಿರುಗುತ್ತಾರೆಯೆ ?"

"ನಿಶ್ಚಯವಾಗಿ. ಆದರೆ, ಸುಮಾರು ಒಂದು ಗಂಟೆಯಾಯಿತು' ನಮ್ಮ ಮಿತ್ರರು ಭೋಜನಾಲಯವನ್ನು ಸೇರಿ; ಆಮೇಲೆ ಯಾವ ಹೊಸಸುದ್ದಿಯೂ ಇಲ್ಲ."

"ಹೊಸ ಸುದ್ದಿ ಬಂದೊಡನೆ ನನಗೆ ತಿಳಿಸಿರಿ. ಮರೆಯಬೇಡಿರಿ, ಈ ಸಮಾಚಾರ ಬಹಳ ಅಗತ್ಯದ್ದು."

ಫೋನಿನ ಯಂತ್ರವನ್ನು ಕೆಳಗಿರಿಸಿ ಬರ್ನಾರ್ಡ್ ತನ್ನಾಸನದಲ್ಲಿ ಕುಳಿತ. ಐದು ನಿಮಿಷ ಮಾತ್ರ ಆಗಿದ್ದೀತು; ಅದು ಮತ್ತೆ ಟ್ರಿಣ್ ಟ್ರಿಣ್ ಎಂದು ಕರೆಯಿತು. ಆತನೆದ್ದು ಯಂತ್ರವನ್ನು ಕಿವಿಗೆ ಹಿಡಿದ.

"ಯಾರು, ಬರ್ನಾರ್ಡ್‌ರೆ? ನನ್ನ ದನಿಯನ್ನು ಗುರುತಿಸುವಿರಲ್ಲವೆ?" ಆಕಡೆಯಿಂದ ಶಬ್ದ ಬಂದಿತು.

ಸ್ವರ ರೆಕಾರ್ಡಿನದಲ್ಲ. ಹಾಗಾದರೆ ತನ್ನಂಥ ಅಪರಿಚಿತನೊಡನೆ ಮಾತನಾಡುವವರು ಯಾರಿರಬಹುದೆಂದು ಬರ್ನಾರ್ಡನಿಗೆ ಕುತೂಹಲವುಂಟಾಯಿತು. ಆದರೂ "ತಾವು ಯಾರೋ ಗೊತ್ತಿಲ್ಲ; ಎಲ್ಲಿಂದ ಮಾತಾಡುತ್ತಿರುವಿರೋ ಅದೂ ಗೊತ್ತಿಲ್ಲ. ಅದನ್ನೆಲ್ಲ ತಿಳಿದುಕೊಳ್ಳುವ ಆಗ್ರಹವೂ ನನಗಿಲ್ಲ." ಎಂದ

"ನಿಮಗಿರಲಿಕ್ಕಿಲ್ಲ ಆಗತ್ಯ. ಆದರೆ ಅದನ್ನೆಲ್ಲ ತಿಳಿಸಬೇಕೆಂದು ನನಗೇ ಸ್ವಲ್ಪ ಆಗ್ರಹವುಂಟು. ಹೇಳಿಬಿಡುತ್ತೇನೆ. ನನ್ನ ಹೆಸರು ಬಜೀಲ್ಯಾಂಡಿನ ಯುವರಾಜ ಜಾನ್ ವ್ಹಲೆಂಟಾಯಿನ್. ನನ್ನ ಸುತ್ತ ನೀವೇಕೆ ಬೆನ್ನು ಹತ್ತಿರುವಿರೆಂಬುದನ್ನು ತಿಳಿದುಕೊಳ್ಳಬೇಕಾಗಿದೆ. ನನ್ನ ಹಿಂದೆ ಗುಪ್ತಚಾರ ಶನಿಗಳನ್ನು ತಿರುಗಿಸುವುದೇಕೆ?" ಬಂತು ಆ ತುದಿಯಿಂದ ಪ್ರಶ್ನೆ.

"ಸ್ವದೇಶವು ಸಂಕಟಗ್ರಸ್ತವಾಗಿರುವಾಗ ತಾವೇಕೆ ಓಡಿದಿರೆಂಬುದನ್ನು ನಾನು ತಿಳಿದುಕೊಳ್ಳಲಿಚ್ಛಿಸುತ್ತೇನೆ."

"ಯಾವಾಗ ಎಲ್ಲಿ ಬೇಕಲ್ಲಿ ನಾನು ಹೋಗಬಲ್ಲೆ. ನನ್ನ ಇಚ್ಛೆಗೆ ಯಾರ ಯಾವ ನಿಯಂತ್ರಣವೂ ಇಲ್ಲ. ನಾನು ಬಂದುದರಿಂದ ಯಾರಿಗೂ ಯಾವ ನಷ್ಟವೂ ಆಗಿಲ್ಲ. ನಾನೀಗ ಬೇರೆ ರಾಜ್ಯದಲ್ಲಿದ್ದೇನೆ. ಇಲ್ಲಿ ನನ್ನ ಬೆನ್ನಿಗೆ ಆಳುಗಳನ್ನು ಹಚ್ಚಿದುವುದು ಅತಂಕಕಾರಿ. ಇನ್ನು ಮೇಲೆ ನಿಮ್ಮ ಜನ ನನ್ನನ್ನು ಅನುಸರಿಸಿದರೆ ಅವರ ಗತಿ ನೆಟ್ಟಗಾಗಲಿಕ್ಕಿಲ್ಲ,—ಹೇಳಿರುತ್ತೇನೆ."

"ಅವನನ್ನು ಹಿಡಿಯಲಿಕ್ಕೆ ಆದರೆ ತಾನೆ? ಅವನು ಕೈಗೆ ಸಿಕ್ಕರೆ ಬೇಕಾದ್ದು ಮಾಡಬಹುದು, ನನ್ನದೇನೂ ಅಡ್ಡಿಯಿಲ್ಲ. ನಿಮ್ಮ ಹಿಂದೆ ಅಂಥ ಹೆಡ್ಡರನ್ನು ಬಿಟ್ಟಿಲ್ಲ. ನಾನು ಆದಿರಲಿ. ನನ್ನೊಂದು ಪ್ರಶ್ನೆಗೆ ಉತ್ತರ ಕೊಡುವಿರಾ?"

“ ಒಂದು ಮಾತ್ರ. ಏನದು ಪ್ರಶ್ನೆ ? ”

“ ಆಂಗ್ಲ ರಾಯಭಾರಿಯು ಚಾವಡಿಗೆ ತಾವಿಂದು ಮುಂಜಾನೆ ಬರೆದ ಕಾಗದದ ಇಂಗಿತವೇನು ? ”

“ ಅದೊಂದು ಆಮಂತ್ರಣ ಪತ್ರಿಕೆ. ”

“ ಆಮಂತ್ರಣ ಸ್ವೀಕೃತವಾಯಿತೆ ? ”

“ ನಿಶ್ಚಯವಾಗಿ. ನಿಮ್ಮ ಕಡೆಯ ಹೊಸಸುದ್ದಿಯೇನು ? ”

“ ಹೊಸದೇನೂ ಇಲ್ಲ. ತಾವು ಯಾವಾಗ ತಿರುಗಿ ಬರುವಿರಿ ? ”

“ ನಿಶ್ಚಿತಿಯಿಲ್ಲ. ”

## ೩೧

ಇಂಗ್ಲಂಡಿನ ರಾಜ್ಯನೌಕೆಯ ಕರ್ಣಧಾರನೊಡನೆ ಬರ್ಜಿಲಂಡಿನ ಯುವರಾಜ ಜಾನ್ ವ್ಹಲೆಂಟೈನನ ಪರಾಮರ್ಶೆ ನಡೆದಿತ್ತು.

“ ಯುವರಾಜ, ನನ್ನನ್ನು ಕಾಣುವುದಕ್ಕೆಂದೇ ನೀವು ಪ್ಯಾರಿಸಿಗೆ ಬಂದಿದ್ದೀರಾ ? ”

“ ತಮ್ಮನ್ನು ಮತ್ತು ಮಿ. ಕಯೋಸರನ್ನು ಕಾಣುವ ಉದ್ದೇಶದಿಂದ ಬಂದೆ. ಆ ವಿಷಯ ಮೊದಲೇ ತಮಗೆ ಅರಿವಿದ್ದುಂಟು. ಈಗಿನ ಗಂಭೀರ ಪರಿಸ್ಥಿತಿಯಲ್ಲಿ ತಮ್ಮ ನೆರವು ತೀರ ಅಗತ್ಯ. ಒಂದು ವಾರದೊಳಗೇ ಉಪಾಯ ಯೋಜನೆಯಾಗದಿದ್ದರೆ, ಜರ್ಮನಿ ನಮ್ಮ ಚಿಕ್ಕ ರಾಜ್ಯವನ್ನು ಸ್ವಾಧೀನ-ಪಡಿಸಿಕೊಳ್ಳುವುದು. ಯುರೋಪಿನಲ್ಲಿ ತಮ್ಮ ಶಕ್ತಿ ನಿಸ್ಸೀಮವಾದದ್ದು. ಯುರೋಪಿನ ಹೊರಗಿನ ರಾಜ್ಯಗಳಲ್ಲಿ ಶಕ್ತಿ ಸಾಮಂಜಸ್ಯ ರಕ್ಷಿತ-ವಾಗಿರುವುದೂ ತಮ್ಮ ಅಸಾಧಾರಣ ದೂರದೃಷ್ಟಿಯ ದ್ಯೋತಕ, ತಮ್ಮ ಶಾಂತಿಪ್ರಿಯತೆಯ ಹೆಗ್ಗುರುತು. ತಾವು ಅಲ್ಪಾವಧಿಯಲ್ಲಿ ರಾಷ್ಟ್ರೀಯ ಸಂಪದಭಿ-ವೃದ್ಧಿಯನ್ನು ಸಾಧಿಸಿದಂತೆ ಯಾರೂ ಸಾಧಿಸಿಲ್ಲ. ತಾವು ವಿಚಾರ ಮಾಡಿ ನೋಡಿರಿ. ಪ್ರಯತ್ನವಿಲ್ಲದೆ ಒಂದು ದೇಶ ಇನ್ನೊಂದು ದೇಶವನ್ನು ಹಸ್ತಗತ ಮಾಡಿಕೊಳ್ಳುವುದು,— ಅದಕ್ಕಾಗಿ ಒಂದು ಚಮಟಿಗೆ ಮದ್ದು, ಒಂದು ಫಾರ್ದಿಂಗು ಹಣ ವೆಚ್ಚ ಮಾಡುವುದಿಲ್ಲ— ಇದು ಎಷ್ಟರ ಮಟ್ಟಿಗೆ ಸಮಂಜಸವಾದೀತು ? “

ಇಂಗ್ಲಂಡಿನ ರಾಜ್ಯಸೂತ್ರಧಾರನು ವಿರಾಮಾಸನದಲ್ಲಿ ಒರಗಿಕೊಂಡು ಎಲ್ಲವನ್ನು ಮನಗೊಟ್ಟು ಕೇಳುತ್ತಿದ್ದ. ಜಾನ್ ಪಿಟರ್ಸನ ಮಾತು ಮುಗಿ-ಯೊಡನೆ ಅವನು ಎದ್ದು ಕುಳಿತು ನಿಧಾನವಾಗಿ ಮಾತನಾಡಿದ: “ ನಿಮ್ಮ ಮಾತನ್ನು ಕೇಳಿದರೆ ನಿಮಗೆ ಸಿಂಹಾಸನದ ಮೇಲೆ ಕೊಂಚವೂ ಆಶೆಯಿಲ್ಲ-ವೆಂದು ತೋರುತ್ತದೆ. ಪ್ರತಿವಾದವಿಲ್ಲದೆ ಅದನ್ನು ಬಿಟ್ಟುಕೊಡಲು ನೀವು ಸಿದ್ಧರೆಂಬಂತಿದೆ. ನಿಮ್ಮ ಅಭಿಪ್ರಾಯವೇನು ? ಗದ್ದುಗೆಯ ಅಧಿಕಾರವನ್ನು ದೃಢವಾಗಿಟ್ಟುಕೊಳ್ಳಲು ಅನ್ಯರಾಜರ ನೆರವನ್ನು ನೀವು ಕೋರುವುದಿಲ್ಲವೆ ? ನಿಮ್ಮ ದೇಶದಲ್ಲಿದ್ದ ವಿಚಾರ ಪ್ರವಾಹವನ್ನೇ ಸಮರ್ಥಿಸುವಿರಾ ? ”

“ ಹೌದು, ಸಮರ್ಥಿಸುತ್ತೇನೆ. ನಮ್ಮ ಮಾತೃಭೂಮಿಯಲ್ಲಿ ಬಹು-ಕಾಲದಿಂದ ನಡೆಯುತ್ತಲಿರುವ ಆಳಿಕೆಯ ಅತ್ಯಾಚಾರ ಯುರೋಪಿನ ಬೇರೆ ಯಾವ ದೇಶದಲ್ಲಿಯೂ ಕಂಡು ಬರುವುದಿಲ್ಲ. ನಮ್ಮ ನಾಡು ಬಂಗಾರದ ನಾಡಾಗಿರದಿದ್ದರೆ, ನಮ್ಮ ನಾಡಿಗರು ಅಸಾಧಾರಣ ಉದ್ಯಮಶೀಲರಾಗ-ದಿದ್ದರೆ, ಇಷ್ಟರೊಳಗೇ ನಾವು ಅವನತಿಯ ರಸಾತಲ ಗರ್ಭದಲ್ಲಿ ಮುಳುಗು-ತ್ತಿದ್ದೆವು. ಈಗ ನಮ್ಮ ರಾಜ್ಯದ ಪ್ರಜೆಗಳು ಪೂರಾ ಎಚ್ಚತ್ತಿದ್ದಾರೆ. ಕಳೆದ ಪಾರ್ಲಿಮೆಂಟಿನ ಚುನಾವಣೆಯ ಫಲಿತಾಂಶವನ್ನು ನೋಡಿದರೆ, ಪ್ರಜೆಗಳಿಗೆ ಏನು ಬೇಕೆಂಬುದು ಸ್ಪಷ್ಟವಾಗಿ ಕಾಣುತ್ತಿದೆ ಪ್ರಜೆಗಳ ಈ ಬೇಡಿಕೆ ಪೂರ್ಣ ಯೋಗ್ಯವೆಂದೂ ನನಗೆನಿಸುತ್ತದೆ. ರಾಜವಂಶವು ಸಿಂಹಾಸನ ಚ್ಯುತವಾದರೆ ವೈಯಕ್ತಿಕವಾಗಿ ನನಗೇನೋ ಬಹಳ ನಷ್ಟವಿದೆ. ನಾನು ರಾಜ್ಯವೈಭವವನ್ನು ಕಳೆದುಕೊಳ್ಳುವುದು ಸತ್ಯ. ಆದರೆ ನಾನು ನನ್ನ ಸ್ವಾರ್ಥದ ಸಲುವಾಗಿ ಪ್ರಜೆಗಳ ನ್ಯಾಯವಾದ ಕೋರಿಕೆಯನ್ನು ಮೆಟ್ಟಿ ತುಳಿಯಲಿಚ್ಛಿಸಲ್ಲ. ಬರ್ಜಿ ಲಂಡಿನಲ್ಲಿ ಸಾಧಾರಣ ತಂತ್ರದ ಪ್ರತಿಷ್ಠೆಯಾಗಲೆಂದೇ ಹೃತ್ಪೂರ್ವಕವಾದ ಹಾರೈಕೆ. ಆದರಿಂದ ಯುರೋಪುಖಂಡದ ಇತರ ದೇಶಗಳು ಅನೇಕ ದಿನಗಳಲ್ಲಿ ಸಾಧಿಸಿದ ಉನ್ನತಿಯನ್ನು ನಮ್ಮ ದೇಶ ಶೀಘ್ರವೇ ಸಾಧಿಸಿಕೊಳ್ಳುವುದೆಂದು ನನ್ನ ವಿಶ್ವಾಸ. ಆದರೆ ನಮ್ಮ ಕಕ್ಕ ಹುಚ್ಚರಂತೆ ದುಷ್ಟಮಾರ್ಗವನ್ನು ಹಿಡಿಯುತ್ತಿದ್ದಾನೆ. ಅದಕ್ಕೆ ತಾವು ಏನಾದರೂ ಉಪಾಯವನ್ನು ಯೋಚಿಸಿರಿ; ಈ ಹುಚ್ಚನ್ನು ಬಿಡಿಸಲು ಯುರೋಪಿನಲ್ಲಿ ತಾವು ಮಾತ್ರ ಸಮರ್ಥರು. ”

ಮಾನ್ಯ ಕಯೋಸ್ ದೂರದಲ್ಲಿ ನಿಂತು ಕೇಳುತ್ತಲಿದ್ದ. ಅವನನ್ನು-ದ್ದೇಶಿಸಿ ಬ್ರಿಟನ್ನಿನ ಆ ಮಹಾವ್ಯಕ್ತಿ, "ಮಿ. ಕಯೋಸ್, ಯುವರಾಜರು ಹೇಳಿದ್ದನ್ನು ಕೇಳಿದಿರಿ. ಇನ್ನೇನು ಉಪಾಯ ? " ಎಂದು ಕೇಳಿದ.

ಕೆಲಹೊತ್ತು ಯೋಚಿಸಿ ಕಯೋಸ್ ಉತ್ತರವಿತ್ತ : "ಮಹನಿಯರೇ, ಸದ್ಯದ ಪರಿಸ್ಥಿತಿಯಲ್ಲಿ ಯುದ್ಧವು ಅಪರಿಹಾರ್ಯವೇ ಆಗಿದ್ದರೆ ನನ್ನ ಆಕ್ಷೇಪಕ್ಕೆ ಕಾರಣವೇ ಇಲ್ಲ. ರಣಕ್ಷೇತ್ರಕ್ಕಿಳಿದರೆ ಯಾರೇನೂ ಹೆಸರಿಡ-ಲಾರರು. ಈ ಬಗ್ಗೆ ನನ್ನ ವೈಯಕ್ತಿಕ ಅಭಿಪ್ರಾಯ ಹೀಗೆ—ಫ್ರಾನ್ಸ್ ರಾಷ್ಟ್ರದ ಪ್ರತಿನಿಧಿಯೆಂದು ನಾನು ಹೇಳುತ್ತಿಲ್ಲ; ಆದರೆ ಕೆಲಗಂಟೆಗಳಲ್ಲಿಯೆ ನಮ್ಮ ಸರಕಾರದೆದುರು ನನ್ನ ಅಭಿಪ್ರಾಯವನ್ನಿಟ್ಟು, ಸರಕಾರದ ಮನ್ನಣೆಯನ್ನು ಅಗತ್ಯವಾಗಿ ಪಡೆಯಬೇಕಾದೀತು.— ನಾವು ಯಾವ ಕಾರಣದಿಂದಲೂ ಜರ್ಮನಿಯ ಒಂದು ತುಂಡು ದಂಡನ್ನು ಬರ್ಜಿಲಂಡ್ ರಾಜ್ಯದೊಳಗೆ ಕಾಲಿಡಗೊಡಲಾಗದು ನಾವು ಬರೀ ಮಾತಿನಿಂದ ಪ್ರತಿಭಟಿಸಿ ಕೈಕಟ್ಟಿ-ಕೊಂಡಿರುವುದೂ ವಿವೇಕವಲ್ಲ ತಮ್ಮ ಹಡಗುಪಡೆ ಉತ್ತರ ಸಾಗರದಲ್ಲಿ ಅಣಿಯಾಗಬೇಕು; ನಮ್ಮ ಸ್ಥಲಸೇನೆ ಬರ್ಜಿಲಂಡ್ ರಾಜ್ಯದ ದಕ್ಷಿಣ ಸೀಮೆಯಲ್ಲಿ ಸನ್ನದ್ಧವಾಗಿರಬೇಕು. ನಮ್ಮ ಅಭಿಪ್ರಾಯದಂತೆ ಕಾರ್ಯ-ವಾಗುವುದು ಅತ್ಯಗತ್ಯವೆಂದು ನನಗೆನಿಸುತ್ತದೆ. ನಾನೆಂದಿಗೂ ಬರ್ಜಿಲಂಡಿ-ನಲ್ಲಿ ಜರ್ಮನಿಯ ಕೈವಾಡವನ್ನು ಸೈರಿಸುವುದಿಲ್ಲ "

ಇಂಗ್ಲಂಡಿನ ಪ್ರತಿನಿಧಿ ಹೇಳಿದ : "ಕಯೋಸರೇ, ನನ್ನ ನಿಮ್ಮ ಅಭಿಪ್ರಾಯಗಳಲ್ಲಿ ಭೇದ ಕಾಣುವುದಿಲ್ಲ. ಯುವರಾಜರ ಬೇಡಿಕೆ ಅಸಂಗತ-ವೆಂದು ನನಗೂ ಎನಿಸುವುದಿಲ್ಲ. ಈ ವಿಷಯದಲ್ಲಿ ನನ್ನ ಪೂರ್ಣ ಸಹಾನು-ಭೂತಿಯಿದೆ. ಪ್ರತಿಯೊಂದು ಸ್ವತಂತ್ರ ರಾಜ್ಯದ ಪ್ರಜೆಗಳಿಗೂ ತಮ್ಮ ಶಾಸನಪ್ರಣಾಲಿಯ ಗುಣದೋಷಗಳನ್ನು ವಿಮರ್ಶಿಸುವ ಅಧಿಕಾರವುಂಟು ; ತಮಗೆ ಸರಿದೋರಿದ ಶಾಸನಪ್ರಣಾಲಿಯನ್ನು ಅವರು ಅನುಸರಿಬಲ್ಲರು ಎಂದು ನನ್ನ ಮತ. ಪಾರ್ಲಿಮೆಂಟಿನ ಬಹುಜನ ಸದಸ್ಯರು ಬರ್ಜಿಲಂಡಿನಲ್ಲಿ ರಾಜಶಾಸನವನ್ನು ತೊಡೆದು ಹಾಕಿ ಪ್ರಜಾಶಾಸನವನ್ನು ಸ್ಥಾಪಿಸಲು ಇಷ್ಟ ಪಟ್ಟರೆ, ಅದನ್ನು ತಡೆಯುವ ಅಧಿಕಾರ ಯಾವ ಅನ್ಯರಾಜನಿಗೂ ಇಲ್ಲ "

ಆಸನದಿಂದೇಳುತ್ತ ಜಾನ್ ಪಿಟರ್ಸ್ ನುಡಿದ: "ನಾನು ಬಂದ ಕೆಲಸ ಆದಂತಾಯಿತು. ತಮ್ಮ ಅನುಗ್ರಹದಿಂದ ನನ್ನ ಮನೋರಥ ಈಡೇರುವುದೆಂದು ನಿಶ್ಚಿಂತ ಮನಸಿನಿಂದ ಸ್ವದೇಶಕ್ಕೆ ತೆರಳುವೆ. ನನಗಿನ್ನು ಅಪ್ಪಣೆ ಕೊಡಿರಿ. ಗಾರೇ-ಡಿ-ಲುಯಿಸ್ನಲ್ಲಿ ಸ್ಪೆಶಲ್ ಟ್ರೇನು ನನಗಾಗಿ ಕಾದಿದೆ. ನಾಳೆ ನಸುಕಿನಲ್ಲಿಯೇ ನಾನು ನಮ್ಮ ರಾಜಧಾನಿಯಲ್ಲಿರಬೇಕಾಗಿದೆ."

ಆಂಗ್ಲ ಅಧಿಕಾರಿಯೆಂದ: "ನೀವು ಬರ್ಜಿಲಂಡಿಗೆ ಮರಳಿ ಹೋಗುವುದರಲ್ಲಿ ವಿಶೇಷ ಉದ್ದೇಶವೇನಾದರೂ ಉಂಟೆ? ಸದ್ಯದ ಸಂಕಟ ಪರಿಸ್ಥಿತಿಯಲ್ಲಿ ನಿಮ್ಮಂಥ ಪದಾಧಿಕಾರಿಗಳು ರಾಜಧಾನಿಯಲ್ಲಿ ಪ್ರವೇಶಿಸುವುದು ಹಿತಕರವಲ್ಲವೆಂಬುದನ್ನು ಯೋಚಿಸಿ ನೋಡಿರಿ. ನೀವು ತಿರುಗಿ ಹೋಗುವುದರಿಂದ ವಿಶೇಷ ಕಾರ್ಯವಾದೀತೆಂದೂ ಎನಿಸುವುದಿಲ್ಲ. ದೇಶತ್ಯಾಗದ ಶಿಕ್ಷೆಯನ್ನು ಸ್ವೀಕರಿಸಲು ಅಲ್ಲಿಗೆ ಹೋಗುವುದರಲ್ಲಿ ಅರ್ಥವೇನಿದೆ?"

ಜಾನ್ ಪಿಟರ್ಸ್ ಸಹಾಸ್ಯವಾಗಿ ಉತ್ತರವಿತ್ತ: "ನಮ್ಮಲ್ಲಿಯ ಹಾಗೆ ತಮ್ಮ ದೇಶದಲ್ಲಿ ರಾಜಕೀಯ ಸಂಕಟವುಂಟಾಗಿದ್ದರೆ, ತಾವು ಕೂಡ ವಿದೇಶದಲ್ಲಿ ನಿಶ್ಚಿಂತ ಚಿತ್ತರಾಗಿ ಖಂಡಿತ ಇರುತ್ತಿರಲಿಲ್ಲ. ಅನ್ಯರಿಗೆ ಗೊತ್ತಾಗದಂತೆ ನಾನು ಇಲ್ಲಿಗೆ ಬಂದಿರುವುದರಿಂದ, ಪತ್ರಿಕೆಗಳು ನನ್ನ ಅಭಿಪ್ರಾಯವನ್ನರಿಯದೆ ಎಷ್ಟೋ ಪರಿಗಳಿಂದ ನನ್ನನ್ನು ದೂರುತ್ತಿವೆ; ನಾನೆಲ್ಲೆಲ್ಲಿಯೂ ನಗೆಗೀಡಾಗಿದ್ದೇನೆ; ನಾನು ಪ್ರಾಣಭಯದಿಂದ ಓಡಿ ಬಂದಿದ್ದೇನೆಂದು ಜನರು ಹೀಯಾಳಿಸುತ್ತಿದ್ದಾರೆ. ದೇಶದಲ್ಲಿ ನನ್ನ ಹೆಸರು ಕೆಟ್ಟುಹೋಗಿದೆ. ನನ್ನ ಉದ್ದೇಶವನ್ನು ತಿಳಿದವರೂ, ಯಾರೂ ನನ್ನ ಪಕ್ಷವನ್ನು ಸಮರ್ಥಿಸುವರೆಂಬ ಆಶೆಯಿಲ್ಲ. ನನ್ನ ಅದೃಷ್ಟದ ಬಗ್ಗೆ ನಾನು ಚಿಂತಿಸದೆ ಕರ್ತವ್ಯಕ್ಕಾಗಿ ಶೀಘ್ರವೇ ಸ್ವದೇಶಕ್ಕೆ ಹೋಗಲೇ ಬೇಕು."

"ಯುವರಾಜ, ನೀವು ಹೇಳುವುದು ಯುಕ್ತವೆ. ನಿಮ್ಮ ಇಚ್ಛೆ ಈಡೇರಲೆಂದು ನನ್ನ ಹಾರೈಕೆ. ನಿಮಗೆ ವಿಪತ್ತುಂಟಾದರೆ ಇಂಗ್ಲಂಡಿನಲ್ಲಿ ಆಶ್ರಯ ಪಡೆಯಬಹುದು. ಅಲ್ಲಿ ನಿಮಗೆ ಬೇಟೆಗೆ ತುಂಬಾ ಅನುಕೂಲವುಂಟು."

"ತಮ್ಮ ಅನುಗ್ರಹ ನೆನಪಿನಲ್ಲಿರುವುದು." ಕೃತಜ್ಞತಾಸೂಚಕ ಸ್ವರದಲ್ಲಿ ಜಾನ್ ಪಿಟರ್ಸ್ ನುಡಿದ.

"ನಮ್ಮ ರಾಜ್ಯದಲ್ಲಿಯೂ ನಿಮಗೆ ಸ್ಥಳದ ಕೊರತೆಯಾಗಲಾರದು." ನಗುತ್ತ ಕಯೋಸ್ ಹೇಳಿದ.

*  *  *  *

ಈಗ ಕೆಲದಿನಗಳಿಂದ ಬರ್ಜಿಲಂಡ್ ರಾಜ್ಯದಲ್ಲಿ ಆಮೋದ ಕೂಟಗಳಿಗೆ ಭರ ಬಂದಿತ್ತು. ಜಾನ್ ಪಿಟರ್ಸ್ ರಾಜಧಾನಿಗೆ ಮರಳಿದ ದಿನವೂ ಪ್ರಾಸಾದ ದಲ್ಲಿ ಆನಂದೋತ್ಸವದ ಏರ್ಪಾಟಿತ್ತು. ನಗರದ ಅನೇಕ ಮಹಾಜನರು ಅದರಲ್ಲಿ ಸೇರಿದ್ದರು. ರಾಜನು ಜರ್ಮನ್ ರಾಯಭಾರಿ ಪ್ರಿನ್ಸ್ ಸಾಯೀಸ-ರೊಡನೆ ನಗುತ್ತ ಕೆಲೆಯುತ್ತ ಮಾತನಾಡುವುದರಲ್ಲಿ ತೊಡಗಿದ್ದ. ಅವರ ಮಾತುಕತೆಗೆ ತುದಿಮೊದಲಿರಲಿಲ್ಲ.

ಜರ್ಮನ್ ರಾಯಭಾರಿ ಬಹಳ ಹೊತ್ತು ರಾಜನೊಡನೆ ಎಡೆಬಿಡದೆ ಅಲೆದಾಡಿದ. ಕೊನೆಗೆ ಗ್ರೇಸಳೊಡನೆ ಮಾತನಾಡುತ್ತ ಅವನು ವಿರಾಮೋ-ದ್ಯಾನವನ್ನು ಪ್ರವೇಶಿಸಿದ.

"ಮಿಸ್ ಪೆನಿಸರ್, ಈ ರಾಜ್ಯಕ್ಕೆ ರಾಜಕೀಯ ಸಂಕಟಕಾಲವು ಸಮೀಪಿಸಿದೆ. ರಾಜನು ಖಂಡಿತ ಪದಚ್ಯುತನಾಗುತ್ತಾನೆ ಎಂದು ಇತರರಂತೆ ತಮಗೂ ಎನಿಸುವುದೆ?" ಎಂದು ಕೇಳಿದ ರಾಯಭಾರಿ.

"ನಾನು ಇಲ್ಲಿಗೆ ಮೊನ್ನೆ ತಾನೆ ಬಂದವಳು. ಸಂಕಟ ಎಂಥದು, ಎಷ್ಟರ ಮಟ್ಟಿನದು ಎಂಬ ಕಲ್ಪನೆಯೇ ನನಗಿಲ್ಲ." ಎಂದು ನುಡಿದಳು ಗ್ರೇಸ್.

"ತಾವು ಈ ದೇಶದವರಲ್ಲವೆ?"

"ನನ್ನ ತಾಯಿ ಈ ದೇಶದ ಹೆಣ್ಮಗಳು; ನಾನಲ್ಲ. ನನ್ನ ಹೆಚ್ಚಿನ ಜೀವನ ಇಂಗ್ಲಂಡ್-ಅಮೆರಿಕೆಗಳಲ್ಲಿಯೆ ಕಳೆದಿದೆ. ಈ ದೇಶದ ವಹಿವಾಟು ಇಲ್ಲ."

"ಯುವರಾಜರಿಗೂ ತಮಗೂ ಗುರುತುಂಟು; ಅವರು ಅಕಸ್ಮಾತ್ ಓಡಿಹೋದುದರಿಂದ ಜನರು ವಿಸ್ಮಯಗೊಂಡಿದ್ದಾರೆ."

"ಯುವರಾಜರ ಯಾವ ಕೆಲಸವನ್ನು ಕಂಡು?"

"ಓಡಿಹೋದದ್ದನ್ನು ಕಂಡೇ. ಆದರೆ ಅವರು ಮತ್ತೆ ಬರುತ್ತಾರೆಂದು ಹಲಕೆಲವರ ಗ್ರಹಿಕೆ ತಮ್ಮ ಗ್ರಹಿಕೆಯೂ ಹಾಗೆಯೆ ಉಂಟೇನು?"

ಜರ್ಮನ್ ರಾಯಭಾರಿ ಯಾವುದೋ ಗುಪ್ತ ಉದ್ದೇಶದಿಂದ ಹೀಗೆಲ್ಲ ವಿಚಾರಿಸುತ್ತಿದ್ದಾನೆಂದು ಗ್ರೇಸಳಿಗೆ ತಟ್ಟನೆ ಹೊಳೆಯಿತು. ಅವಳ ಮನಸು ಮುನಿಸುಗೊಂಡಿತು ಆದನ್ನು ತೋರಗೊಡದೆ ಅವಳು ಮಾತನಾಡಿದಳು: “ ಮಹಾಶಯರೇ, ಯುವರಾಜರೊಂದಿಗೆ ನನ್ನ ಸಂಬಂಧ ತೀರ . ಸಾಮಾನ್ಯ ಅವರು ರಾಜ್ಯ ಬಿಟ್ಟು ಹೋದದ್ದೇಕೆ, ಎಲ್ಲಿಗೆ, ಮತ್ತೆ ಬರುತ್ತಾರೋ ಇಲ್ಲವೋ ಇತ್ಯಾದಿ ಯಾವುದೂ ನನಗೆ ತಿಳಿಯದು ಅವರು ನನ್ನೆದುರು ಈ ಬಗ್ಗೆ ಏನನ್ನೂ ಹೇಳಿಲ್ಲ. ಅವರ ವಿಷಯವಾಗಿ ಯೋಚಿಸುವುದು ಅಲ್ಲದ ಸಲ್ಲದ ಒಣ ಉಸಾಬರಿಯೆಂದೇ ನನ್ನ ಅಭಿಪ್ರಾಯ. ವರ್ತಮಾನ ಪರಿಸ್ಥಿತಿಯಲ್ಲಿ ತಮಗೆ ಯಾವುದು ಯೋಗ್ಯವೆಂದು ಕಾಣುವುದೋ ಅದನ್ನೇ ಅವರು ಮಾಡುವರೆಂದು ಮಾತ್ರ ಹೇಳಬಹುದು. ಮೊನ್ನೆ ವಿಪ್ಲವಕಾರಿಗಳು ಅರಮನೆಯನ್ನು ಮುತ್ತಿದಾಗ ಯುವರಾಜರು ತೋರಿದ ಧೈರ್ಯ ಶೌರ್ಯಗಳನ್ನು ಕಂಡವರೇ, ಅವರು ಪ್ರಾಣಭಯದಿಂದ ಓಡಿಹೋಗುವ ಹೇಡಿಗಳಲ್ಲವೆಂದು ಬಲ್ಲರು ”

ರಾಯಭಾರಿ ತಲೆಯನ್ನು ತೂಗುತ್ತ ನುಡಿದ: “ ಅದು ನಿಜ. ಯುವ ರಾಜರು ಹೇಡಿಯಲ್ಲ. ನಾನೆನ್ನುವದಿಷ್ಟೆ— ಅವರು ಆಮರಣ ರಾಜತ್ಯಾಗ ಮಾಡಿದ್ದರೆ ಅವರೊಳ್ಳೇ ಚತುರರೆಂದು ಒಪ್ಪಲೇಬೇಕು. ಇಲ್ಲಿಯ ಗಲಭೆಯಲ್ಲಿ ತಲೆ ಕಳೆದುಕೊಳ್ಳುವುದಕ್ಕಿಂತ, ಪ್ಯಾರಿಸಿನಲ್ಲಿ ಸೊಗಸನ್ನು ಸೂರೆಗೊಂಡರೆ ಆಯುಷ್ಯದ ಸದ್ವಿನಿಯೋಗವಾಗುವುದು, ತಮ್ಮ ಮನಸಿಗೂ ಆರಾಮವಿರುವುದು— ಎಂದರೆ ರಾಜ್ಯದಲ್ಲಿ ಪ್ರಜೆಗಳ ಅಭೀಷ್ಟ ಪೂರ್ಣವಾಗುವುದು— ಎಂದವರು ಭಾವಿಸಿರಬಹುದು. ಆದರೆ ನಾನಿದನ್ನು ನಂಬುವುದಿಲ್ಲ ”

“ ತಮ್ಮ ಅಭಿಪ್ರಾಯವೇನು ? ಆಯುಧ ಬಲದಿಂದ ಪ್ರಜೆಗಳನ್ನು ಹತ್ತಿಕ್ಕಲಾಗುವುದೆ ? ” ಎಂದು ಗ್ರೇಸ್ ಪ್ರಶ್ನಿಸಿದಳು.

“ ಈ ರಾಜ್ಯದ ಚಿಕ್ಕ ದಂಡು ವಿದ್ರೋಹಿ ಪ್ರಜೆಗಳನ್ನು ಹತೋಟಿಗೆ ತಂದೀತೆಂದು ಎನಿಸುವುದಿಲ್ಲ ಆದರೆ ಆದರಿಂದ ನಿರಾಶರಾಗುವ ಕಾರಣವಿಲ್ಲ. ರಾಜನ ನೆರೆಹೊರೆಯಲ್ಲಿ ಶಕ್ತಿಶಾಲಿಗಳಾದ ಮಿತ್ರರಿದ್ದಾರೆ. ಈ ಹೊತ್ತಿನಲ್ಲಿ ಅವರು ರಾಜನನ್ನು ಮರೆಯಲಾರರು. ವಿಪತ್ತಿನಲ್ಲಿ ಸಹಾಯಮಾಡುವುದು ಗೆಳೆಯರ ಕರ್ತವ್ಯ. ”

"ರಾಜನೀತಿಯಲ್ಲಿ ನನಗೆ ಗತಿಯೇ ಇಲ್ಲ. ತಿಳಿಯುತ್ತಿದ್ದರೆ ಈ ಆಲೋಚನೆಯಲ್ಲಿ ನನಗೆ ಆನಂದವೆನಿಸಬಹುದಿತ್ತು. ರಾಜನೀತಿಯಲ್ಲಿ ಜ್ಞಾನವಿಲ್ಲದ್ದರಿಂದ ತಮ್ಮ ಮಾತಿನಲ್ಲಿ ಸೊಗಸೆನಿಸುವ ಬದಲು, ನನಗೆ ನಿದ್ದೆ ಬರುತ್ತಿದೆ."

ಇನ್ನು ಮುಂಪೆ ಈ ವಿಷಯವನ್ನು ಆಲೋಚಿಸಲು ಗ್ರೇಸಳಿಗೆ ಉತ್ಸಾಹವಿಲ್ಲವೆಂದು ಜರ್ಮನ್ ರಾಯಭಾರಿ ಅರಿತ. ಮಾತನ್ನು ಮುಗಿಸಿ ಅವರಿಬ್ಬರೂ ಉದ್ಯಾನದಿಂದ ಸಮಾರಂಭ ಶಾಲೆಗೆ ಮರಳಿದರು. ಬಲ್ ರೂಮಿನ ಬಾಗಿಲನ್ನು ಸಮೀಪಿಸುತ್ತಲೇ, ಸ್ವಲ್ಪ ದೂರದಲ್ಲಿ ಜಾನ್ ಪಿಟರ್ಸ ನನ್ನು ಕಂಡು ಇಬ್ಬರೂ ಬೆರಗಾದರು. ಅವನಾಗ ಯೋಧವೇಷದಲ್ಲಿದ್ದ. ಅವನ ಮುಖ ಪ್ರಫುಲ್ಲ; ಕಣ್ಣುಗಳು ಅಪೂರ್ವ ದೀಪ್ತಿಮಯ ; ಅವನ ಭಾವ ಭಂಗಿಯಲ್ಲಿ ಕೊಂಚವೂ ಭಯದ ಚಿಹ್ನವಿಲ್ಲ.

೩೨

ಯಾವ ರಾಜನೈತಿಕ ಸಮಸ್ಯೆಯ ಮರ್ಮವನ್ನೂ ಸಹಜವಾಗಿ ಅರಿತುಕೊಳ್ಳಬಲ್ಲ ಚತುರ ಜರ್ಮನ್ ರಾಯಭಾರಿಯೂ ಜಾನ್ ಪಿಟರ್ಸ್ ಒಮ್ಮೆಲೆ ಆವಿರ್ಭವಿಸಿದುದನ್ನು ಕಂಡು ಸ್ತಂಭಿತನಾದ. ಅವನು ಎವೆಯಿಕ್ಕದೆ ಜಾನ್ ಪಿಟರ್ಸನನ್ನು ನೋಡತೊಡಗಿದ. ಅವನನ್ನು ಕಂಡು ಗ್ರೇಸಳ ಮುಖಭಾವವೂ ಪರಿವರ್ತಿತವಾಯಿತು. ಅವಳ ಮುಖ ಹಠಾತ್ ಉಜ್ವಲವಾಯಿತು. ವೇದನೆ ತುಂಬಿದ ವಿಷಣ್ಣಭಾವ ಮಾಯವಾಯಿತು. ಅವಳಲ್ಲಿಯ ಈ ಪರಿವರ್ತನೆಯನ್ನು ಜಾನ್ ಪಿಟರ್ಸ್ ಲಕ್ಷಿಸಿದ. ಮಿಕ್ಕವರಿಗೆ ಅದು ಗೊತ್ತಾಗಲಿಲ್ಲ.

ಜಾನ್ ಪಿಟರ್ಸ್ ಗ್ರೇಸಳ ಕೈಹಿಡಿದು ಸ್ನೇಹಪೂರ್ವಕವಾಗಿ ಮಾತನಾಡಿದ: "ಹೇಗೆ, ಸೌಖ್ಯತಾನೆ?" ಜರ್ಮನ್ ರಾಜದೂತನ ಕಡೆ ಹೊರಳಿ, "ಪ್ರಿನ್ಸ್, ತಮ್ಮ ದರ್ಶನದಿಂದ ಸಂತೋಷವಾಯಿತು. ಇನ್ನೂ ಹೆಚ್ಚಿನ ಆನಂದವೆಂದರೆ, ನಮ್ಮ ಬಂಧುಬಾಂಧವರನ್ನು ಸತ್ಕರಿಸುವ ಶಕ್ತಿ ಇನ್ನೂ ಇದೆ." ಎಂದ.

ಜರ್ಮನ್ ರಾಯಭಾರಿ ಗಂಭೀರಭಾವದಿಂದ ಮಾರ್ನುಡಿದ: "ಯುವ ರಾಜ, ತಾವು ಸ್ವದೇಶಕ್ಕೆ ಮರಳಿಬಂದಿರೆಂಬುದಕ್ಕಿಂತ ಹೆಚ್ಚಿನ ಆನಂದ

ಬೇರೊಂದಿಲ್ಲ. ತಾವು ಶೀಘ್ರವೇ ತಿರುಗಿ ಬಂದುಬಿಟ್ಟಿರಿ, ತಮ್ಮ ವಿದೇಶ ಸಂಚಾರ ಸುಖಕರವೇ ಆಯಿತೆಂದು ನನ್ನಾಸೆ."

ಉಪೇಕ್ಷೆಯಿಂದ ಜಾನ್ ಪಿಟರ್ಸ್ ನುಡಿದ: "ಏನಚ್ಚರಿ! ನಾನು ಕೆಲವೇ ಗಂಟೆ ಈ ದೇಶದಲ್ಲಿರಲಿಲ್ಲ. ಈ ಸುದ್ದಿಯಾಗಲೇ ವಿಶ್ವದ ಸಕಲ ಜನರ ಕಿವಿಗಳಿಗೂ ಹೋಗಿದೆಯೆ? ಈ ಕಾಲದಲ್ಲಿ ಪತ್ರಿಕೆಗಳ ಪಿಡುಗನಿಂದ ಯಾವುದೂ ಗುಟ್ಟಾಗಿ ಉಳಿಯುವುದಿಲ್ಲ."

"ಈಗ ಪ್ಯಾರಿಸಿನ ಹವಾಮಾನ ಹೇಗಿದೆ?" ಜರ್ಮನ್ ರಾಯಭಾರಿ ಸಂಭ್ರಮದಿಂದ ಕೇಳಿದ.

"ತಣ್ಣಗಿದ್ದಂತೆ ನೀರಸವೂ ಆಗಿದೆ. ಆದರೆ ಅದರಿಂದ ನನಗೆ ಯಾವ ತೊಂದರೆಯೂ ಆಗಲಿಲ್ಲ. ನಾನಲ್ಲಿ ಸ್ವಲ್ಪ ಹೊತ್ತು ಮಾತ್ರ ಇದ್ದೆ. ಅಷ್ಟು ಹೊತ್ತಿನಲ್ಲಿಯೆ ಹಲವು ಕೆಲಸಗಳನ್ನು ತೀರಿಸಬೇಕಾಗಿತ್ತು. ಆ ಕಾರಭಾರದಲ್ಲಿ ಮಿಕ್ಕ ಯಾವುದೂ ನನ್ನ ಲಕ್ಷ್ಯಕ್ಕೇ ಬರಲಿಲ್ಲ. ಚಳಿ ಕೂಡ ಹತ್ತಲಿಲ್ಲ."

"ಈ ಸಮಯದಲ್ಲಿ ಪ್ಯಾರಿಸಿನಲ್ಲಿ ಆಮೋದಪ್ರಮೋದಗಳು ತುಂಬ ನಡೆಯುತ್ತವೆ."

"ಅಲ್ಲಿ ಆಮೋದಪ್ರಮೋದ ಇಲ್ಲದ ಸಮಯ ಯಾವುದು?"

"ಎಡ್ವರ್ಡ್ ದೊರೆಗಳೊಡನೆ ತಮ್ಮ ಸಂದರ್ಶನವಾಯಿತೆ?"

"ಅವರು ಅಲ್ಲಿಗೆ ಬಂದಿರುವಾಗ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸದೆ, ಅವರ ಕುಶಲವನ್ನು ಕೇಳದೆ ಹಾಗೇ ಹೇಗೆ ತಿರುಗಿ ಬರಲಿ?" ಎಂದು ನುಡಿದು ಜಾನ್ ಪಿಟರ್ಸ್ ಒಮ್ಮೆಲೆ ಗ್ರೇಸಳ ಕಡೆಗೆ ನೋಡಿ ಎಂದ: "ನಡೆ, ಭೋಜನಾಲಯಕ್ಕೆ ಹೋಗುವಾ. ನಾನು ಬಂದು ಎಷ್ಟೋ ಹೊತ್ತಾಯಿತು. ಹೊಟ್ಟೆ ಹಸಿದಿದೆ. ಇಲ್ಲಿ ನಿಂತು ಮಾತನಾಡಿದರೆ ಹೊಟ್ಟೆ ತುಂಬುವುದಿಲ್ಲ ಪ್ರಿನ್ಸ್, ಕ್ಷಮಿಸಿರಿ."

ಜರ್ಮನ್ ರಾಯಭಾರಿ ಜಾನ್ ಪಿಟರ್ಸ್‌ನನ್ನು ಅಭಿವಂದಿಸಿ ತಿರುಗಿದ. ಓಡುತ್ತ ಹೋಗಿ ರಾಜನಿಗೆ ನಿವೇದಿಸಿದ: "ಮಹಾರಾಜ, ಯುವರಾಜರು ಆಗಲೇ ಬಂದಿದ್ದಾರಲ್ಲ."

ರಾಜನು ವಿರಕ್ತಭಾವದಿಂದ ನುಡಿದ: "ಹಾಗಾದರೆ ನಾನು ಚತುರ್ಭುಜನಾದೆ. ಎಲ್ಲರ ಬಾಯಲ್ಲಿಯೂ ಜಾನನ ವಿಷಯವೇ–ಅವನು ಓಡಿ

ಹೋದದ್ದು ಎಲ್ಲರನ್ನೂ ಯೋಚನೆಗೀಡು ಮಾಡಿತ್ತು—ಇಂಥ ಅದ್ಭುತ ವ್ಯಾಪಾರ ಪ್ರಪಂಚದಲ್ಲಿಯೇ ಎಂದೂ ಆಗಿದ್ದಲ್ಲವೋ ಏನೋ, ಯಾರೂ ರಾಜ್ಯವನ್ನು ಬಿಟ್ಟು ಓಡಿದಿಲ್ಲವೋ ಏನೋ! ಜಾನ್ ಮರಳಿಬಂದದ್ದನ್ನು ಕಂಡು ಜನರು ಮತ್ತಷ್ಟು ವಿಸ್ಮಯಗೊಳ್ಳುವರು, ವಿದೇಶದಿಂದ ಸ್ವದೇಶಕ್ಕೆ ಯಾರೂ ಬರುವುದೇ ಇಲ್ಲ ಎಂಬಂತೆ! ಅವನು ಬರಲಿ, ಬಿಡಲಿ. ಅದರಿಂದ ನನಗೆ ಲಾಭವೂ ಇಲ್ಲ, ನಷ್ಟವೂ ಇಲ್ಲ ಏಕೆ ಹೋದ, ಏಕೆ ಬಂದ ಎಂಬುದನ್ನು ತಿಳಿದುಕೊಳ್ಳುವ ಕುತೂಹಲವೂ ನನಗಿಲ್ಲ"

"ತಮಗೆ ಕುತೂಹಲವಿರಲಿಕ್ಕಿಲ್ಲ. ನನಗೆ ಕೊಂಚ ಕುತೂಹಲವಿದೆ. ಯುವರಾಜರ ಸ್ವಭಾವಚರಿತ್ರವನ್ನರಿಯುವುದು ಸುಲಭವಲ್ಲ ಅವರು ಯಾವ ಉದ್ದೇಶದಿಂದ ಏನು ಮಾಡುವರೆಂಬುದನ್ನು ಅನ್ಯರು ಹೇಳುವುದು ಸಾಧ್ಯವೇ ಇಲ್ಲ." ಎಂದ ಪ್ರಿನ್ಸ್ ಸುಯೇಸ್.

"ಜಾನ್ ತನ್ನ ಮುದುಕ ಕಕ್ಕನನ್ನು ಸಿಂಹಾಸನದಿಂದ ತಳ್ಳಲು ಯಾರೊಡನಾದರೂ ಸಂಚುನಡೆಸಿರುವನೆಂದು ತಮ್ಮ ಭಾವನೆಯೆ?" ರಾಜ ಕೇಳಿದ.

ಈ ಪ್ರಶ್ನೆಯಿಂದ ಜರ್ಮನ್ ರಾಯಭಾರಿ ಅಪ್ರತಿಭನಾದ. "ಇಲ್ಲಿಲ್ಲ, ನಾನು ಹಾಗೆ ಹೇಳಲಿಲ್ಲ. ಆದರೆ ಯಾವ ಗೂಢ ಉದ್ದೇಶದಿಂದಲೋ ಅವರು ಪ್ಯಾರಿಸಿಗೆ ಹೋಗಿರಬೇಕು, ಎಡ್ವರ್ಡ್ ದೊರೆಗಳನ್ನು ಯಾವುದೋ ವಿಶೇಷ ವಿಚಾರದಿಂದಲೇ ಸಂಧಿಸಿರಬೇಕು;-ಇದರಲ್ಲಿ ನನಗೆ ಸಂದೇಹವಿಲ್ಲ. ನಾವಿಲ್ಲಿ ರಾಜಕೀಯ ವಿಪತ್ತಿನಲ್ಲಿ ಬಿದ್ದು ಉದ್ವಿಗ್ನತೆಯಿಂದ ಕಾಲಕಳೆಯುತ್ತಿರುವಾಗ, ಅವರು ಸೈನ್ಯಸಂಚಾಲನೆಯ ಕಾರ್ಯವನ್ನು ಬಿಟ್ಟು ಫ್ರಾನ್ಸಿಗೆ ವಾಯುಪರಿವರ್ತನೆಗಾಗಿ ಹೋಗುವುದು ಸ್ವಲ್ಪ ಅಸ್ವಾಭಾವಿಕವೆಂದು ತೋರುತ್ತದೆ. ಅವರು ಎಡ್ವರ್ಡರನ್ನು ಕಾಣಲೆಂದೇ ಹೋಗಿದ್ದರೆಂದು ನನ್ನ ನಂಬಿಗೆ. ಅವರ ಉದ್ದೇಶವೇನು? ಎಡ್ವರ್ಡರೊಡನೆ ಏನು ಮಾತನಾಡಿದರು? ಎಲ್ಲವನ್ನೂ ಅರಿತುಕೊಳ್ಳುವ ಆಗ್ರಹ ನನಗುಂಟಾಗಿದೆ."

ಈ ಮಾತು ರಾಜನನ್ನು ಗಾಬರಿಗೊಳಿಸಿತು. ಆತನೆಂದ: "ಪ್ರಿನ್ಸ್, ತಾವು ಸಹಾಯಕ್ಕಾಗಿ ಕೈನೀಡಿರುವಿರಿ ಅದಕ್ಕಾಗಿ ಯಾರಾದರೂ ನಮ್ಮ ರಾಜ್ಯದಲ್ಲಿ ಅನಧಿಕಾರಚರ್ಚೆಗೆ ಬರುವರೆಂದು ತಮಗೆನಿಸುವುದೆ? ತಾವು

ಸಹಾಯಕ್ಕೆ ಮುಂದಾಗದಿದ್ದರೆ ವಿದ್ರೋಹಿಗಳು ಅರಮನೆಯಲ್ಲಿ ನನ್ನನ್ನು ಕೊಂದುಹಾಕುವರು. ತಾವು ಸೈನ್ಯಸಾಮಂತರೊಡನೆ ರಾಜಧಾನಿಯಲ್ಲಿ ಬಾರದೆ ನನ್ನ ಭಯ ಬಯಲಾಗಲಾರದು. ತಮ್ಮ ಹೊರತು ನನಗೆ ಯಾರಲ್ಲಿಯೂ ವಿಶ್ವಾಸವಿಲ್ಲ."

"ಮಹಾರಾಜ, ತಾವು ಚಿಂತಿಸಬೇಡಿರಿ. ಯಾವಗಳಿಗೆಯಲ್ಲಿ ಬೆಕೆಂದರೆ ಆ ಗಳಿಗೆಯಲ್ಲಿ ನಮ್ಮ ಸೈನ್ಯ ರಾಜಧಾನಿಯಲ್ಲಿರುವುದು. ನಮ್ಮದೊರೆಗೆ ಸಾಧಾರಣತಂತ್ರವೆಂದರೆ ಆಗುವುದಿಲ್ಲ. ಈ ರಾಜ್ಯದಲ್ಲಿ ಸಾಧಾರಣತಂತ್ರವನ್ನು ಅವರು ಯಾವ ಕಾಲಕ್ಕೂ ತಲೆಯೆತ್ತಗೊಡುವುದಿಲ್ಲ. ಅದಕ್ಕೆಂದೇ ತಮಗೆ ಉಪಕಾರಮಾಡಲು ಅವರಿಗಿಷ್ಟು ಆಗ್ರಹ. ಒಂದು ದಂಡನ್ನು ತೆಗೆದುಕೊಂಡು ಬಂದು ತಮ್ಮನ್ನು ನಿರಾತಂಕವಾಗಿ ಸಿಂಹಾಸನದಲ್ಲಿ ಪ್ರತಿಷ್ಠಿಸಿ ಹೋಗಬೇಕೆಂಬುದೇ ನಮ್ಮಉದ್ದೇಶವಲ್ಲದ ಅನ್ಯಥಾ ಯಾವ ಇಚ್ಛೆಯೂ ಇಲ್ಲ. ಆದರೆ ಇದರಲ್ಲಿಯೂ ವಿಪತ್ತುಂಟೆಂದು ತೋರುತ್ತಿದೆ. ಇಂಗ್ಲಂಡ್- ಫ್ರಾನ್ಸುಗಳು ಯಾವುದೊಂದು ವಿಷಯವನ್ನು ಗುಜುಗುಜು ಮಾತಾಡಿಕೊಂಡರೆ ಏನಾದರೂ ಅನರ್ಥಕ್ಕೆಡೆಮಾಡಿಕೊಡುವುದು ಖಂಡಿತ. ಎಲ್ಲಿಯೂ ಯಾವ ಗಡಿಬಿಡಿಯಿಲ್ಲದಿದ್ದರೂ ಅವುಗಳ ಕಲ್ಪನಾದೃಷ್ಟಿಯಲ್ಲಿ ನಾನಾಪ್ರಕಾರದ ವಿಭೀಷಿಕೆಗಳು ಕಾಣುವವು. ಜರ್ಮನಿ ಅವುಗಳಿಗೇನು ಕೇಡು ಮಾಡಿದೆಯೋ ನಾನರಿಯೆ; ಅವುಗಳಿಗೆ ಮಾತ್ರ ಜರ್ಮನಿಯ ಉತ್ಕರ್ಷವನ್ನು ಕಂಡರೆ ಸಹನೆಯಿಲ್ಲ. ಇಂಗ್ಲಂಡ್-ಫ್ರಾನ್ಸುಗಳೆರಡೂ ಹೀಗೆ ಗುಪ್ತಪರಾಮರ್ಶೆ ನಡೆಸುತ್ತಿರುವುದು ಅಷ್ಟು ಶುಭಕರವಾಗದೆಂದು ನನ್ನ ವಿಶ್ವಾಸ."

ಪ್ರಿನ್ಸನ ಈ ಮಾತಿನಿಂದ ರಾಜನಿಗೆ ಭಯ ಹೆಚ್ಚಿತು. "ಎಂದರೆ, ಅವರು ಒಂದಾಗಿ ಇಲ್ಲಿಗೆ ನಿಮ್ಮ ಸೈನ್ಯವನ್ನು ಕಳಿಸುವುದಕ್ಕೆ ತಡೆಯೊಡ್ಡಬಹುದೆ ?" ಎಂದು ಕೇಳಿದ.

"ಅದು ಸಂಭವವೆಂದು ನನಗೆ ತೋರುವುದಿಲ್ಲ. ಆದರೂ ತಮ್ಮ ಮಗನ ಬಗ್ಗೆ ನನಗಷ್ಟು ವಿಶ್ವಾಸವಿಲ್ಲ. ನಾನೂ ತಾವೂ ತುಂಬ ವಿಚಾರಮಾಡಿ ಮಾಡಿದ ಸಂಕಲ್ಪ, ತಮ್ಮ ಗುಣವಾನ್ ಭ್ರಾತೃಪುತ್ರನ ಒಂದೇ ಒಂದು ಘೂತ್ಕಾರದಿಂದ ಹಾರಿಹೋಗಲಿಕ್ಕಿಲ್ಲವಷ್ಟೇ ಎಂಬುದೇ ನನ್ನ ಚಿಂತೆ. ಮಹಾರಾಜ, ತಾವು ಶೀಘ್ರವೇ ಯುವರಾಜರನ್ನು ಕರೆಸಿರಿ. ನನಗೇಕೋ ಅಷ್ಟು

ಒಳಿತು ಕಾಣುವುದಿಲ್ಲ. ಅವರು ಪ್ಯಾರಿಸಿಗೆ ಏಕೆ ಹೋಗಿದ್ದರೆಂಬುದನ್ನು ಕೂಡಲೇ ಅರಿತುಕೊಳ್ಳಬೇಕಾಗಿದೆ. ಮರೆಯಬೇಡಿ, ನಾಳೆ ಅಪರಾಹ್ನ ನಾಲ್ಕು ಗಂಟೆಯೊಳಗಾಗಿ ದೇಶದ ಎಲ್ಲ ರೇಲ್ವೆಗಳೂ ನಮ್ಮ ವಶಕ್ಕೆ ಬರಬೇಕು. ನಮ್ಮ ಅಪ್ಪಣೆಯಿಲ್ಲದೆ ಒಂದು ಪ್ರಾಣಿಯೂ ಎಲ್ಲಿಗೂ ಹೋಗಕೂಡದು, ರಾಜಧಾನಿಯ ನಿಲ್ದಾಣನಲ್ಲಿಳಿಯಕೂಡದು. ನಮ್ಮ ಸೈನ್ಯವನ್ನು ತರಲು ಎಲ್ಲ ಬಂಡಿಗಳನ್ನೂ ಕಾಯ್ದಿರಿಸತಕ್ಕದ್ದು."

"ಹಾಂ, ಜಾನನನ್ನು ಕರೆಸುತ್ತೇನೆ. ಓ, ಬರ್ನಾರ್ಡ್, ಬಂದರು. ಅವರನ್ನೇ ಕರೆಸುತ್ತೇನೆ. ಬರ್ನಾರ್ಡ್, ಯುವರಾಜ ತಿರುಗಿ ಬಂದಿದ್ದಾನಂತೆ, ಬಲ್ಲಿರಾ ?"

ಬರ್ನಾರ್ಡ್ ಅಭಿವಂದಿಸಿ, "ಹಾಂ ಮಹಾರಾಜ, ತಿಳಿದಿದೆ. ಅವರೀಗ ಗ್ರೇಸಳೊಡನೆ ಭೋಜನಮಾಡುತ್ತಿದ್ದಾರೆ."

"ಅವನನ್ನು ಈಗಲೇ ಕರೆದುಕೊಂಡು ಬನ್ನಿ. ಪ್ರಿನ್ಸ ಸುಯೋಸರೂ ನಾನೂ ಅವನಿಗಾಗಿ ಕಾದಿದ್ದೇವೆಂದು ಹೇಳಿರಿ. ತಡಮಾಡಬೇಡಿರಿ."

* * * *

ಭೋಜನಾಗಾರದಲ್ಲಿದ್ದವರೆಲ್ಲರೂ ಗ್ರೇಸಳೊಂದಿಗೆ ಯುವರಾಜನು ಬಂದುದನ್ನು ಕಂಡು ಗೌರವದಿಂದ ಎದ್ದು ಹೋಗಿದ್ದರು. ಇಬ್ಬರೂ ಒಂದು ಕೋಣೆಯಲ್ಲಿ ಮೇಜೊಂದನ್ನು ಹಿಡಿದು ಕುಳಿತಿದ್ದರು. ಹಸಿದಿದ್ದ ಜಾನ್ ಪಿಟರ್ಸ್ ಮೊದಲು ಮೌನವಾಗಿ ಆಹಾರ ಸಂಹಾರದಲ್ಲಿಯೆ ತೊಡಗಿದ್ದ. ಕೆಲ ಹೊತ್ತಿನ ಬಳಿಕ ಜಾನ್ ಪಿಟರ್ಸ್ ಬಿರಿದಂತದಲ್ಲಿ ನಿಂತಿದ್ದ ಸೇವಕನನ್ನು ಸನ್ನೆಯಿಂದ ಹೊರಕ್ಕೆ ಕಳುಹಿ, ಗ್ರೇಸಳನ್ನು ಕೇಳಿದ: "ನಾನು ಓಡಿಹೋಗಿದ್ದೆನೆಂದು ನೀನು ನಂಬುತ್ತೀಯಾ ?"

"ಇಲ್ಲ. ನಾನದನ್ನು ನಂಬುವುದಿಲ್ಲ. ಆದರೆ ನಿಮ್ಮ ರೀತಿ ಎಂಥದಿದು—ನನಗೆ ಹೇಳದೆ ಹೋಗಿ ಬಿಟ್ಟಿರಿ ?" ಗ್ರೇಸ್ ಕೇಳಿದಳು.

"ಒಮ್ಮೆಲೆ ಹೋಗುವ ಹಾಗಾಯಿತು, ಹೋಗಿಬಿಟ್ಟೆ. ಏಕೆ ಹಾಗಾಯಿತೆಂದು ಕೇಳಬೇಡ. ಅವೆಲ್ಲ ಸಂಗತಿ ನಿನಗೆ ತಿಳಿಯದಿದ್ದಷ್ಟೂ ನೆಟ್ಟಗೆ. ನಾನು ಇಷ್ಟು ಮಾತ್ರ ಹೇಳಬಲ್ಲೆ, ಹೋದ ಉದ್ದೇಶ ಸಫಲವಾಗುವುದೆಂಬ ಆಸೆಯಿದೆ. ನಮ್ಮ ಕಕ್ಕ ಪ್ರಿನ್ಸರ ದುರುಪದೇಶದಿಂದ ಈ ದೇಶದ ಸರ್ವನಾಶವನ್ನು ಮಾಡುತ್ತಲಿದಾನೆ; ಅವರ ಈ ಕಾರಸ್ಥಾನ ಸಫಲವಾಗಲಾರದು."

"ಪ್ರಿನ್ಸ ಸುಯೇಸ್ ಅತ್ಯಂತ ಉತ್ಕಂಠಿತರಾಗಿದ್ದಾರೆ. ನನ್ನಿಂದ ಏನಾದರೂ ಸುದ್ದಿಯನ್ನು ಹೊರಡಿಸಲು ಬಹಳ ಪೇಚಾಡಿದರು."

ಜಾನ್ ಪಿಟರ್ಸ್ ನಸುನಕ್ಕು ಮಾತನಾಡಿದ: "ನಾನು ಸ್ವಲ್ಪ ಸ್ವಲ್ಪ ದೈವಜ್ಞನಾಗಿದ್ದೇನೆ. ಈಗ ಅರಮನೆಯಲ್ಲಿ ಏನು ನಡೆದಿದೆ, ಏನು ಬಿಟ್ಟಿದೆ ಎಂಬುದನ್ನು ಇಲ್ಲಿ ಕುಳಿತುಕೊಂಡೇ ಹೇಳಬಲ್ಲೆ. ನನ್ನಿಂದ ಬೀಳ್ಕೊಂಡು ಪ್ರಿನ್ಸ್ ನಮ್ಮ ಕಕ್ಷನ ಕೋಟಡಿಗೆ ಧಾವಿಸಿದರು. ನೀನು ಇಲ್ಲಿ ಕುಳಿತಿರಲಿಕ್ಕೇ ನೋಡು ಬೇಕಾದರೆ, ರಾಜನಿಂದ ನನಗೆ ಕರೆ ಬರುವುದು."

"ನೀವು ಅವರೆದುರು ಎಲ್ಲವನ್ನು ಹೇಳಿಬಿಡುವಿರಾ?" ಗ್ರೇಸ್ ಕೇಳಿದಳು.

"ಎಲ್ಲವನ್ನೂ ಹೇಳುವ ಅಗತ್ಯವುಂಟಾಗಲಿಕ್ಕಿಲ್ಲ ಅಲ್ಪಸ್ವಲ್ಪ ಹೇಳಿದರೂ ಅವರು ಎಲ್ಲವನ್ನೂ ತಿಳಿದುಕೊಳ್ಳಬಲ್ಲರು. ಎಷ್ಟು ಹೇಳಬೇಕು, ಎಷ್ಟು ಬಿಡಬೇಕು ಎಂಬುದನ್ನು ನಾನು ಇನ್ನೂ ಯೋಚಿಸಿಯೇ ಇಲ್ಲ. ಗ್ರೇಸ್ ಇದೇನು ನೀನೇನೂ ತೆಗೆದುಕೊಳ್ಳಲೇ ಇಲ್ಲ?"

ಗ್ರೇಸ್ ನಕ್ಕು ಉತ್ತರವಿತ್ತಳು: "ನಿಮ್ಮನ್ನು ನೋಡಿಯೇ ನನ್ನ ಹೊಟ್ಟೆ ತುಂಬಿದೆ. ನೀವು ತಿರುಗಿ ಬಂದುದರಿಂದ ನನಗೆ ಸಂತೋಷವಾಗಿದೆ."

ಜಾನ್ ಪಿಟರ್ಸ್ ನುಡಿದ: "ನಾನು ಕಳೆದುಹೋಗುವ ಹುಡುಗನಲ್ಲ. ನಾನಿಂದು ಇಲ್ಲಿ ಬಂದು ಉಣ್ಣುವೆನೆಂದು, ರಾಜಧಾನಿಯಲ್ಲಿ ಯಾರ ಕನಸು ಮನಸಿನಲ್ಲಿಯೂ ಎನಿಸಿರಲಿಲ್ಲ. ನಾಳೆಯೂ ಇಲ್ಲಿ ನಿನ್ನೊಂದಿಗೆ ಉಣ್ಣಬೇಕೆಂದು ಮನಸಿದೆ. ಆದರೆ ದೇಶದ ಪರಿಸ್ಥಿತಿಯನ್ನು ನೋಡಿದರೆ, ಈ ಇಚ್ಛೆ ಈಡೇರುವುದೋ ಇಲ್ಲವೋ ಯಾರು ಹೇಳಬಲ್ಲರು?"

"ವಿಪತ್ತಿನ ಭಯದಿಂದ ನಾನು ಬಲು ಕಾತರಳಾಗಿದ್ದೇನೆ. ನೀವು ಅವಸರದಿಂದ ತಿರುಗಿ ಬರದಿದ್ದರೇ ಚೆನ್ನಾಗಿತ್ತೆಂದು ನನಗೆನಿಸುತ್ತದೆ." ಎಂದಳು ಗ್ರೇಸ್.

ಒಮ್ಮೆಲೆ ಕೋಣೆಯ ಬಾಗಿಲು ತೆರೆಯಿತು. ಬರ್ನಾರ್ಡನನ್ನು ಕಂಡು ಜಾನ್ ಪಿಟರ್ಸ್ ಗ್ರೇಸಳಿಗೆಂದ: "ನೋಡು, ನನ್ನ ಭವಿಷ್ಯ ಸತ್ಯವಾಯಿತಿಲ್ಲವೋ? ಬರ್ನಾರ್ಡ್ ನನ್ನನ್ನು ಕರೆಯಲಿಕ್ಕೆ ಬಂದರು."

"ಯುವರಾಜ, ನಾನು ತಮ್ಮ ವಿರಾಮಕ್ಕೆ ಅಡ್ಡಿಯಾಗಿ ಬಂದೆ; ಅದಕ್ಕಾಗಿ ನನಗೆ ವಿಷಾದವಾಗುತ್ತಿದೆ; ಉಪಾಯವಿಲ್ಲ. ಮಹಾರಾಜರು ಈಗಲೇ ತಮ್ಮನ್ನು ಬರಹೇಳಿದ್ದಾರೆ." ಬರ್ನಾರ್ಡ್ ನಿವೇದಿಸಿದ.

"ಅದಕ್ಕೇನು ಚಿಂತೆ? ನಾನು ಬರುತ್ತೇನೆ. ಕಕ್ಕನೊಡನೆ ಪ್ರಿನ್ಸ್ ಸುಯೇಸರೂ ಇದ್ದಾರೆಯೆ?"

"ಹಾಂ, ಇದ್ದರು."

"ಇಷ್ಟು ತಿಂದರೂ ನನ್ನ ಹಸಿವು ನಂದಲಿಲ್ಲ. ಆದರೆ ಈಗ ಉಣ್ಣುತ್ತ ಕೂಡಲು ಸಮಯವಿಲ್ಲ. ಕಕ್ಕ ಏನು ಹೇಳುತ್ತಾನೋ ಕೇಳಿಬರುತ್ತೇನೆ" ಎಂದು ಏಳುತ್ತ ಜಾನ್ ಪಿಟರ್ಸ್ ಗ್ರೇಸಳನ್ನು ಪ್ರಶ್ನಿಸಿದ: "ನೀನು ನಿನ್ನ ಅಬಚಿಯ ಹತ್ತಿರ ಹೋಗುವವಳೋ ಇಲ್ಲಿಯೇ ಇರುವವಳೋ? ಬರ್ನಾರ್ಡರನ್ನು ನಿನ್ನ ಕಾವಲಿಗೆ ಇರಿಸಬಹುದು. ಏನೆನ್ನುವಿರಿ ಬರ್ನಾರ್ಡ್?"

"ಈಕೆಯ ರಕ್ಷಣಾವೇಕ್ಷಣದ ಭಾರವನ್ನು ನಾನು ಆನಂದದಿಂದ ವಹಿಸಿಕೊಳ್ಳುವೆ." ಎಂದ ಬರ್ನಾರ್ಡ್.

ಪಿಟರ್ಸ್ ಹೊರಟುಹೋದ. ಬರ್ನಾರ್ಡ್ ಅಸ್ಫುಟಸ್ವರದಿಂದ "ರಾಜರ ವಿರಾಮಕಕ್ಷದಲ್ಲಿ ಇಂದು ಏನೇನು ತನಾಷೆಯಾಗುವುದೋ ತಿಳಿಯೆ. ಕಣ್ಣು ಕಿವಿಗಳ ಜಗಳವನ್ನು ಬಗೆಹರಿಸಲಾಗದುದಕ್ಕೆ ಖೇದವಾಗುತ್ತಿದೆ." ಎಂದು ನುಡಿದ.

೩೩

ವಿಸ್ತೀರ್ಣವಾದ ಕೋಣೆಯೊಂದರಲ್ಲಿ ರಾಜನು ಪ್ರಿನ್ಸ್ ಸುಯೇಸನೊಡನೆ ಕುಳಿತಿದ್ದ. ಜಾನ್ ಪಿಟರ್ಸ್ ಸಾವಕಾಶವಾಗಿ ಪ್ರವೇಶಿಸುತ್ತ, "ಕಕ್ಕ, ನನ್ನ ಕಡೆ ತಮ್ಮ ಕೆಲಸವಿತ್ತೆ?" ಎಂದು ಕೇಳಿದ.

"ಹೌದು. ನಾನೂ ಈ ಮಿತ್ರರೂ ನಿನ್ನೊಂದಿಗೆ ಕೆಲವು ಮಾತು ವಿಚಾರಮಾಡಬೇಕಾಗಿದೆ. ಸರಿಯಾಗಿ ಉತ್ತರಕೊಡು" ರಾಜನು ಅಪ್ರಸನ್ನಭಾವದಿಂದ ನುಡಿದ.

ಈವರೆಗೆ ಜಾನ್ ಪಿಟರ್ಸ್ ಜರ್ಮನ್ ರಾಯಭಾರಿಯ ಕಡೆ ನೋಡಿರಲಿಲ್ಲ; ಈಗ ಆಕಡೆ ಕಣ್ಣು ಜೀರಿದ. "ಒಳ್ಳೇದು. ತಾವು ಕೇಳಿದ್ದಕ್ಕೆ ಉತ್ತರ ಕೊಡಲಿಕ್ಕೆಂದೇ ನಾನು ಬಂದಿದ್ದೇನೆ. ಊಟದ ಮನೆಯಿಂದ

ನೇರವಾಗಿ ಇಲ್ಲಿಗೇ ಬಂದೆ; ಇನ್ನೂ ಹೊಗೆಸೊಪ್ಪು ಕೂಡ ಸೇದಿಲ್ಲ. ಅವ ಸರದಲ್ಲಿ ಪ್ಯಾರಿಸಿನಲ್ಲಿ ಸಿಗಾರೇಟ್ ಕೊಳ್ಳುವುದೇ ಆಗಲಿಲ್ಲ." ಎಂದ.

"ನೀನು ಒಮ್ಮೆಗಿಲೇ ಪ್ಯಾರಿಸಿಗೆ ಹೋಗಿ ಬಂದ ಬಗ್ಗೆಯೇ ಮಾತ ನಾಡುವುದಿದೆ" ಎಂದ ರಾಜ. ಈ ಗುಟ್ಟಿನ ಮಾತುಕತೆಗೆ ಹೆಚ್ಚು ನಿರ್ಜನ ಸ್ಥಾನವೇ ಉಚಿತವೆಂದು ಜರ್ಮನ್ ರಾಯಭಾರಿ ಸೂಚಿಸಿದ. ಆಮೇಲೆಗೆ ಮೂವರೂ ಅರಮನೆಯ ವಾಚನಾಲಯದ ಕೋಣೆಗೆ ಹೋದರು. ಕೋಣೆಯ ಬಾಗಿಲನ್ನಿಕ್ಕಿ, ಒಳಗಿನಿಂದ ಭದ್ರಗೊಳಿಸಿದರು. ರಾಜನು ಮೇಜಿನ ಪಕ್ಕದ ವಿರಾಮಕುರ್ಚಿಯಲ್ಲಿ ಕುಳಿತ. ಯುವರಾಜನ ಬಗ್ಗೆ ಅಪ್ರಸನ್ನನಾಗಿದ್ದ ರಾಜ ಅವನಿಗೆ ಕುಳ್ಳಿರಲು ಸೂಚಿಸ ಅಸಹಿಷ್ಣುಭಾವದಿಂದ ಮಾತನಾ ಡಿದ. "ನೀನು ಪ್ಯಾರಿಸಿಗೆ ಒಮ್ಮೆಲೆ ಹೋಗಿದ್ದೇಕೆ, ಹೇಳು ಮೊದಲು."

ಜಾನ್ ಪಿಟರ್ಸ್ ಅಗ್ಗಿಷ್ಟಿಗೆಯ ಹತ್ತಿರ ನೀಟಾಗಿ ನಿಂತಿದ್ದ. ಅವನ ದೃಷ್ಟಿ ಕಿಡಿಕಿಯಲ್ಲಿತ್ತು. ಕಕ್ಕನ ಮಾತನ್ನು ಕೇಳಿ ಅವನು ಕೆಲನಿಮಿಷ ನೀರವವಾಗಿದ್ದ. ಮೆಲ್ಲಮೆಲ್ಲನೆ ಅವನ ಮುಖ ಮೋಡಹರಿದ ಮುಗಿಲಿ ನಂತೆ ಗಂಭೀರವಾಯಿತು. ಅವನ ಮುಖಭಾವವನ್ನು ಕಂಡು ರಾಜನ ಮನಸು ವಿರಸವಾಯಿತು. ಜರ್ಮನ್ ರಾಯಭಾರಿ ತನ್ನ ಸಂದೇಹ ಅಕಾ ರಣವಲ್ಲವೆಂದು ಭಾವಿಸಿದ.

ಕಿಡಿಕಿಯಾಚೆ ವಿಶಾಲವಾಗಿ ಹಬ್ಬಿದ ನಗರವನ್ನು ಜಾನ್ ಪಿಟರ್ಸ್ ಶೂನ್ಯದೃಷ್ಟಿಯಿಂದ ನೋಡುತ್ತಿದ್ದ. ಅವನ ಹಣೆ ಕುಂಚಿತವಾಗಿತ್ತು; ತುಟಿಗಳಲ್ಲಿ ಸಂಕಲ್ಪದ ದೃಢತೆ ಒಡಮೂಡಿದ್ದಿತು. ಆಗಿನ ಅವನ ಮುಖ ಭಂಗಿಯನ್ನು ನೋಡಿದರೆ, ಹರಯವನ್ನು ಇಂದ್ರಿಯಲೋಲುಪತೆಗೆ ಮೀಸಲಿಟ್ಟಿ ರುವ ವಿಲಾಸಜೀವಿಯೆಂದು ಯಾರೂ ಹೇಳಲಾರರು.

"ತಮ್ಮ ಪ್ರಶ್ನೆಗೆ ಯಥಾರ್ಥ ಉತ್ತರವನ್ನೀಯಲು ನನಗೇನೂ ಅಡ್ಡಿ ಯಿಲ್ಲ. ಇನ್ನು ಕೆಲಗಂಟೆಗಳಲ್ಲಿಯೇ ಬರ್ಜಿಲಂಡ್ ಮಹಾಸಂಕಟದಲ್ಲಿ ಬೀಳುವುದು. ಆ ಕೇಡು ಒದಗುವ ಮೊದಲೇ, ಅದನ್ನೆದುರಿಸಲು ಅಥವಾ ಅದರಿಂದ ಪಾರಾಗಲು ತಾವು ಸಿದ್ಧರಾಗಿರಬೇಕೆಂದು ನನ್ನಿಚ್ಛೆ" ಎಂದ ಜಾನ್ ದೃಢಸ್ವರದಲ್ಲಿ.

ಅವನ ಮಾತನ್ನು ಕೇಳಿ ರಾಜನ ಮೋರೆ ಮಲಿನವಾಯಿತು. ಕಣ್ಣುಗಳು ಆಕುಂಚಿತವಾದವು. ಅವನು ಸಿಟ್ಟಿನಿಂದ ತುಟಿಗಳ ಮೇಲೆ ತುದಿ ನಾಲಗೆಯನ್ನಾಡಿಸಿದ. “ ಸುಮ್ಮನೇಕಾದೆ, ಹೇಳುವುದನ್ನೆಲ್ಲ ಹೇಳಿಬಿಡು.” ಎಂದ ವಿಕೃತಸ್ವರದಲ್ಲಿ.

ಜಾನ್ ಹೇಳಿದ : “ ನಾನು ಹೇಳದಿದ್ದರೂ ನನ್ನ ಪ್ಯಾರಿಸ್ ಯಾತ್ರೆಯ ಉದ್ದೇಶವನ್ನು ತಾವು ಕೆಲಮಟ್ಟಿಗೆ ಅರಿತುಕೊಂಡಿರಬೇಕು. ಸಂಭವಿಸಲಿದ್ದ ಮಹಾಕಾಂಡದ ಬಗ್ಗೆ ಏನಾದರೂ ವ್ಯವಸ್ಥೆ ಮಾಡಲಿಕ್ಕೆಂದೇ ನಾನು ಪ್ಯಾರಿಸಿಗೆ ಹೋಗಿದ್ದೆ. ಫ್ರೆಂಚ್ ಸಾಧಾರಣತಂತ್ರದ ಸಭಾಪತಿಯನ್ನೂ ಲ್ಯಾಂಕೆಶಾಯರದ ಡ್ಯೂಕರನ್ನೂ ಕಂಡಿದ್ದೆ.”

ರಾಜನು ಕ್ರೋಧದಿಂದ ಗರ್ಜಿಸಿದ : “ ಯಾರ ಅಪ್ಪಣೆಯಿಂದ ನೀನು ಹೋಗಿದ್ದೆ ? ನನ್ನ ಸಂಕಲ್ಪವನ್ನು ವ್ಯರ್ಥಗೊಳಿಸುವುದಕ್ಕೆ ನಿನಗೆ ಧೈರ್ಯವೆಲ್ಲಿಂದ ಬಂತು ?”

ರಾಜನ ಈ ಧಟ್ಟಿಕೆಯಿಂದ ಯುವರಾಜನ ಧೀರತೆ ಕುಗ್ಗಲಿಲ್ಲ. ಅವನೆಂದ : “ ಯಾರ ಅಪ್ಪಣೆಯಿಂದಲೂ ಹೋಗಲಿಲ್ಲ ; ಯುವರಾಜ ರೂಪದಿಂದಲೂ ಹೋಗಲಿಲ್ಲ. ನಾನೂ ಒಬ್ಬ ಬರ್ಜಿಲಂಡ್ ರಾಜ್ಯದ ಪ್ರಜೆಯೆಂಬ ಅಧಿಕಾರಬಲದಿಂದ ಹೋಗಿದ್ದೆ. ಸ್ವದೇಶದ ಹಿತಸಾಧನೆಯಲ್ಲಿ ಪ್ರತಿಯೊಬ್ಬ ಪ್ರಜೆಗೂ ಅಧಿಕಾರವಿದೆ. ನನ್ನ ಮಾತಿನಿಂದ ತಾವು ಸಿಟ್ಟಾಗಬಾರದು. ತಾವು ಈ ಗೃಹಸ್ಥರ ಕೈಗೊಂಬೆಯಾಗಿರುವುದು ಮಾತ್ರ ಅತ್ಯಂತ ಖೇದದ ವಿಷಯ. ಇವರು ಕುಣಿಸಿದಂತೆ ನಿಮ್ಮ ಕುಣಿತ. ಇವರನ್ನು ಅಂತರಂಗದ ಸಲಹೆಗಾರರನ್ನಾಗಿ ಮಾಡಿಕೊಂಡು, ಪಿತ್ರಾರ್ಜಿತ ಸಿಂಹಾಸನದ ಅಧಿಕಾರವನ್ನು ದೃಢಪಡಿಸಿಕೊಳ್ಳುವುದಕ್ಕೆ ಇವರ ರಾಜನ ನೆರವನ್ನು ಯಾಚಿಸಿರುವಿರಿ. ಗಂಡಾಂತರವನ್ನು ತಪ್ಪಿಸುವುದಕ್ಕಾಗಿ ತಾವೀ ಕೆಲಸಕ್ಕೆ ತೊಡಗಿದ್ದರೆ, ಈ ಏರ್ಪಾಡಿನಿಂದ ನಿಜವಾಗಿಯೂ ತಾವು ನಿಷ್ಕಂಟಕರಾಗುತ್ತಿದ್ದರೆ ವಿಶೇಷ ವಾದವಿರಲಿಲ್ಲ. ಆದರೆ ತಮ್ಮ ಆಸೆ ಇವರಿಂದ ಈಡೇರಲಾರದು ; ಈ ರಾಜ್ಯದಲ್ಲಿ ಪರಕೀಯರ ಸೇನೆ ಕಾಲಿಟ್ಟ ದಿನವೇ ತಮ್ಮ ಬಾಳಿನ ಕೊನೆಯದಿನವಾಗುವುದು. ತಮ್ಮ ಜೀವವನ್ನು ಉಳಿಸಲೆಂದ್ದೆ

ನಾನು ತಮ್ಮ ಸಂಕಲ್ಪಕ್ಕೆ ಭಂಗತಂದಿದ್ದೇನೆ. ಇನ್ನು ತಮಗೆ ಪ್ರಾಣಭಯ ವಿಲ್ಲ ಸತ್ಯವನ್ನು ಅಸತ್ಯದಿಂದ ಮುಚ್ಚುವುದು ಸಾಧ್ಯವಿಲ್ಲ ; ಅದು ಪ್ರಕಟ ವಾಗುವುದೇ. ನಾಳೆ ಈ ರಾಜ್ಯದ ಶಾಸನದಂಡ ತಮ್ಮ ಕೈತಪ್ಪಿಹೋಗು ವುದು ಖಂಡಿತವೆ. ಸಿಂಹಾಸನವ ಮೇಲೆ ತಮ್ಮದಾಗಲಿ, ನನ್ನದಾಗಲಿ, ಯಾವ ಅಧಿಕಾರವೂ ಉಳಿಯುವುದಿಲ್ಲ. ತಾವು ಈ ಸಮಯದಲ್ಲಿ ಬುದ್ಧಿ ವಂತಿಕೆಯಿಂದ ನಡೆದರೆ ಒಂದು ಹುಲ್ಲುಕಡ್ಡಿಯೂ ತಮ್ಮ ಕಾಲಿಗೆ ನಡಲಾ ರದು. ಮೈಗೆ ಕೊಂಚವೂ ನೋವಿಲ್ಲದೆ ರಾಜ್ಯತ್ಯಾಗ ಮಾಡಿ ಯುರೋಪಿನ ಯಾವುದೊಂದು ರಾಜ್ಯದಲ್ಲಿ ನೆಮ್ಮದಿಯಾಗಿ ಇರಬಲ್ಲಿರಿ. ಪ್ರಾಣವನ್ನೂ ರಾಜಪದವಿಯನ್ನೂ ರಕ್ಷಿಸಿಕೊಳ್ಳಲು ಜರ್ಮನ್ ಸೈನ್ಯವನ್ನು ನಗರಕ್ಕೆ ಕರೆಸಿಕೊಂಡರೆ, ತಮ್ಮ ಮತ್ತು ನನ್ನ ಪ್ರಾಣಗಳನ್ನು ಎಚ್ಚತ್ತ ಪ್ರಜೆಗಳಿಂದ ಕಾಪಾಡುವ ವೀರಪುರುಷನು ಯಾವನೂ ಇಲ್ಲ ಈ ಪೃಥ್ವಿಯಲ್ಲಿ."

ಯುವರಾಜನ ಸುಸ್ಪಷ್ಟನಾದ ತೇಜಸ್ವಿಭಾಷಣವು ಕರಗಿ ಕುದಿ ಯುವ ಸೀಸರಸ ಹೊಯ್ದಂತೆ ರಾಜನ ಕಿವಿಗಳನ್ನು ಪ್ರವೇಶಿಸಿತು. ಅವನ ವಾಕ್ಶಕ್ತಿ ಲುಪ್ತವಾಯಿತು. ಅವನು ಕೆಲಹೊತ್ತು ಸ್ತಂಭಿತನಾಗಿ ಕುಳಿತು ಬಿಟ್ಟ. ಇದನ್ನೆಲ್ಲ ಕೇಳಿದ ಜರ್ಮನ್ ರಾಯಭಾರಿಯೂ ಅವಾಕ್ಕಾದ. ಅವನು ತನ್ನ ಹೃದಯದಲ್ಲಿ ಒಂದು ಆಶೆಯನ್ನು ಬಹುದಿನಗಳಿಂದ ಪೋಷಿಸಿ ಕೊಂಡು ಬಂದಿದ್ದ. ಅದೀಗ ಫಲಿಸುವ ಸಂದರ್ಭ ಕೂಡಿಬಂದಿದೆಯೆಂದು ಕನಸು ಕಾಣುತ್ತಿದ್ದ. ಈ ಉದ್ಧತ ಯುವಕನ ಪ್ರಯತ್ನದಿಂದಾಗಿ ಎಲ್ಲವೂ ಕ್ಷಿಪ್ರದಲ್ಲಿಯೇ ಮಣ್ಣುಗೂಡುವುದೆಂದು ಜರ್ಮನ್ ರಾಯಭಾರಿ ಅರಿತು ಕೊಂಡ. ದೊರೆಯಿಂದ ವಿಪುಲ ಪುರಸ್ಕಾರವನ್ನು ಪಡೆಯುವೆನೆಂಬ ಅವನ ಎಣಿಕೆ ಭರವಸೆಗಳು ಬಯಲಾಗುವುದನ್ನು ನೆನೆದು ಅವನ ಹೊಟ್ಟೆಯಲ್ಲಿ ಸಿಟ್ಟುರಿಯಿತು. ಎಷ್ಟು ಪ್ರಯತ್ನಿಸಿದರೂ ಅದನ್ನು ನಿಗ್ರಹಿಸಲಾಗಲಿಲ್ಲ. ಕ್ರೋಧಕಂಪಿತ ಸ್ವರದಲ್ಲಿ ಅವನೆಂದ : "ಯುವರಾಜರೆ, ತಾವು ಹೇಳಿದ್ದೆಲ್ಲ ಸತ್ಯವೆಂದು ನನಗೆನ್ನಿಸುವುದಿಲ್ಲ. ಪ್ರಜಾಶಕ್ತಿಗೆ ತಾವು ಹೆದರಿದ್ದೀರಿ ; ಎಂತಲೇ ರಾಜಸಿಂಹಾಸನವು ಉರುಳುವುದೆಂದು, ರಾಜನ ಜೀವಕ್ಕೆ ವಿಪತ್ತುಂಟೆಂದು ವಾದಿಸುತ್ತಿರುವಿರಿ. ತಮ್ಮಿಲ್ಲಿ ಅನುಮಾನ ಭ್ರಮೆ ; ವಸ್ತುಸ್ಥಿತಿ ನಿಶ್ಚಯಕ್ಕೂ ತಾವು ಭಾವಿಸಿದಷ್ಟು ಭಯಂಕರವಾಗಿಲ್ಲ. ಇಲ್ಲಿಯ ಒಕ್ಕಲಿಗರು, ದುಡಿಮೆ

ಗಾರರು ಉತ್ತೇಜಿತರಾದದ್ದು ಪ್ರಾಸಂಗಿಕವಷ್ಟೆ. ಸಾವಿರಾರು ಸುಶಿಕ್ಷಿತ ಸಶಸ್ತ್ರ ಸೈನಿಕರನ್ನು ಕಂಡರೆ ಅವರ ಹುರುಪು, ಅವರ ಆಸೆ ಇಂಗಿಹೋಗುವವು. ಅವರು ಓಡಿ ಹೋಗಲೂ ಮುಂಗಾಣದೆ ಹೋಗುವರು. ಹೀಗಿದ್ದೂ ಕೆಲಜನ ಪ್ರಜೆಗಳ ಭಯದಿಂದ ತಾವು ಸುತ್ತಲೂ ಕತ್ತಲೆಯನ್ನು ಕಂಡು ಓಡಿಹೋದರೆ, ಅರಾಜಕರಾಜ್ಯವನ್ನು ಪ್ರಜೆಗಳಿಗೊಪ್ಪಿಸಿ ಶರಣೆನ್ನುತ್ತಿದ್ದರೆ ನಾನೇನೂ ಹೇಳಲಾರೆ. ಆದರೆ ಮಹಾರಾಜರನ್ನೂ ತಮ್ಮ ದಾರಿಗೆಳೆದು ಹೇಡಿಯೆನ್ನಿಸಲು ಏಕೆ ಉತ್ಸುಕರಾಗಿರುವಿರಿ? ಅವರು ತಮ್ಮ ಷಡ್ಯಂತ್ರದ ಸಹಾಯವನ್ನು ಹೊಂದಿ ರಾಜ್ಯತ್ಯಾಗ ಮಾಡಲು ಹೇಸುತ್ತಾರೆ; ಈ ಪ್ರಜಾ ವಿಪ್ಲವದಲ್ಲಿ ವೀರರಂತೆ ಅವಿಚಲರಾಗಿ ತಮ್ಮ ಕರ್ತವ್ಯವನ್ನು ನೆರವೇರಿಸುವುದೇ ಅವರಿಗಿಷ್ಟ. ಪಾರ್ಲಿಮೆಂಟ್ ಅಧಿವೇಶನ ಸೇರಿದ ಬಳಿಕ ಇಪ್ಪತ್ತುನಾಲ್ಕು ಗಂಟೆಗಳೊಳಗೇ ರಾಜನನ್ನು ಪದಚ್ಯುತಗೊಳಿಸುವ ಆಜ್ಞೆ ಹೊರಡಬಹುದು; ಆದರೆ ನಮ್ಮ ಸಂಕಲ್ಪದಂತೆ ಕಾರ್ಯ ಜರುಗಿದರೆ, ಅವರು ಆ ಆಜ್ಞೆಯನ್ನು ಉಪಸಂಹರಿಸಿಕೊಳ್ಳಬೇಕಾಗುವುದು; ಇಷ್ಟೇ ಅಲ್ಲ, ಇನ್ನೆಂದೂ ಇಂಥ ಸ್ಪರ್ಧೆಗೆ ಕೈಹಾಕುವುದಿಲ್ಲವೆಂದು ಆಣೆಮಾಡುವರು; ಪಶ್ಚಾತ್ತಾಪದಿಂದ ಕ್ಷಮೆಯನ್ನು ಯಾಚಿಸುವರು. ಈ ಅವರ ಕರುಣಾಜನಕ ದೃಶ್ಯ ನನ್ನ ಅಂತ ರ್ದೃಷ್ಟಿಗೆ ಸ್ಪಷ್ಟವಾಗಿ ಕಾಣುತ್ತಿದೆ. ಈ ಇಪ್ಪತ್ತುನಾಲ್ಕು ಗಂಟೆಗಳ ಅವಧಿಯಲ್ಲಿ ರಾಜಧಾನಿಯಲ್ಲಿ ಅರಾಜಕತೆ ಉಂಟಾಗಬಹುದು, ಶಾಸನಸೂತ್ರಗಳು ಹರಿದುಹೋಗಬಹುದು, ನಾನು ಇಲ್ಲೆನ್ನುವುದಿಲ್ಲ. ಆದರೆ ರಾಜನಿಗೆ ಯಾವ ಅಪಾಯವೂ ಒದಗದಂತೆ ನಾನು ತುಂಬ ಜಾಗೃತನಾಗಿರುತ್ತೇನೆ. ಅರಮನೆ ಸುರಕ್ಷಿತವಾಗಿರದಿದ್ದರೆ ನನ್ನ ಮನೆಯಲ್ಲಿ ಅವರಿಗೆ ಆಶ್ರಯ ಕೊಡುವೆ. ಅಲ್ಲಿಂದ ಅವರನ್ನು ಹೊರಗೆಳೆಯುವುದು ಪುಂಡರಿಗೆ ಸಾಧ್ಯವೇ ಇಲ್ಲ.''

ಜಾನ್ ಪಿಟರ್ಸ್ ಉಪೇಕ್ಷೆಯ ನಗೆ ನಕ್ಕು "ಸರಿ! ತಮ್ಮ ಮಾತನ್ನು ಕೇಳಿ ನನ್ನ ಜೀವ ತಣ್ಣಗಾಯಿತು. ಬರ್ಜಿಲಂಡಿನ ರಾಜನು ಪ್ರಜೆಗಳ ಭಯದಿಂದ ವಿದೇಶೀಯ ರಾಯಭಾರಿಯ ಮನೆಯಲ್ಲಿ ಅಡಗಿಕೊಳ್ಳುವುದು ಒಳ್ಳೇ ಸ್ವಾರಸ್ಯವಾದ ದೃಶ್ಯ! ರಾಜನಿಗೂ ಒಳ್ಳೇ ಗೌರವದ ಸಂಗತಿ! ಪ್ರಿನ್ಸ್ ಮಾಯೇಸ್, ನನ್ನ ಪರಿಹಾಸ್ಯಕ್ಕಾಗಿ ಕ್ಷಮಿಸಿರಿ. ತಮ್ಮ ಕನಸು ನನಸಾಗಲಾರದು, ತಮ್ಮ ಮೋಹ ಬೇಗನೆ ನಿರಸನವಾಗುವುದು, ಇದು ನಿಶ್ಚಯವೆಂದು

ತಿಳಿದುಕೊಳ್ಳಿರಿ. ತಾವು ಅನ್ಯರಿಂದ ಮೋಸಹೋಗಿದ್ದೀರೋ ಏನು ತಾವಾ-ಗಿಯೇ ಆತ್ಮವಂಚನೆ ಮಾಡಿಕೊಳ್ಳುತ್ತಿರುವಿರೋ ತಿಳಿಯದು. ಆದರಿದು ಕೆಲಜನ ಅಶಿಕ್ಷಿತ ಉನ್ಮತ್ತರ ಚಳವಳಿಯಲ್ಲವೆಂಬುದನ್ನು ನಿಃಸಂದೇಹ ನಾಗಿ ತಿಳಿದುಕೊಳ್ಳಿರಿ. ಸಮಗ್ರ ದೇಶದ ಜನಸಾಮಾನ್ಯರು ಒಕ್ಕೊರಳಿಂದ ನ್ಯಾಯವಾಗಿ ಶಾಸನಾಧಿಕಾರವನ್ನು ಕೇಳುತ್ತಿರುವರು. ಅವರ ಬೇಡಿಕೆ ಸಂಗತವೋ ಅಸಂಗತವೋ ಎಂಬ ಬಗ್ಗೆ ತಮ್ಮೊಡನೆ ವಾದಿಸುವ ಇಚ್ಛೆ ನನಗಿಲ್ಲ. ಈ ದೇಶದ ಜನಸಾಮಾನ್ಯರು ಕೆಲ ಜರ್ಮನ್ ಪಡೆಗಳನ್ನು ಕಂಡು ಅಂಜಿ ತಮ್ಮ ಸಂಕಲ್ಪದಿಂದ ಚ್ಯುತರಾಗಲಾರರೆಂದು ಮಾತ್ರ ನಾನು ಪಣಕಟ್ಟಿ ಸಾರಬಲ್ಲೆ. ಅವರು ತಮ್ಮ ಸ್ವಾತಂತ್ರ್ಯಕ್ಕಾಗಿ ಜೀವದ ಹಂಗು ದೊರೆದು ಕಾದುವರು. ಆದರಲ್ಲಿ ರಾಜ ಬೀದಿಗಳಲ್ಲಿ ನರರಕ್ತದ ಕಾಲುವೆ ಹರಿಯುವುದು. ನಮ್ಮ ತಾಯಿನಾಡು ಮಾನವರಕ್ತದಿಂದ ಕಲುಷಿತವಾಗ ದಂಥ, ವ್ಯರ್ಥ ಜನಕ್ಷಯವಾಗದಂಥ ಉಪಾಯವನ್ನೇ ನಾನು ಸೂಕ್ತವೆಂದು ಅವಲಂಬಿಸಿದ್ದೇನೆ; ಅದನ್ನೇ ನಮ್ಮ ಕಕ್ಕನಿಗೆ ಅರಿಕೆ ಮಾಡಿಕೊಳ್ಳುತ್ತಿದ್ದೇನೆ."

ರಾಜನು ಹತಾಶನಾದ. "ಜನಕ್ಷಯವನ್ನು ನೀನೆಂತು ತಪ್ಪಿಸುವೆ? ನನ್ನ ಸಂಕಲ್ಪವನ್ನು ಹೇಗೆ ಪ್ರತಿಬಂಧಿಸುವೆ?" ಎಂದು ಕ್ಷೀಣಸ್ವರದಲ್ಲಿ ಕೇಳಿದ.

"ಇಲ್ಲಿನ ವಿದ್ಯಮಾನವನ್ನೆಲ್ಲ ಯುರೋಪಿನ ಎರಡು ಸರ್ವಶ್ರೇಷ್ಠ ವ್ಯಕ್ತಿ ಗಳ ನಿದರ್ಶನಕ್ಕೆ ತಂದುಕೊಟ್ಟಿದ್ದೇನೆ. ಅವರು ನನ್ನ ಸೂಚನೆಯನ್ನು ಸಮರ್ಥಿ ಸಿದ್ದಾರೆ. ಅವರು ಜರ್ಮನಿಯನ್ನು ಈ ಅನಧಿಕಾರಚರ್ಚೆ ಮಾಡುವುದಕ್ಕೆ ಸರ್ವಥಾ ಬಿಡಲಿಕ್ಕಿಲ್ಲ. ಒಬ್ಬ ಜರ್ಮನ್ ಸೈನಿಕನೂ ನಮ್ಮ ರಾಜ್ಯದ ಗಡಿಗೆರೆ ಯನ್ನು ದಾಟಿ ಒಳಗೆ ಕಾಲಿಕ್ಕಲಾರ. ಈ ವರ್ತಮಾನವನ್ನು ಇಡೀ ಯುರೋ ಪಿನಲ್ಲಿ ಬಾನುಲಿ ಸಾರುವುದು ಉತ್ತರಸಾಗರದಲ್ಲಿ ಆಂಗ್ಲ ನೌಸೇನೆ, ಫ್ರಾನ್ಸಿನ ಉತ್ತರಭಾಗದಲ್ಲಿ ಫ್ರೆಂಚ್ ಭೂಸೇನೆ ಸಜ್ಜಾಗಿ ನಿಂತಿವೆ. ಜರ್ಮನಿ ನಮ್ಮ ರಾಜ್ಯದಲ್ಲಿ ತನ್ನ ದಂಡನ್ನು ಮುಂದೊತ್ತಿದರೆ ಇಂಗ್ಲಂಡ್ ಫ್ರಾನ್ಸುಗಳೊಡನೆ ಕಾದಾಡಬೇಕಾಗುವುದು. ಅಷ್ಟು ಬಲ-ಸಾಹಸ ಜರ್ಮನಿಯಲ್ಲಿದೆಯೋ ಇಲ್ಲವೋ ನಾನರಿಯೆ. ಯುದ್ಧಕ್ಕೆ ಅದು ಸಿದ್ಧವಿದೆಯೋ ಇಲ್ಲವೋ ಎಂಬು ದನ್ನು ಹೇಳಲಾರೆ."

ಜಾನ್ ಪಿಟರ್ಸನ ಮಾತುಗಳನ್ನು ಕೇಳಿ ರಾಜ ಪ್ರಿನ್ಸ್ ಇಬ್ಬರೂ ಎಷ್ಟೋ ಹೊತ್ತು ನೀರವರಾಗಿದ್ದರು. ಕೊನೆಗೆ ಪ್ರಿನ್ಸ್‌ಸುಯೆ.ಸ್ ಆಸನ ದಿಂದೇಳುತ್ತ ನುಡಿದ: " ಮಹಾರಾಜ, ತಾವು ಸಂಕಟದಲ್ಲಿರುವುದನ್ನರಿತು ತಮಗೆ ಸಹಾಯಮಾಡಲು ನಾನು ತುಂಬ ಪ್ರಯತ್ನಪಟ್ಟೆ. ತಮಗೆ ನಾನು ಮಾತು ಕೊಟ್ಟಿದ್ದೆ; ಅದನ್ನು ಪಾಲಿಸುವುದಕ್ಕಾಗಿ ಶಕ್ತಿಮೀರಿ ಹೆಣಗುತ್ತಿದ್ದೆ; ಆದರೆ ನೋಡಿ. ನಿಮ್ಮಲ್ಲೇ ತಾಳಮೇಳವಿಲ್ಲ. ಇನ್ನೆನಾಗುವುದೋ ಹೇಳ ಲಾರೆ; ತಮ್ಮ ರಕ್ಷಣೆಯ ಭಾರವನ್ನು ಹೊರುವುದಿನ್ನು ನನ್ನಿಂದ ಸಾಧ್ಯವಿಲ್ಲ. ನಮ್ಮ ದೊರೆ ಸಂಗತವೆಂದು ಸೂಚಿಸಿದಂತೆಯೇ ನಾನು ನಡೆಯುವವನು. ತಮಗೆ ಅಪಾಯಸಂಭವಿಸಿದರೆ, ಆದಕ್ಕೆ ತಮ್ಮ ಮಗನೇ ಹೊಣೆಗಾರ; ನನ್ನ ಮೇಲೆ ಮಾತಿಲ್ಲ.

ಜರ್ಮನ್ ರಾಯಭಾರಿಗೆ ಏನೊಂದೂ ಉತ್ತರವೀಯದೆ ರಾಜನು ಹತಾಶನಾಗಿ ತಲೆತಗ್ಗಿಸಿಕೊಂಡು ಚಿಂತಿಸುತ್ತ ಕುಳಿತುಬಿಟ್ಟ. ಈಗ ಅವನ ಕ್ರೋಧವು ಹಿಂದಾಗಿ ದಾರುಣಭಯವು ಹೃದಯವನ್ನು ಕೊರೆಯತೊಡಗಿತು.

ಜಾನ್ ಪಿಟರ್ಸ್ ಧೀರಭಾವದಿಂದ ನುಡಿದ: " ನಾನು ಮಾಡಿದ್ದಕ್ಕೆ ನಾನೇ ಹೊಣೆ ಮುಂದಿನ ಇತಿಹಾಸಕಾರರು ಈ ದೇಶದ ಇತಿಹಾಸವನ್ನು ಬರೆಯುವಾಗ, ಸ್ವದೇಶಹಿತಕ್ಕಾಗಿಯೇ ನನ್ನ ಸ್ವಾರ್ಥಕ್ಕೆ ತಿಲಾಂಜಲಿಯಿತ್ತು ದಲ್ಲದೆ, ಕಕ್ಕನ ಸ್ವಾರ್ಥಕ್ಕೂ ವಿರೋಧಿಯಾಗಿ ನಿಂತೆನೆಂದು ಮನವಾರೆ ಉಲ್ಲೇ ಖಿಸುವರು. ಈ ದೇಶದ ರಾಜರಾದ ತಾವು ರಾಜಧರ್ಮವನ್ನು ಮರೆತು ಆಳಿದ ಆಳಿಕೆಯನ್ನು ಪ್ರಜೆಗಳ ಹೃದಯದಲ್ಲಿ ಅಶಾಂತಿಯ—ಅಸಂತೋಷದ ದಾವಾ ನಲವನ್ನುಕೈಯಾರೆ ಹೊತ್ತಿಸಿದ ತಮ್ಮ ಕೀರ್ತಿಯನ್ನು ಇತಿಹಾಸಕಾರರು ಬರೆಯು ದಿರಲಾರರು, ನಿಜ. ಆದರೆ ಪ್ರಾಣಭಯದಿಂದ ವಿದೇಶೀಯ ರಾಯಭಾರಿಯ ಮನೆಯಲ್ಲಿ ತಲೆಮರಸಿಕೊಂಡರೆಂಬ ಅಸಹ್ಯಅಪವಾದದಿಂದ ತಮ್ಮನ್ನು ನಾನು ಉಳಿಸಿದ್ದೇನೆ; ತಾವು ಏನೇ ಭಾವಿಸಿದರೂ ನನಗೆ ಭೂಷಣಾಸ್ಪದ ವೆಂದೇ ಹೆಮ್ಮೆಪಡುತ್ತೇನೆ. ನಾನು ನನ್ನ ಕಕ್ಕನನ್ನು ಈ ಕಲಂಕಕ್ಕೆ ಈಡು ಮಾಡಲಾರೆ. ತಾವು ನನ್ನ ಸಲಹೆಯಂತೆ ಆಚರಿಸಿರಿ. ಸಾವಿಗಂಜಿ ಹೆರವರ ಬೆನ್ನ ಹಿಂದೆ ಅವಿತುಕೊಳ್ಳಬೇಡಿರಿ. ತಮಗೆ ಮುಪ್ಪು ಬಂದಿದೆ; ಇನ್ನು ಹೆಚ್ಚು

ಕಾಲ ಅರಸುತನವನ್ನು ಅನುಭವಿಸುವ ಅವಕಾಶವಿಲ್ಲ. ತಾವು ಅರಮನೆಯಲ್ಲಿಯೇ ಇದ್ದು, ಪ್ರಜಾಪ್ರತಿನಿಧಿಸಭೆಯಿಂದ ಬರುವ ಆದೇಶಕ್ಕೆ ಧೀರತೆಯಿಂದ ಉತ್ತರ ಕೊಡಿರಿ; ಹೇಡಿಯಂತೆ ವಿಹ್ವಲರಾಗಬೇಡಿರಿ. ಯುದ್ಧದ ಪ್ರಸಂಗವಿದ್ದರೆ ನಾವೂ ಯುದ್ಧಮಾಡುವೆವು. ತಮಗಾಗಿ ಅಥವಾ ನನಗಾಗಿ ಜರ್ಮನಿ ಯುರೋಪಿನ ಎರಡು ಬಲಿಷ್ಠರಾಷ್ಟ್ರಗಳೊಡನೆ ಹಗೆತನವನ್ನು ಎದುರಿಸುವುದೆಂದು ತಾವು ಎಣಿಸಬೇಡಿರಿ; ಜರ್ಮನಿ ಅಷ್ಟು ತಿಳಿಗೇಡಿಯಲ್ಲ."

ಕೋಣೆಯಿಂದ ಹೊರಹೊರಡುತ್ತಾ ಜರ್ಮನ್ ರಾಯಭಾರಿ ತಿರುಗಿ ನೋಡಿ "ತಾವು ಮಾಡುವುದನ್ನು ನಾನೂ ನೋಡುತ್ತೇನೆ." ಎಂದೆನ್ನುತ್ತ ಹೊರಟುಹೋದ.

೩೪

ಜರ್ಮನ್ ರಾಯಭಾರಿ ತೆರಳಿದ ಬಳಿಕ ಕೊಂಚ ಸಮಯದಲ್ಲಿ ಪೋಲಿಸ್ ಪೇದೆಯೊಬ್ಬ ಬಂದು, "ಮಹಾರಾಜ, ಕಮಿಶ್ನರ್ ಸಾಹೇಬರು ಒಂದು ಕ್ಷಣ ತಮ್ಮ ದರ್ಶನವನ್ನು ಬಯಸುತ್ತಾರೆ" ಎಂದು ನಿವೇದಿಸಿದ.

ರಾಜನು ಹೂಂ ಉಂಹೂ ಏನೂ ಹೇಳದೆ ಶೂನ್ಯದೃಷ್ಟಿಯಿಂದ ಪೇದೆಯನ್ನೇ ನೋಡತೊಡಗಿದ. ಪ್ರಕೃತ ಸಂದರ್ಭದಿಂದ ಅವನ ಬುದ್ಧಿಯೆ ಸ್ತಬ್ಧವಾಗಿತ್ತು. ಯುವರಾಜನು ಕಕ್ಕನಿಗೆಂದ: "ವಿಪತ್ತಿನ ಭಯದಿಂದ ತಮಗೆ ಬಲವಾದ ಆಘಾತವಾದಂತಿದೆ. ಡಾ. ಶಿಸ್ಸರನ್ನು ಕರೆಸಿ ಉಪಚಾರ ಮಾಡಿಸುತ್ತೇನೆ. ತಾವಿನ್ನು ರಾಜಕಾರ್ಯದಿಂದ ಪೂರ್ಣ ವಿಶ್ರಾಂತಿ ಪಡೆಯಿರಿ. ಎಲ್ಲವನ್ನೂ ನಾನು ನೋಡಿಕೊಳ್ಳುತ್ತೇನೆ."

ಜಾನ್ ಪಿಟರ್ಸ್ ಬರ್ನಾರ್ಡನ ಕಡೆಯಿಂದ ಬಂದ ಪೇದೆಯನ್ನೇ ಡಾಕ್ಟರನ್ನು ಕರೆಯಲಟ್ಟಿದ. ಡಾಕ್ಟರೂ ತಡವಿಲ್ಲದೆ ಬಂದುಬಿಟ್ಟ. ಜಾನ್ ಆತನಿಗೆ ಹೇಳಿದ: "ಡಾಕ್ಟರ್, ಮಹಾರಾಜರು ಅತಿಶ್ರಮದಿಂದ, ಹೆಚ್ಚಾಗಿ ಮಾನಸಿಕ ಪರಿತಾಪದಿಂದ ಬಳಲುತ್ತಿದ್ದಾರೆ. ಅವರಿಗೆ ಉಪಚಾರದ ಅಗತ್ಯವಿದೆಯೆಂದು ತೋರುತ್ತದೆ. ನಾನೀಗ ಹೋಗಿ ಬರುತ್ತೇನೆ. ಅವರಿಗೆ ನೀವು ಇವರ ಹತ್ತಿರವೇ ಇರ್ರಿ."

ವಾಚನಮಂದಿರದಿಂದ ಹೊರಬರುತ್ತಲೆ ಜಾನ್ ಪಿಟರ್ಸ್‌ನಿಗೆ ಬರ್ನಾರ್ಡನ ದರ್ಶನವಾಯಿತು. ಬರ್ನಾರ್ಡ್ ವ್ಯಸ್ತನಾಗಿ ನುಡಿದ: "ಯುವ

ರಾಜ, ಅರಮನೆಯಲ್ಲಿ ಸೇರಿದ ನಿವಂತ್ರಿತ ಸದ್ಗೃಹಸ್ಥರನ್ನು ಇಲ್ಲಿ ಇನ್ನೊಂದು ಕ್ಷಣವೂ ಇಟ್ಟುಕೊಳ್ಳುವುದು ಕ್ಷೇಮಕರವಲ್ಲ. ನಗರದ ನಾಲ್ಕೂ ಕಡೆಗಳಿಂದ ನಿಮಿಷನಿಮಿಷಕ್ಕೂ ಸುದ್ದಿಗಳು ಬರುತ್ತಿವೆ. ಪೋಲೀಸರು ಎಷ್ಟು ಪ್ರಯತ್ನಿಸಿದರೂ ಪರಿಸ್ಥಿತಿ ಅವರ ಕೈಮೀರುತ್ತದೆ. ಅರಮನೆಯ ಮುಂದಿನ ಬಯಲು ಜನರಿಂದ ತುಂಬಿಹೋಗಿದೆ; ಅನೇಕ ಕ್ರಾಂತಿಕಾರರು ಗುಂಪು ಗುಂಪಾಗಿ ಪಂಜುಗಳನ್ನು ಹಿಡಿದುಕೊಂಡು ರಾಷ್ಟ್ರಗೀತಗಳನ್ನು ಹಾಡುತ್ತ ತಿರುಗಾಡುತ್ತಿದ್ದಾರೆ. ಅರಮನೆಯಿಂದ ಎರಡು ಮೋಟರುಗಳು ಜನರನ್ನು ಪಾರುಮಾಡುವುದಕ್ಕಾಗಿ ಕರೆದುಕೊಂಡು ಹೊರಟಿದ್ದವು. ಚಳವಳಿಗಾರರು ಅವೆರಡನ್ನೂ ಪ್ರತಿಬಂಧಿಸಿದ್ದಾರೆ. ಜನತೆಗುಂಟಾದ ಭೀತಿಗೆ ಮಿತಿಯೆ ಇಲ್ಲ. ಯಾವಾಗ ಏನಾಗುವುದೋ ಹೇಳುವುದು ಕಠಿನ "

ಕ್ಷಣಹೊತ್ತು ನಿಃಸ್ತಬ್ಧವಾಗಿದ್ದು ಜಾನ್ ಪಿಟರ್ಸ್ "ನೀವು ನನ್ನೊಡನೆ ಬರ್ರಿ." ಎಂದ.

ಜಾನ್ ಪಿಟರ್ಸ್ ಬರ್ನಾಡನನ್ನು ತನ್ನ ಕೋಣೆಗೆ ಕರೆದೊಯ್ದ. ಕೋಣೆಯ ಬಾಗಿಲನ್ನು ಇಕ್ಕಿ ಭದ್ರಗೊಳಿಸಿ ಟೆಲಿಫೋನ್ ಯಂತ್ರವನ್ನು ಎತ್ತಿ ಕಿವಿಗೆ ಹಿಡಿದ. ಆ ಕಡೆಯಿಂದ ಧ್ವನಿಬಂದಬಳಿಕ ಜಾನ್ ಕೇಳಿದ: "ಯಾರು ನೀವು ಗ್ರಾವೋ ?"

ಆಕಡೆಯ ಫೋನ್‌ಸಂಖ್ಯೆಯನ್ನು ನೋಡಿ, ಜಾನ್ ಕೂಗಿದ ಹೆಸರನ್ನು ಕೇಳಿ ಬರ್ನಾರ್ಡ್ ಪರಮಾವಧಿವಿಸ್ಮಯದಿಂದ ಸ್ತಂಭಿತನಾದ.

"ಹೌದು, ತಾವು ಯಾರು ?"

"ಧ್ವನಿಯಿಂದ ತಿಳಿಯಲಿಲ್ಲವೆ ? ನಾನು ಹಲವು ಸಲ ತಮ್ಮ ಹತ್ತಿರವೇ ಕುಳಿತುಕೊಂಡು ಮಂತ್ರಾಲೋಚನೆ ಮಾಡಿದ್ದೇನೆ ಅರಮನೆ ಈಗ ಆಮಂತ್ರಿತರಿಂದ ತುಂಬಿದೆ ; ಕ್ರಾಂತಿಕಾರರು ಬೀದಿಗಳಲ್ಲಿ ಗಲಭೆಯನ್ನಾರಂಭಿಸಿದ್ದಾರೆ; ಆದರಿಂದ ನೆರೆದ ಜನರೆಲ್ಲ ಭಯಭೀತರಾಗಿದ್ದಾರೆ. ಅವರಿಗೆ ಅರಮನೆಯಿಂದ ಹೊರಡುವುದು ಸಾಧ್ಯವಿಲ್ಲದಾಗಿದೆ. ನಿಮ್ಮ ಅಧೀನದಲ್ಲಿ ಇಪ್ಪತ್ತು ಸಾವಿರ ಸಶಸ್ತ್ರಜನ ಯುದ್ಧಸನ್ನದ್ಧರಾಗಿದ್ದಾರೆ; ಜರ್ಮನ್ ಸೀಮೆಯ ಕಡೆ ಹೊರಡಲು ಅಪ್ಪಣೆಗಾಗಿ ಕಾದಿದ್ದಾರೆ—ಅದು ನನಗೆ ಗೊತ್ತಿದೆ. ಆದರೆ ಅವರಿನ್ನು ಗಡಿನಾಡಿಗೆ ಹೋಗುವ ಅಗತ್ಯವಿಲ್ಲ. ಅಲ್ಲಿ ಮಾಡಬೇಕಾದ ವ್ಯವ

ಸ್ಥೆಯನ್ನು ನಾನು ಮಾಡುತ್ತೇನೆ. ಜರ್ಮನಿಯನ್ನು ಒಂದು ಹೆಜ್ಜೆ ಕೂಡ ಮುಂಬರಿಯಲಾರದು. ನನ್ನ ಮಾತಿನಲ್ಲಿ ತಮಗೆ ಭರವಸೆಯುಂಟಷ್ಟೆ ?"

"ತಮ್ಮ ಎಲ್ಲ ಮಾತುಗಳಲ್ಲಿಯೂ ನಮಗೆ ಭರವಸೆಯಿದೆ."

"ಹಾಗಾದರೆ ನಾನು ಹೇಳಿದಂತೆ ಮಾಡಿರಿ. ನೀವು ಸ್ವತಃ ಆ ಎಲ್ಲ ಜನರ ಮುಂದಾಳುತನವನ್ನು ವಹಿಸಿಕೊಂಡು, ನಗರದ ಸಿಂಹದ್ವಾರ ಮೊದಲು ಗೊಂಡು ಪ್ರತಿಯೊಂದು ಬೀದಿಯಲ್ಲಿಯೂ ಶಾಂತಿರಕ್ಷಣೆಯ ಕಾರ್ಯದಲ್ಲಿ ತೊಡಗಿರಿ. ವಿಪ್ಲವವಾದಿಗಳಿಂದ ಶಾಂತಿಭಂಗವಾಗಕೂಡದು ; ನಮ್ಮ ಯಾವ ಬಂಡಿಯನ್ನೂ ತಡೆಯಕೂಡದು. ನಿಮಂತ್ರಿತರನ್ನು ಸುರಕ್ಷಿತವಾಗಿ ಅವರ ವರ ಮನೆಗೆ ಹೋಗಗೊಡಿರಿ. ಏನು, ಆದೀತೆ ?"

ನಿಶ್ಚಯವಾಗಿ ಆಗುವುದು. ಒಂದು ಗಂಟೆಯೊಳಗೇ ನಗರದಲ್ಲಿ ಎಲ್ಲೆಲ್ಲಿಯೂ ದಂಗೆಯಡಗುವುದು. ತಾವು ನಿಶ್ಚಿಂತರಾಗಿರಿ." ಎಂದು ಹೇಳಿದ ಗ್ರಾವೋ.

"ಗ್ರಾವೋ, ನೀವೊಳ್ಳೇ ಬುದ್ಧಿಶಾಲಿಗಳು. ಇನ್ನು ಮೇಲೆ ನನ್ನ ನಿಮ್ಮ ಭೆಟ್ಟಿಯಾದೀತೋ ಇಲ್ಲವೋ ;— ನನ್ನ ಕೊನೆಯ ಮಾತು ಲಕ್ಷ್ಯದಲ್ಲಿ ರಲಿ. ರಕ್ತಪಾತ ಮಾಡಕೂಡದು. ನಾವು ಇಡೀ ವಿಶ್ವಕ್ಕೇ ಮೇಲ್ಪಂಕ್ತಿ ಹಾಕಿಕೊಡಲು ಉದ್ಯುಕ್ತರಾಗಿದ್ದೇವೆ. ಮನುಷ್ಯ ಜೀವನವು ಪರಮಪವಿತ್ರ ವಾದದ್ದು. ಸ್ವಾತಂತ್ರ್ಯದಂತೆಯೇ ಅದನ್ನು ಜತನದಿಂದ ರಕ್ಷಿಸಬೇ ಇದನ್ನು ವಿಪ್ಲವವಾದಿಗಳಿಗೆ ತಿಳಿಸಿಹೇಳಿರಿ. ದಂಗೆಗಾರರನ್ನು, ಅಕಾರಣವಾಗಿ ಯಾರನ್ನಾದರೂ ಕೊಲ್ಲಲುಜ್ಜುಗಿಸುವರನ್ನು ಹಿಡಿದು ಕಠೋರವಾಗಿ ಶಿಕ್ಷಿಸಿರಿ. ನಿಮ್ಮ ನಂಬಿಗೆಗೆ ತಕ್ಕವರ ಕೈಯಲ್ಲಿಯೇ ನಗರರಕ್ಷಣೆಯ ಹೊಣೆಯನ್ನು ಒಪ್ಪಿಸಿರಿ. ನಾವು ರಾಜ್ಯದ ಶಾಸನಪ್ರಣಾಲಿಯನ್ನು ಬದಲಿಸುವುದು ಸತ್ಯವೆ. ಆದರದನ್ನು ರಕ್ತಪಾತವಿಲ್ಲದೆಯೆ ಸಾಧಿಸಬೇಕು. ಇದೇ ನಮ್ಮ ಮೂಲ ಮಂತ್ರ" ಎಂದು ಜಾನ್ ಪಿಟರ್ಸ್ ಟೆಲಿಫೋನ್ ಯಂತ್ರವನ್ನು ಕೆಳಗಿರಿಸಿದ.

ಕಿರಿದಂತರದಲ್ಲಿ ಬರ್ನಾರ್ಡ್ ನಿಂತಿದ್ದ. ಅವನು ಪಿಟರ್ಸನ ಎಲ್ಲ ಮಾತು ಗಳನ್ನು ಕೇಳಿದ. ತನ್ನ ಕಿವಿಯಮೇಲೆಯೆ ತನಗೆ ನಂಬಿಗೆಯಿಲ್ಲದಂತಾಯಿತು ಅವನ ಸ್ಥಿತಿ; ಸಭಯವಿಸ್ಮಯದಿಂದ ಅವನ ಜ್ಞಾನವೇ ಲುಪ್ತವಾದಂತಾಯಿತು. ಎಷ್ಟೋ ಹೊತ್ತು ಬರ್ನಾರ್ಡನ ಬಾಯಿಂದ ಮಾತೇ ಹೊರಡಲಿಲ್ಲ. ಕೊನೆಗೆ

ಅಸ್ಫುಟಸ್ವರದಲ್ಲಿ ಅವನೆಂದ: "ತಿಳಿಯಿತು; ಎಲ್ಲವೂ ಇಗ ಗೊತ್ತಾಯಿತು. ಅದ್ಭುತ, ಅತ್ಯದ್ಭುತ, ಈವರೆಗೆ ಇದು ನನ್ನ ಕಲ್ಪನೆಯಲ್ಲಿಯೂ ಬಂದಿರಲಿಲ್ಲ."

ಜಾನ್ ಪಿಟರ್ಸ್ ನಸುನಗುತ್ತ ನುಡಿದ: "ಬಹಳ ದಿನಗಳಿಂದ ನನ್ನಲ್ಲಿ ನಿಮಗೆ ಸಂದೇಹವುಂಟಾಗಿತ್ತು. ಒಮ್ಮೆಯಂತೂ ನಾನು ನಿಮ್ಮ ಕೈಗೆ ಸಿಕ್ಕೇ ಬಿಟ್ಟಿದ್ದೆನೆನ್ನಿರಿ; ಅತಿಚಾತುರ್ಯದಿಂದ ನಿಮ್ಮ ಬಲೆಯನ್ನು ತಪ್ಪಿಸಿಕೊಂಡೆ."

"ನನ್ನನ್ನು ತಾವು ಮೋಸಗೊಳಿಸಿದಿರಿ. ಆದರೆ ಈ ಜನಗಳನ್ನೂ— ಗ್ರಾಮೋ, ಲೆವ್ಹಿಟ್, ಅಧ್ಯಾಪಕ ಆದಿ ಸರ್ವವಿಪ್ಲವವಾದಿಗಳನ್ನೂ—ವಂಚಿಸಿದ್ದೀರಾ? ಅವರಿಗೂ ತಮ್ಮ ಗುರುತು ಸಿಕ್ಕಿಲ್ಲವೆ?"

"ಇಲ್ಲ. ಅವರು ಯಾರೂ ನನ್ನನ್ನು ಈವರೆಗೂ ಗುರುತಿಸಿಲ್ಲ. ನನಗೆ ಈ ಕೆಲಸ ಅಷ್ಟೊಂದು ಕಠಿನವಾಗಿರಲಿಲ್ಲ ಏಕೆಂದರೆ ನಾನು ಬರೆಹದ ಮೂಲಕ ಮಾತ್ರ ಅವರ ಮುಂದಾಳಾಗಿರುವೆ. ಅವರಲ್ಲಿ ಯಾರೂ ಈ ವರೆಗೆ ನನ್ನ ಮೋರೆಯನ್ನು ನೋಡಿಲ್ಲ. ನಾನು ಬೇರೆ ಬೇರೆ ದನಿಗಳಲ್ಲಿ ಮಾತನಾಡಬಲ್ಲೆ ಅದರಿಂದ ನನ್ನ ದನಿಯ ಗುರುತೂ ಅವರಿಗೆ ಹತ್ತಲಿಲ್ಲ ವಿಶೇಷವಾಗಿ ನಾನು ಈ ರಾಜ್ಯದ ಯುವರಾಜ, ನನ್ನ ಹೆಸರು ಕಲಂಕಿತವಾಗಿದೆ, ಮನುಷ್ಯನಲ್ಲಿ ಎಷ್ಟು ಪ್ರಕಾರದ ಪಾಪ-ದೌರ್ಬಲ್ಯಗಳು ಇರಲು ಸಾಧ್ಯವೋ ಅವೆಲ್ಲವೂ ನನ್ನಲ್ಲಿವೆ ಎಂದು ಪ್ರಖ್ಯಾತಿಯಿದೆ; ಹಾಗೆ ಮನಃಪೂರ್ವಕವಾಗಿ ನಂಬುವ ಆ ಜನಗಳು ವಂಚಿತರಾಗುವುದು ಸಹಜ. ತಮ್ಮ ದೇಶದ ಉದ್ಧಾರಕ್ಕಾಗಿ ತಮ್ಮ ನೇತೃತ್ವವನ್ನು ವಹಿಸಿಕೊಂಡವನು ಅಂಥ ಮನುಷ್ಯನೆಂದು ಅವರು ಹೇಗೆ ನಂಬುವರು?"

"ಅದ್ಭುತ, ಆಶ್ಚರ್ಯಕರ, ನಂಬತಕ್ಕಮಾತಲ್ಲ." ಎಂದ ಬರ್ನಾರ್ಡ್.

ಬರ್ನಾರ್ಡನ ಹೆಗಲಮೇಲೆ ಕೈಯಿರಿಸಿ ಜಾನ್ ಪಿಟರ್ಸ್ ನಸುನಗೆಯೊಂದಿಗೆ ಮಾತನಾಡಿದ: "ಮಿತ್ರರೆ, ಪ್ರಪಂಚದಲ್ಲಿ ಅದ್ಭುತವಾದದ್ದು ನಂಬಬಾರದ್ದು ಯಾವುದೂ ಇಲ್ಲ. ಆದರೂ ಪೃಥ್ವಿಯಲ್ಲಿಯ ಎಷ್ಟೋ ನಿತ್ಯ ನೈಮಿತ್ತಿಕ ವ್ಯಾಪಾರಗಳೇ ಅಸಂಭವವೆಂದು, ಅತ್ಯಾಶ್ಚರ್ಯಕರವೆಂದು ಎನಿಸುತ್ತವೆ."

ಬರ್ನಾರ್ಡ್ ಎಂದ: "ಇರಬಹುದು. ಆದರೆ ನಿಮ್ಮ ಮೂರ್ತಿಗಳು ಎರಡುಂಟೊ? ಎರಡು ಮೂರ್ತಿಗಳಿಲ್ಲದಿದ್ದರೆ, ಒಂದೇ ಸಮಯದಲ್ಲಿ ಬೇರೆ

ಪುನಃ ವಾದ್ಯಗಳ ವಾದನ ಆರಂಭವಾಯಿತು. ಎಲ್ಲ ನರನಾರಿಯರು ವಾದ್ಯಸ್ವರದಿಂದ ಆನೋದದ ಪ್ರಮೋದ ಕಡೆ ಆಕರ್ಷಿತರಾದರು. ಯುವ-ರಾಜನು ಕುಮಾರಿ ಹೋಲ್ಡ್ಳ ಕೈಹಿದು ಕುಣಿಯಲಾರಂಭಿಸಿದುದನ್ನು ಕಂಡು ಮನದ ಗಾಬರಿಯನ್ನು ಬಿಟ್ಟು ಕುಣಿಯತೊಡಗಿದರು.

ಯುವರಾಜನು ನೃತ್ಯವನ್ನು ಮುಗಿಸಿದ ಬಳಿಕ ಕುಮಾರಿಯನ್ನು ಅವಳ ತಾಯಿಯ ಹತ್ತಿರ ಕಳಿಸಲು ಹೋಗುತ್ತ ಮೆಲುದನಿಯಲ್ಲಿ ನುಡಿದ: "ಸುಂದರಿ, ಇನ್ನು ಕೆಲದಿನಗಳಲ್ಲಿಯೆ ಬರ್ಜಿಲಂಡಿನಲ್ಲಿ ನನ್ನ ಅಸ್ತಿತ್ವವುಳಿಯುವುದಿಲ್ಲ.— ಅದನ್ನು ನೀನು ಅರಿತುಕೊಂಡಿರುವೆಯಷ್ಟೆ? ಜನರ ನೆನಪಿನಲ್ಲಿ ಮಾತ್ರ ಉಳಿಯುವೆ. ನಾನು ನಿನ್ನೊಡನೆ ಎರಡು ದಿನ ಆದಿನವೊಮ್ಮೆ ಇಂದೊಮ್ಮೆ ಕುಣಿದಿದ್ದೇನೆ. " ಈ ಎರಡು ದಿನಗಳು ನಿನ್ನ ಸ್ಮರಣೆಯಿಂದ ಅಳಿಸುವುದಿಲ್ಲ-ವೆಂದು ನನ್ನ ಭಾವನೆ. ಎಂಥ ಸಂಕಟದಲ್ಲಿ ನನಗೀ ಕಾರ್ಯದಲ್ಲಿ ಸಹಾಯ ಮಾಡಿದ್ದೀ, ನನ್ನ ಮತ್ತು ನಮ್ಮ ದೇಶದ ಮಾನವನ್ನು ಕಾಯ್ದಿದ್ದೀ— ಇದಾವುದನ್ನೂ ನೀನು ಮರೆಯಲಿಕ್ಕಿಲ್ಲ."

ಯುವತಿಗೆ ಯಾವ ಉತ್ತರವನ್ನೂ ಕೊಡಲಾಗಲಿಲ್ಲ. ಕಾತರ ದೃಷ್ಟಿ-ಯಿಂದ ಯುವರಾಜನ ಕಡೆಗೊಮ್ಮೆ ನೋಡಿದಳು. ಅವಳನ್ನು ಅವಳ ತಾಯಿಗೊಪ್ಪಿಸಿ ಯುವರಾಜನು ಬೇರೆ ನಿಮಂತ್ರಿತರೊಡನೆ ಮಾತುಕತೆಯಾಡಲು ಹೊರಟು ಹೋದ. ಅಲ್ಲಿ ಬ್ಯಾರನ್ ಜನ್ಸರ್ಡರ ಮುದುಕ ತಾಯಿಯೂ ಇದ್ದಳು. ಯುವರಾಜನು ಅವಳಿಗೆಂದ: "ಒಂದು ಗಂಟೆಯೊಳಗಾಗಿ ಗಲಭೆ ಶಾಂತವಾಗುವುದು; ಜನರಿಗೆ ಅವರಿಂದ ಯಾವ ಕಷ್ಟನಷ್ಟಗಳೂ ಉಂಟಾ-ಗಲಾರದು; ಅವರ ದಲಪತಿ ಶೀಘ್ರವೇ ಅವರಿಗೆ ಬುದ್ಧಿ ಹೇಳುತ್ತಾನೆ, ಕ್ರಾಂತಿಕಾರರು ಇಲ್ಲಿ ನೆರೆಯುವುದರಿಂದ ಆಮಂತ್ರಿತರಿಗೆ ಭಯವಾಗುತ್ತಿದೆ, ಅದಕ್ಕಾಗಿ ಅವರು ಇಲ್ಲಿಂದ ಜೊರಟುಹೋಗುವುದಗತ್ಯವೆಂದು ಸಲಹೆ ಕೊಡುತ್ತಾನೆ ಎಂದು ಮೊದಲೇ ಹೇಳಿದ್ದ." ಬಳಿಕ ಸ್ತ್ರೀಯರಿಗೆಲ್ಲ "ತಾವಿನ್ನು ನಿರ್ಭಯರಾಗಿ ಮನೆಗೆ ಹೋಗಬಹುದು; ದಾರಿಯಲ್ಲಿ ಯಾರೂ ತಮ್ಮ ಮೇಲೆ ಕೈಮಾಡುವುದಿಲ್ಲ." ಎಂದು ಅಭಯಪೂರ್ವಕವಾಗಿ ಹೇಳಿ, ಪುರುಷರಿಗೆ "ಮಹಾಶಯರೇ, ಇನ್ನು ತಮ್ಮ ಯಾರ ಊಟವೂ ಆಗಿಲ್ಲವೆಂದು

ತೋರುತ್ತದೆ; ಭೋಜನಾಲಯದಲ್ಲಿ ಪದಾರ್ಥಗಳು ಹಾಗೆಯೆ ಒಟ್ಟಿವೆ; ಅದನ್ನು ಮರೆತು ತಾವು ಹಾಗೇ ಹೋಗುವಂತಿಲ್ಲ." ಎಂದು ನುಡಿದ.

ಸ್ವಲ್ಪ ದೂರದಲ್ಲಿ ಗ್ರೇಸ್ ಕೆಲ ಜನರೊಂದಿಗೆ ನಿಂತಿದ್ದಳು. ಯುವ-ರಾಜನು ಅವಳ ಬಳಿಹೋದ. ಅವನನ್ನು ಕಂಡು ಉಳಿದವರೆಲ್ಲ ತೊಲಗಿದರು. ಜಾನ್ ಪಿಟರ್ಸ್ ಮೃದುಸ್ವರದಲ್ಲಿ ಗ್ರೇಸಳಿಗೆಂದ. 'ಹಸಿವು ಹಿಂಗುವ ಮೊದಲೇ ನಾನು ಊಟವನ್ನು ಬಿಟ್ಟೆದ್ದು ಹೋದದ್ದು ನಿನಗೆ ನೆನಪಿರಬಹುದು ಎಂಥ ಕಳವಳದ ಸಂಗತಿ!"

ಗ್ರೇಸ್ ನಕ್ಕು "ಬಡಿಸಿದ್ದ ಒಳ್ಳೆಯ ಪದಾರ್ಥಗಳನ್ನೆಲ್ಲಾ ಮುಗಿ-ಸಿಯೇ ಬಂದಿದ್ದೀರಿ ಆದರೂ ಹೊಟ್ಟೆಯಲ್ಲಿ ಹಸಿವೆಯು ಹೇಗೆಯೆ?" ಎಂದಳು.

"ಮಿಷ್ಟಾನ್ನ, ಕಾಫಿ ಇನ್ನೂ ತಕ್ಕೊಳ್ಳುವುದು ಉಳಿದಿದೆ." ಎಂದ ಜಾನ್.

"ಹಾಗಾದರೆ ಅದಕ್ಕೆ ಆತಂಕವೇನಿದೆ? ನಡೆಯಿರಿ. ನನ್ನ ಕಾಫಿಯೂ ಆಗಿಲ್ಲ. ಸ್ವಲ್ಪ ಕಾಫಿಯನ್ನು ತೆಗೆದುಕೊಂಡೇ ಏಳಬೇಕೆಂದಿದ್ದೆ; ಆ ಇಚ್ಛೆ ಪೂರೈಸಿಕೊಳ್ಳುವ ಮೊದಲೇ ಗೊಂದಲವೆದ್ದುಬಿಟ್ಟಿತು; ನಾನು ಹಾಗೆಯೇ ಬಿಟ್ಟೆದ್ದೆ. ಇರಲಿ, ಒಂದು ವಿಷಯ ಮಾತ್ರ ನನಗೆ ಅರ್ಥವೇ ಆಗಲೊಲ್ಲದು. ಆ ಮಂತ್ರಿತರನ್ನು ವಂಚಿಸಿ ಇಲ್ಲಿಯೇ ಹಿಡಿದು ಹಾಕಲು ಅವರಿಗೆ ಆಶ್ವಾಸನ ಇತ್ತಿರೇನು? ನಿಜವಾಗಿಯೂ ನಾವು ನಿರಾಪದವಾಗಿ ಮನೆಗೆ ಹೋಗ-ಬಲ್ಲೆವೊ? ನಿಮ್ಮ ಮನದೊಳಗಿನ ಮಾತನ್ನು ಒಡೆದು ಹೇಳಿರಿ." ಎಂದಳು ಗ್ರೇಸ್.

"ನಾನು ಒಪ್ಪಿಕೊಂಡದ್ದನ್ನು ಕಡೆಹಾಯಿಸದೆ ಇರುವ ಮನುಷ್ಯನಲ್ಲ ಗ್ರೇಸ್. ನನ್ನ ಅಭಯ ದೊರೆತ ಮೇಲೆ ದಾರಿಯಲ್ಲಿ ಯಾರಿಗೂ ಅಪಾಯ ವಾಗಲಾರದು. ನನ್ನೀ ಮಾತನ್ನು ನೀನು ನಿಃಸಂದೇಹವಾಗಿ ನಂಬಬಹುದು. ನನಗೆ ಸಾಧ್ಯವಿದ್ದುದನ್ನೆಲ್ಲ ನಾನಿಂದು ಮಾಡಿದ್ದೇನೆ; ನಾಳಿನದನ್ನು ಮಾತ್ರ ಹೇಗೆ ಎಂದು ಹೇಳಲಾರೆ. ನಗರದ ಬೀದಿಯಲ್ಲಿ ಅಡ್ಡಾಡುವುದು ಯಾರಿಗೂ ನಿರಾಪದವೆಂದು ತೋರುವುದಿಲ್ಲ. ನಾಳೆ ನೀನು ಮನೆಯಿಂದ ಹೊರಬೀಳ ಬೇಡ, ಮನೆಯೊಳಗೇ ನನಗಾಗಿ ಕಾದಿರು."

"ನಾಳೆ ಏನಾಗುವುದು ? ಏನಾದರೂ ಭಯಾನಕ ಕಾಂಡ ಸಂಭವಿಸ ಬಹುದೆಂದು ನಿಮ್ಮ ತರ್ಕವೆ ? " ಮೃದುಸ್ವರದಲ್ಲಿ ಗ್ರೇಸ್ ಕೇಳಿದಳು.

"ನಾಳೆ ಘಟಿಸುವುದು ನಮಗೆ, ವೈಯಕ್ತಿಕವಾಗಿ ಅನಿಷ್ಟವಾದರೂ ಜನಸಾಮಾನ್ಯರಿಗೆ ಮಾತ್ರ ಅದು ಕಲ್ಯಾಣಕರವಾದೀತು. ನಾಳೆ ಅಪರಾಹ್ನ ದಲ್ಲಿ ನಾನು ರಾಜನೊಂದಿಗೆ ರಾಜ್ಯತ್ಯಾಗ ಮಾಡುತ್ತೇನೆ. ನಾವು ಪ್ಯಾರಿಸಿಗೂ ಹೋಗಬಹುದು, ಅಥವಾ ಫ್ರಾನ್ಸಿನ ಬೇರೆ ಯಾವ ನಗರದಲ್ಲಿಯಾದರೂ ಆಶ್ರಯ ಹೊಂದಬಹುದು."

"ನನ್ನನ್ನು ಇಲ್ಲಿಯೇ ಬಿಟ್ಟು ಹೋಗುವಿರಾ ? " ಮುನಿಸಿನಿಂದ ಗ್ರೇಸ್ ಕೇಳಿದಳು.

ಜಾನ್ ಪಿಟರ್ಸ್ ನಕ್ಕು ಉತ್ತರವಿತ್ತ : "ಪದಚ್ಯುತರಾಗಿ, ಪ್ರಜೆ-ಗಳಿಂದ ಹೊಡೆದೋಡಿಸಲ್ಪಟ್ಟ ರಾಜಪರಿವಾರದೊಡನೆ ಬರಲು ನೀನು ನಾಚಿ ಕೊಳ್ಳದಿದ್ದರೆ, ನಮ್ಮ ಸ್ಟೊಯ್ಯಾನ ಸ್ಪೆಶಲ್ ಟ್ರೇನಿನಲ್ಲಿ ನಿನಗೂ ಸ್ಥಳ ಸಿಕ್ಕುವದು."

ಅವನ ಕೈಕುಲುಕಿ ಗ್ರೇಸ್ ನುಡಿದಳು : "ನಿಮ್ಮೊಡನೆ ಬೇಕಾದಲ್ಲಿ ಹೋಗಲಿಕ್ಕೂ ಬರಲಿಕ್ಕೂ ನನಗೆಲ್ಲಿ ನಾಚಿಕೆಯಾಗುವುದು ? ತಿಳಿದೂ ಹೀಗೆ ಮಾತನಾಡಿ ನನ್ನನ್ನೇಕೆ ಲಜ್ಜೆಗೀಡುಮಾಡುವಿರಿ ? ಅದೋ, ಬಯಲಿನಲ್ಲಿ ನೆರೆದ ಜನಗಳು ಮುಗಿಲು ಬಿರಿಯುವಂತೆ ಕೂಗುತ್ತಿದ್ದಾರೆ ; ಆ ಕಿಡಿಕಿಯ ಹತ್ತಿರ ನಿಂತು ನೋಡೋಣ, ಬನ್ನಿರಿ."

## ೩೬

ಜಾನ್ ಪಿಟರ್ಸ್ ಗ್ರೇಸಳೊಡನೆ ಕಿಡಿಕಿಯಲ್ಲಿ ನೋಡುತ್ತಿದ್ದ. ಅರ ಮನೆಯ ಕಡೆ ನೋಡುತ್ತ ಹೂಂಕರಿಸುತ್ತಿದ್ದ ಜನಸಮೂಹದ ಉದ್ರೇಕ ಯಾವ ಅಜ್ಞಾತಶಕ್ತಿಯ ಪ್ರಭಾವದಿಂದಲೋ ಏನೋ ಒಂದು ಕ್ಷಣದಲ್ಲಿಯೇ ಇಳಿದುಬಿಟ್ಟಿತು. ಅವರ ಹೂಂಕಾರವಡಗಿತು ಅವರು ಆಕಡೆ ಮುಖ ತಿರುಗಿಸಿ ನಿಂತರು. ಕೆಲ ಜನ ಅಶ್ವಾರೋಹಿಗಳು ಆ ಜನಸಾಗರದಲ್ಲಿ ತಿರು-ಗಾಡುತ್ತ ಏನೋ ಹೇಳುತ್ತಲಿದ್ದರು. ಜಾನ್ ಪಿಟರ್ಸನಿಗೆ ಅದು ಕೇಳಿಸಲಿಲ್ಲ. ತುಸು ಹೊತ್ತಿನಲ್ಲಿಯೇ ಪೂರ್ವದಿಕ್ಕಿನ ಜನ್ನಜಂಗುಳಿ ಶಾಂತತೆಯಿಂದ—

ನಗರದ ಕಡೆ ಹೊರಟಿತು. ಗ್ರಾನೋ ತನ್ನ ಸೂಚನೆಯಂತೆ ನಡೆದುಕೊಂಡಿ-ದ್ದಾನೆ, ಇನ್ನು ಶೀಘ್ರವೇ ಮಾರ್ಗವು ನಿಷ್ಕಂಟಕವಾಗುವುದೆಂದು ಪಿಟರ್ಸ್ ತಿಳಿದುಕೊಂಡ.

ಕಿಡಿಕಿಯ ತೆರೆಯನ್ನೆಳೆದು ಜಾನ್ ಪಿಟರ್ಸ್ ನಿಮಂತ್ರಿತರ ಬಳಿ ಬಂದು ಹೇಳಿದ: “ ನಾನು ಕಿಡಿಕಿಯಲ್ಲಿ ನೋಡಿದೆ; ಜನರ ಗುಂಪು ಕ್ರಮಶಃ ಕರಗುತ್ತಿದೆ; ಒಂದು ಗಂಟೆಯೊಳಗೇ ಗೊಂದಲಿಗರು ಮಾಯವಾಗುವರು. ತಾವಿಲ್ಲಿ ಬಂದು ತುಂಬ ಹೊತ್ತಾಗಿಬಿಟ್ಟಿತು; ತಾವು ಬಹಳ ಬಳಲಿದ್ದೀರಿ, ಇನ್ನು ಸ್ವಲ್ಪ ಹೊತ್ತು ನಿದ್ರಾಸಿಸಿರಿ. ತಮ್ಮೊಡನೆ ಆಮೋದಗೊಳ್ಳುವ ಸಂಯೋಗ ನಮಗಿನ್ನೆಂದು ಸಿಕ್ಕುವುದೋ ಹೇಳಲು ಬರುವಂತಿಲ್ಲ; ಬನ್ನಿ, ನಾವೆಲ್ಲರೂ ಒಟ್ಟಿಗೆ ನಮ್ಮ ತಾಯಿ ನಾಡಿನ ಮಂಗಲವನ್ನು ಹಾರಯಿಸುತ್ತ ಒಂದೊಂದು ಬಟ್ಟಲು ಮದ್ಯವನ್ನು ಸೇವಿಸುವಾ.”

ಜಾನ್ ಪಿಟರ್ಸ್‌ನನ್ನು ಅನುಸರಿಸಿಕೊಂಡು ನಿಮಂತ್ರಿತರು ಭೋಜನ ಶಾಲೆಗೆ ತೆರಳಿದರು ಯುವರಾಜನ ಇಂದಿನ ನಡೆನುಡಿಗಳು ಎಲ್ಲರನ್ನೂ ವಿಸ್ಮಿತಗೊಳಿಸಿದವು. ಎಲ್ಲರೂ ಅವನನ್ನು ಕಾಮುಕನೆಂದು, ಲಂಪಟನೆಂದು ತುಚ್ಛವಾಗೆಣಿಸುತ್ತಿದ್ದರು; ವ್ಯಭಿಚಾರಪಂಕದಲ್ಲಿ ಬಿದ್ದು ಹೊರಳಾಡುವವನೆಂದು ಸಕ್ಸನಸಮಾಜವು ಅವನನ್ನು ನಿಂದಿಸುತ್ತಿತ್ತು; ಅವನ ನೋಟಕ್ಕೆ ಸಕ್ಸನ್‌ ರಮಣಿಯರು ಅಂಜುತ್ತಿದ್ದರು; ಅವನ ಮಾತಿಗೆ ಬೆಲೆಯುಂಟೆಂದು ಯಾರೊಬ್ಬರಿಗೂ ನಂಬಿಗೆಯಿರಲಿಲ್ಲ. ಆ ಯುವರಾಜನೇ ಇಂದು ಅವರನ್ನು ಮಹಾಸಂಕಟದಿಂದ ಅನಾಯಾಸವಾಗಿ ಬಿಡುಗಡೆ ಮಾಡಿದ. ಇದು ತೀರ ಅಸ್ವಾಭಾವಿಕವೆಂದು ಅವರಿಗೆ ತೋರಿತು. ಯುವರಾಜನ ಚರಿತ್ರೆಯ ಈ ಆಕಸ್ಮಿಕ ಪರಿವರ್ತನೆಯ ಕಾರಣವನ್ನು ಅವರು ತಿಳಿಯದಾದರು.

ಭೋಜನಶಾಲೆಯನ್ನು ಸೇರಿ ಎಲ್ಲರೂ ಮೇಜಿನೆದುರು ಕುಳಿತರು. ಯುವರಾಜನ ಬಲಗಡೆ ಗ್ರೇಸ್, ಎಡಗಡೆ ತನ್ನಮಗಳೊಡನೆ ಬ್ಯಾರಣೆಸ್ ಹೋಲ್ಡ್ ಕುಳಿತರು. ಒಳ್ಳೇ ರಸಿಕನೆಂದು ಹೆಸರಾದ ರಸ್ಯದ ರಾಯಭಾರಿ ಅವನಿಂದ ಕಿರಿದಂತರದಲ್ಲಿ ಕುಳಿತ. ಫ್ರಾನ್ಸ್–ಇಂಗ್ಲೆಂಡ್ ರಾಯಭಾರಿಗಳು ಕಾರ್ಯಾರ್ಥವಾಗಿ ಮೊದಲೇ ಸಮಾರಂಭದಿಂದ ಹೊರಟುಹೊಗಿದ್ದರು.

ಮಧ್ಯಪಾತ್ರವನ್ನು ಕೈಯಲ್ಲಿ ಹಿಡಿದು ಎದ್ದುನಿಂತು ಜಾನ್ ಪಿಟರ್ಸ್ ಹೇಳಲಾರಂಭಿಸಿದ: "ಮಿತ್ರರೇ, ಬರ್ಜಿಲಂಡಿನ ಕಲ್ಯಾಣಾಕಾಂಕ್ಷಿಗಳಾಗಿ ತಾವಿಂದು ನನ್ನೊಂದಿಗೆ ಮದ್ಯಪಾನ ಮಾಡಬೇಕೆಂದು ನನ್ನ ಬಿನ್ನಹ. ಅದರಿಂದ ನನಗೊಳ್ಳೇ ಸಂತೋಷವಾಗುವುದು. ನಾನು ಅತ್ಯಂತ ಸರಳ ಹೃದಯದಿಂದ ಮನಃಪೂರ್ವಕವಾಗಿ ಈ ಬಿನ್ನಹ ಮಾಡಿಕೊಳ್ಳುತ್ತಿದ್ದೇನೆ. ಭವಿಷ್ಯತ್ತಿನಲ್ಲಿ ನಮ್ಮ ನಾಡು, ನಮ್ಮ ನಾಡಿಗರು ರಾಷ್ಟ್ರೀಯ ಜೀವನದಲ್ಲಿ ಉಚ್ಚಸ್ಥಾನವನ್ನು ಪಡೆಯಲಿ. ಇಷ್ಟು ದಿನ ಬರ್ಜಿಲಂಡ್ ಕೆಟ್ಟ ಆಳಿಕೆಗೆ ಮಾದರಿಯಾಗಿತ್ತು; ಇನ್ನು ಒಳ್ಳೆಯ ಆಳಿಕೆ ಆರಂಭವಾಗಲಿ, ಅದು ದಿನದಿನಕ್ಕೂ ಅಭಿವೃದ್ಧಿ ಹೊಂದಲಿ, ಯುರೋಪಿನ ನಾಗರಿಕತೆಯ ಇತಿಹಾಸದಲ್ಲಿ ಇದರ ಗೌರವದ ಕಥೆ ಬಂಗಾರದ ಅಕ್ಷರಗಳಲ್ಲಿ ಬರೆಯಲಿ, ಸ್ವಾತಂತ್ರ್ಯದಲ್ಲಿ ಮಾನದಲ್ಲಿ, ಮನುಷ್ಯತ್ವದಲ್ಲಿ ಮತ್ತು ಕಾರ್ಯಕೌಶಲದಲ್ಲಿ ನಮ್ಮ ತಾಯಿ ನಾಡು ಯಾರಿಗೂ ಹಿಂದಾಗದಿರಲಿ; ನಮ್ಮ ದೇಶ—ನಮ್ಮೆಲ್ಲರ ಸ್ವದೇಶ ಬರ್ಜಿಲಂಡಿಗೆ ಜಯವಾಗಲಿ!"

ಪ್ರಾರ್ಥನೆಯನ್ನು ಮುಗಿಸಿ ಜಾನ್ ಪಿಟರ್ಸ್ ಒಂದುಸಿರಿನಲ್ಲಿ ಪಾತ್ರೆಯನ್ನು ಬರಿದುಗೊಳಿಸಿದ ಅವನೊಡನೆ ಎಲ್ಲರೂ ತಮ್ಮ ತಮ್ಮ ಪಾತ್ರೆಗಳಲ್ಲಿಯ ಮದ್ಯವನ್ನು ಇಲ್ಲವೆನಿಸಿದರು. ಬಳಿಕ ಎಲ್ಲರೂ ಒಕ್ಕೊರಲಿನಿಂದ ಜಯಧ್ವನಿ ಗೈದರು. ಬ್ಯಾಂಡಿನಲ್ಲಿ ರಾಷ್ಟ್ರೀಯ ಗೀತೆ ಹಾಡಿತು. ಯುವರಾಜನಲ್ಲಾದ ಪರಿವರ್ತನೆಯಿಂದ ಮತ್ತಷ್ಟು ವಿಸ್ಮಿತರಾದ ಜನರು ತಮ್ಮ ತಮ್ಮೊಳಗೆ ಇದೇನದ್ಭುತವೆಂದು ಮೆಲ್ಲಮೆಲ್ಲನೆ ಕೇಳಿಕೊಂಡರು. ಬರ್ನಾರ್ಡ್‌ರ್ಗಬ್ಬ ಮಾತ್ರ ಯಾರೊಳಗೂ ಸೇರದೆ ಒಂದು ಮೂಲೆಯಲ್ಲಿ ಕುಳಿತು ಎವೆಯಿಕ್ಕದೆ ಯುವರಾಜನನ್ನೇ ನೋಡುತ್ತಿದ್ದ.

ಸುಮಾರು ಅರ್ಧಗಂಟೆ ಕಳೆಯಿತು. ಜಾನ್ ಪಿಟರ್ಸನ ಅಪ್ಪಣೆಯಂತೆ ಪೇದೆ ಕಿಡಿಕಿಯನ್ನು ತೆರೆದ. ನಿಮಂತ್ರಿತರು ಹೊರಗಡೆ ನೋಡಿದರು. ಬಯಲು ಬರಿದಾಗಿತ್ತು; ಕಣ್ಣು ಹರಿಯುವಷ್ಟು, ದೂರ ರಾಜಬೀದಿಯಲ್ಲಿ ಒಬ್ಬಾನೊಬ್ಬನೂ ಇಲ್ಲ. ಅಸ್ತ್ರಧಾರಿಗಳಾದ ಅಶ್ವಾರೋಹಿಗಳು ಬೀದಿಗಳನ್ನು ಕಾಯುತ್ತಿದ್ದರು.

ಯುವರಾಜ ಹೇಳಿದ : “ ಮಿತ್ರರೇ, ಆನಂದೋತ್ಸವದ ಮುಗಿತಾಯದಲ್ಲಿ ತಮ್ಮನ್ನು ಬೀಳ್ಕೊಡಲು ಆನಂದವಾಗುತ್ತಿದೆ. ತಾವಿನ್ನು ಇಲ್ಲಿ ವಿಲಂಬ ಮಾಡುವ ಅಗತ್ಯವಿಲ್ಲ, ದಾರಿಯೀಗ ಪೂರ್ಣ ಪರಿಷ್ಕಾರವಾಗಿದೆ; ನಿಮ್ಮ ನಿಮ್ಮ ವಾಹನಗಳು ತಿರುಗಿ ಬಂದು ಬಾಗಿಲಲ್ಲಿ ನಿಂತಿವೆ; ತಾವಿನ್ನು ನಿಃಶಂಕೆಯಿಂದ ಮನೆಗೆ ಹೋಗಬಹುದು ”

ಎಲ್ಲರೂ ಎದ್ದು ಹೊರಟರು. ಎಲ್ಲರ ಹಿಂದೆ ಯುವರಾಜನೊಂದಿಗೆ ನಡೆಯುತ್ತ ಗ್ರೇಸ್ ಕೇಳಿದಳು : “ ರಾಜಬೀದಿಯನ್ನು ಕಾಯುತ್ತಿರುವ ಅಶ್ವಾರೋಹಿಗಳು ಯಾರವರು ? ”

“ ಅವರು ಹೊಸ ಸರಕಾರದ ಕಾವಲುಗಾರರು. ”

“ ಹೊಸ ಸರಕಾರದ ನಗರ ರಕ್ಷಕರು ನಿಮ್ಮ ಅಪ್ಪಣೆಯನ್ನು ಪಾಲಿಸುತ್ತಿದ್ದಾರೆ ; ಇದರ ಅರ್ಥವೇನು ? ”

“ ನಿನಗೆಲ್ಲವನ್ನೂ ಹೇಳುತ್ತೇನೆ ; ಇಂದು ರಾತ್ರಿಯಲ್ಲ. ನಾಳೆ. ನಾವು ಕೂಡಿಯೇ ದೇಶತ್ಯಾಗ ಮಾಡುವಾಗ ದಾರಿಯಲ್ಲಿ ಈ ಅದ್ಭುತ ಇತಿಹಾಸವನ್ನೆಲ್ಲ ಸಾದ್ಯಂತವಾಗಿ ಹೇಳುತ್ತೇನೆ. ”

“ ನಿಮ್ಮ ಭೆಟ್ಟಿ ನನಗಾಗುವುದೋ, ಇಲ್ಲವೆ, ಕಾಗದ ಬರೆಯುವಿರೋ? ”

“ ನಾಳೆ ಮನೆಯಿಂದ ಹೋಗಬೇಡ ; ನನಗೆ ಪುರಸತ್ತಾದೊಡನೆ ನಾನೇ ಬಂದು ನಿನ್ನನ್ನು ಕರೆದೊಯ್ಯುತ್ತೇನೆ. ”

ಹೊರಗೆ ಬಂದು ಜಾನ್ ಪಿಟರ್ಸ್ ಗ್ರೇಸಳನ್ನು ಆಕೆಯ ಆಬಚಿಯ ಬಂಡಿಯಲ್ಲಿ ಕುಳ್ಳಿರಿಸಿ ಕಳಿಸಿಕೊಟ್ಟ. ಬಳಿಕ ವಾಹನಗಳಿಂದ ತುಂಬಿದ ರಾಜಬೀದಿಯ ಕಡೆಗೊಮ್ಮೆ, ನಿರ್ಜನವಾದ ನೃತ್ಯಗೃಹದ ಕಡೆಗೊಮ್ಮೆ ಅವನು ಏಕಾಕಿಯಾಗಿ ನಿಂತು ಕೆಲಹೊತ್ತು ನೋಡಿದ. ಅವನ ಮುಖದಿಂದ ಅವನಿಗೆ ತಿಳಿಯದಂತೆಯೆ ಒಂದು ನಿಟ್ಟುಸಿರು ಹೊರಟಿತು.

ಬಂಡಿಯಲ್ಲಿ ಹೋಗುತ್ತಿದ್ದ ಗ್ರೇಸ್ ನಾಲ್ಕೂ ಕಡೆ ನೋಡಿದಳು. ಅವಳ ಕಣ್ಣುಗಳು ಕಂಬನಿದುಂಬಿದವು. ಏನೋ ಒಂದು ಅವ್ಯಕ್ತ ವೇದನೆಯಿಂದ ಅವಳ ಎದೆಯ ಶಿರ-ಉಪಶಿರಗಳು ಟನ್‌ಟನ್ ಎನ್ನತೊಡಗಿದವು. ಬಹುದಿನಗಳ ಹಿಂದೆ, ಇಟಲಿಯಲ್ಲಿ ರಮ್ಯ ವಿಶಾಲ ಸರಸಿಯ ತಟದಲ್ಲಿ

ಸಂಭವಿಸಿದ ಜಾನ್ ಪಿಟರ್ಸನ ಪ್ರಥಮದರ್ಶನದ ಪ್ರಸಂಗ ಅವಳಿಗೆ ನೆನಪಾಯಿತು. ಆಮೇಲೆ ಜನದಟ್ಟಣೆಯ ಹೋಟೆಲೊಂದರಲ್ಲಿ ಅವರಿಬ್ಬರ ಮಿಲನ. ಆದರೆ ಹಿಂದೆಂದೂ ಅವಳ ಹೃದಯವು ಜಾನ್ ಪಿಟರ್ಸನ ವಿರಹ ಭಯದಿಂದ ಹೀಗೆ ತಳಮಳಿಸಿರಲಿಲ್ಲ

೩೭

ಮರುದಿನ ಬರ್ಜಿಲಂಡಿನ ಮಹಾಪರಿವರ್ತನೆಯ ದಿನ. ಹೊತ್ತು ಮೂಡುವುದಕ್ಕೆ ಮುಂಚೆಯೆ ಸಾವಿರಾರು ನಾಗರಿಕರಿಂದ ಎಲ್ಲ ಬೀದಿಗಳೂ ಗಜಬಜಿಸಿದವು. ಉಗಿಬಂಡಿಗಳು ತುಂಬಿ ತುಂಬಿ ಜನರನ್ನು ರಾಜಧಾನಿಗೆ ಕರೆತಂದವು; ಇಂದವರ ರಾಷ್ಟ್ರೀಯ ಮಹೋತ್ಸವವೇನೋ–ಹಬ್ಬದ ಉಡಿಗೆ ತೊಡಿಗೆಗಳಿಂದ ಅಲಂಕೃತರಾಗಿದ್ದರವರು. ಅಂಗಡಿಗಳೆಲ್ಲಾ ಮುಚ್ಚಿದ್ದವು. ಛತ್ರ ಉಪಹಾರಗೃಹಗಳು ಆನಂದಲೋಲ ಜನತೆಯ ಕಲಕಲಾಟ ಅಲ್ಲಲ್ಲಿ ಪತ್ತಿಪ್ಪತ್ತು ಜನ ಗುಂಪುಸೇರಿದಲ್ಲಿ ರಾಜ್ಯದ ಶಾಸನ ಪದ್ಧತಿಯ ಪರಿವರ್ತನೆಯ ಬಗ್ಗೆ ಚರ್ಚೆ.

ರಾಜನು ತನ್ನ ವಾಚನ ಮಂದಿರದಲ್ಲಿ ಯಾರ ಹಾದಿಯನ್ನೊ ಕಾಯುತ್ತ ಕುಳಿತಿದ್ದ. ಅವನು ಕಿಡಿಕಿಯೊಳಗಿಂದ ಬೀದಿಯ ಕಡೆಗೆ ವ್ಯಾಕುಲ ದೃಷ್ಟಿಯಿಂದ ನೋಡುತ್ತಲಿದ್ದ; ಒಂದು ಕ್ಷಣವೂ ಅವನ ವ್ಯಗ್ರವಾದ ನೋಟ ಅಲ್ಲಿಂದ ಕೀಳದಾಗಿತ್ತು; ರೆಪ್ಪೆಗಳು ಕೂಡ ಬಡಿದುಕೊಳ್ಳುವ ತಮ್ಮ ಸ್ವಾಭಾವಿಕ ಕೆಲಸವನ್ನು ಮರೆತಿದ್ದವು. ರಾಜನ ಮುಖ ಕಳೆಗುಂದಿತ್ತು, ಕಣ್ಣುಗಳು ಒಳಸೇರಿದ್ದವು; ನರಗಳೆದ್ದ ಹಣೆ, ಅಂಗಲಾಪ ಕೂದಲಿನ ತಲೆ ನಸುವಾಗಿ ಬೆಮರುತ್ತಿದ್ದವು; ಅವನ ದೃಷ್ಟಿಯಲ್ಲಿ ಭಯ ಒಡಮೂಡಿದ್ದಿತು. ಅವನೊಂದು ಪಕ್ಕದಲ್ಲಿ ರಾಜಕೀಯ ಪರಿಚಾರಕ ಮತ್ತು ಚಿಕಿತ್ಸಕ, ಇನ್ನೊಂದು ಪಕ್ಕದಲ್ಲಿ ಅವನ ಆತ್ಮೀಯ ಕಾರ್ಯದರ್ಶಿ ನಿಂತಿದ್ದರು.

ಇಂಪೇನು ಇಡೀ ದಿನ ಚರ್ಚಿನ ಗಂಟೆ ಬಾರಿಸುತ್ತಿರುವುದೆ ? ಜನರ ತಿರುಗಾಟ, ಈ ಕೋಲಾಹಲ ನಿಂತರೆ ಹಾಯಾಗಿದ್ದೇನು ವೈದ್ಯರೆ. ಈ ಗದ್ದಲ ಯಾವಾಗ ಮುಗಿಯುವುದು ? ” ಎಂದು ರಾಜ ಕೇಳಿದ.

" ಮುಗಿಯುತ್ತದೆ, ಮಹಾರಾಜ. ತಾವಷ್ಟು ಉದ್ವಿಗ್ನರಾಗಬೇಡಿರಿ, ಧೈರ್ಯ ತಾಳಿರಿ. ಪಾರ್ಲಿಮೆಂಟು ಸಭೆ ಸೇರಿದೆ. ಅಲ್ಲೇನಾಗುವುದೆಂದು ತಿಳಿಯುವುದಕ್ಕಾಗಿ ಇಷ್ಟೊಂದು ಜನರ ಆತುರದ ಉತ್ಸಾಹ." ಎಂದ ವೈದ್ಯ.

ಈ ಮಾತಿನಿಂದ ರಾಜನಿಗೆ ಸಮಾಧಾನವಾಗಲಿಲ್ಲ. ಅಸಂತುಷ್ಟಿಯಿಂದ ಅಸ್ಫುಟವಾಗಿ ಏನೋ ಎಂದ. ಅದು ವೈದ್ಯನಿಗೆ ತಿಳಿಯಲಿಲ್ಲ. ಕೆಲ ಹೊತ್ತಿನ ಮೇಲೆ ರಾಜನು ಬೀದಿಯ ಕಡೆಗಿದ್ದ ಕಣ್ಣನ್ನು ಈ ಕಡೆ ತಿರುಗಿಸಿ, " ಇಷ್ಟರೊಳಗೇ ಸುದ್ದಿ ಬರುತ್ತದೆ, ಏನಾಯಿತು ಏನು ಬಿಟ್ಟಿತು ಎಂಬುದು ತಿಳಿಯುತ್ತದೆ." ಎಂದ.

ವೈದ್ಯನು ಕಿಡಿಕಿಯಲ್ಲಿ ನೋಡಿದ. ಕೆಲಜನ ಸಶಸ್ತ್ರ ಸೈನಿಕರು ಬೇಗದಿಂದ ಅರಮನೆಯ ಕಡೆ ಬರುತ್ತಿದ್ದರು ಅವರ ಮುಂದುಗಡೆಯಲ್ಲಿ ಬರುತ್ತಲಿದ್ದ ತೇಜಸ್ವಿಯಾದ ಬಲಶಾಲಿಯಾದ ವೀರನನ್ನು ಕಂಡು ವೈದ್ಯನು " ಮಹಾರಾಜ, ಯುವರಾಜರು ಬರುತ್ತಿದ್ದಾರೆ, ನೋಡಿದಿರಾ ? " ಎಂದ.

ರಾಜನ ಹುಬ್ಬುಗಳು ಆಕುಂಚಿತವಾದವು. " ಯಾರು ಜಾನ್ ? ಅವನು ಸೈನ್ಯಸಂಚಾಲನೆಯ ಕಾರ್ಯವನ್ನು ಬಿಟ್ಟು ಅವಸರದಿಂದೇಕೆ ಬರುತಿದ್ದಾನೆ ? ಅಗತ್ಯದ ಕೆಲಸವೇ ಇದ್ದರ ಜನರನ್ನು ಕಳಿಸಿರ ಗುತ್ತಿತ್ತು." ಎಂದ.

ವೈದ್ಯನೆಂದ : " ಯುವರಾಜರ ಮುಖವನ್ನು ನೋಡಿದರೆ ಏನೋ ವಿಶೇಷ ಸುದ್ದಿಯಿರಬೇಕೆನಿಸುತ್ತದೆ. ಸುಮ್ಮನೆ ಬರುತ್ತಾರೆಂದು ತೋರುವುದಿಲ್ಲ. ಸಂಕಟದ ಸಂಭವವೇನಾದರೂ ಇದ್ದಿದ್ದರೆ ಅವರು ಬರುತ್ತಿರಲಿಲ್ಲ."

ಒಂದೆರಡು ನಿಮಿಷಗಳಲ್ಲಿ ಜಾನ್ ಪಿಟರ್ಸ್ ಕಣ್ಣೆದುರು ಬಂದು ನಿಂತ. ಅವನ ಮುಖ ಗಂಭೀರ. ಹಣೆಯಲ್ಲಿ ಚಿಂತೆಯ ರೇಷೆಗಳು ಮೂಡಿದ್ದವು. ಅವನು ಹಣೆಯ ಬೆವರನ್ನು ಮೆಲ್ಲನೊರಸಿಕೊಂಡ.

" ಜಾನ್, ನೀನು ಈ ಹೊತ್ತಿನಲ್ಲಿ ಸೈನ್ಯವನ್ನು ಬಿಟ್ಟು ಇಲ್ಲಿಗೇಕೆ ಬಂದೆ ? ಸೈನ್ಯದಲ್ಲಿರುವುದೇ ಉಚಿತವಾಗಿತ್ತು " ರಾಜನು ಅಸಂತೋಷದಿಂದ ಕೇಳಿದ.

ಈ ಮಾತಿಗೆ ಉತ್ತರವನ್ನೀಯದೆ ಜಾನ್ ಪಿಟರ್ಸ್ ಪ್ರಶ್ನಾರ್ಥಕ ದೃಷ್ಟಿಯಿಂದ ವೈದ್ಯನ ಮುಖವನ್ನು ನೋಡಿದ. ವೈದ್ಯನು ಅವನ ಕಿವಿಯಲ್ಲಿ

ಹೇಳಿದ: “ ಅಪ್ರಿಯವಾರ್ತೆಯಿದ್ದರೆ ಈಗಲೇ ಹೇಳುವುದು ಉತ್ತಮ. ಈಗ ಅದರ ಆಘಾತವನ್ನು ತಾಳಿಕೊಳ್ಳಬಲ್ಲರು. ಮುಂದೆ ಅವರ ಬೇನೆ ಹೆಚ್ಚಿತೆಂದರೆ, ತಾಳಿಕೊಂಡಾರೋ ಇಲ್ಲವೋ ಸಂದೇಹ ”

ಆಗ ಜಾನ್ ಪಿಟರ್ಸ್ ಹೇಳಿದ: “ ಮಹಾರಾಜ, ನಮ್ಮ ದಲಕ್ಕೆ ಸೇರಿದ ಕೆಲಜನ ಸೈನಿಕರನ್ನು ಸಂಗಡ ಕರೆದುಕೊಂಡು ಬಂದಿದ್ದೇನೆ. ಉಳಿದ ಸೈನಿಕರೆಲ್ಲರೂ ನೂತನಪ್ರಜಾತಂತ್ರ ಪಕ್ಷವನ್ನು ಸೇರಿದ್ದಾರೆ. ಸೇನಾಪತಿ ಗ್ರೋಬಿನರ್ ಕತ್ತಿಯನ್ನು ಮುರಿದು ಚೆಲ್ಲಿ ಹತಾಶರಾಗಿ ಮನೆಗೆ ಹೊರಟು ಹೋದರು. ಸ್ವಲ್ಪ ಹೊತ್ತಿನಲ್ಲೇ ದಾರಿಯಲ್ಲಿ ಬರುತ್ತಿದ್ದಾಗ ನಾನು ಕೇಳಿದೆ– ಅವರು ಮನಃಕ್ಷೋಭದಿಂದ ಆತ್ಮಹತ್ಯೆಮಾಡಿಕೊಂಡರಂತೆ. ಈ ಸುದ್ದಿ ಸತ್ಯವೆಂದೇ ತೋರುತ್ತಿದೆ.”

“ ಪಾರ್ಲಿಮೆಂಟಿನಲ್ಲಿ ಏನು ಗೊತ್ತಾಯಿತು ? ” ಭಗ್ನ ಸ್ವರದಲ್ಲಿ ರಾಜ ಕೇಳಿದ.

“ ಪಾರ್ಲಿಮೆಂಟಿನಿಂದ ತಮ್ಮಕಡೆ ದೂತ ಬರುತ್ತಾನೆ; ಶೀಘ್ರದಲ್ಲಿಯೆ ಎಲ್ಲವೂ ತಿಳಿಯುವುದು.”

ಸುಮಾರು ಐದು ನಿಮಿಷಗಳು ಗತಿಸಿದ್ದುವು. ದೊಡ್ಡ ಮೋಟರೊಂದು ವೇಗದಿಂದ ಬಂದು ಅರಮನೆಯೆದುರು ನಿಂತಿತು. ಅದರಿಂದ ನಾಲ್ವರಿಳಿದು ಅರಮನೆಯೊಳಗೆ ಪ್ರವೇಶಿಸಿದರು. ಇವ್ವರೊಳಗೆ ಒಬ್ಬ ಪೇದೆ ವಾಚನಮಂದಿರದಲ್ಲಿ ಬಂದು, “ ಮಹಾರಾಜ, ಬ್ಯಾರಣ್ ಬರ್ನಾರ್ಡ್ ಶೀಘ್ರವೇ ತಮ್ಮ ದರ್ಶನವನ್ನು ಬಯಸುತ್ತಾರೆ” ಎಂದು ಬಿನ್ನವಿಸಿದ.

ಈ ಮಾತು ರಾಜನ ಕಿವಿಯೊಳಗೆ ಹೋಗಲಿಲ್ಲ. ಅವನು ಶೂನ್ಯದೃಷ್ಟಿಯಿಂದ ನೋಡತೊಡಗಿದ. “ ಒಳಗೆ ಕಳಿಸು ” ಎಂದು ಜಾನ್ ಪಿಟರ್ಸ್ ಬಂದ ಪೇದೆಗೆ ಹೇಳಿದ.

ಪೇದೆ ಹೋದ. ಪ್ರತಿಕ್ಷಣದಲ್ಲಿಯೆ ಬರ್ನಾರ್ಡ್ ಕೋಣೆಯೊಳಗೆ ಬಂದು, ಜಾನ್ ಪಿಟರ್ಸನನ್ನು ಸನ್ನೆಯಿಂದ ತನ್ನ ಹತ್ತಿರ ಕರೆದ. ಅವನ ಹೋಗುತ್ತಲೂ ಬರ್ನಾರ್ಡ್ ಮೆಲ್ಲಗೆ ಹೇಳಿದ: “ ನಾನಿದೀಗಲೇ ಪಾರ್ಲಿಮೆಂಟಿನಿಂದ ಬರುತ್ತಿದ್ದೇನೆ. ಹೊಸ ಪ್ರಭುತ್ವದ ಆಳಿಕೆ ಯಾವರೀತಿಯಿರಬೇಕೆಂಬುದು ಅಲ್ಲಿ ತೀರ್ಮಾನವಾಗಿದೆ. ನಮ್ಮ ಗುಪ್ತಚರರು ಸಭೆಯ ಕಾರ್ಯ

ವಿವರಣೆಯನ್ನು ಸಂಗ್ರಹಿಸಿ ನನಗೆ ತಿಳಿಸಿದ್ದಾರೆ. ಪರಿಸ್ಥಿತಿ ಭಯಾನಕವಾಗಿದೆ. ತಾವಿನ್ನು ಹೊತ್ತುಗಳೆಯಬೇಡಿರಿ. ಗ್ರಾವೋ ಮತ್ತು ಅವರ ದಳದ ಕಾರಸ್ಥಾನಿಗಳನ್ನು ಬೇಗನೇ ಸಂದರ್ಶಿಸಿರಿ, ತಮ್ಮ ಗುಪ್ತರಹಸ್ಯವನ್ನು ಅವರಿಗೆ ತಿಳಿಸಿರಿ. ಎಲ್ಲ ವಿಷಯ ನನಗೆ ತಿಳಿದಿರುವುದನ್ನೂ ಅವರಿಗೆ ಹೇಳಿರಿ. ಅದನ್ನವರು ಸಮ್ಮತಿಸದಿದ್ದರೆ ನನ್ನ ಮೋಟಾರಿನಲ್ಲಿ ಕುಳಿತು ಪಲಾಯನಮಾಡಿರಿ. ತಡವಾದರೆ ಪರಿಣಾಮ ಬಹಳ ಕೆಟ್ಟದಾದೀತು."

"ವ್ಯಾಪಾರ ಇಷ್ಟು ದೂರ ಮುಂದುವರಿದಿದೆಯೆ? ಎಲ್ಲವನ್ನೂ ವಿವರವಾಗಿ ಹೇಳಿರಿ." ಎಂದ ಜಾನ್ ಪಿಟರ್ಸ್.

"ಸತ್ಯವಾಗಿ ಹೇಳಬೇಕೆಂದರೆ, ವಿಪ್ಲವಕಾರಿಗಳಿಂದ ತಮಗೆ ಉಳಿಗಾಲವಿಲ್ಲ. ತಮ್ಮ ಶತ್ರುಗಳೆಷ್ಟೆಂದು ತಮಗೆ ಕಲ್ಪನೆಯಿರಲಾರದು. ಹಿಂಸಾವಾದಿಗಳು ತಮ್ಮ ರಕ್ತಲಾಲಸೆಯಿಂದ ಮತ್ತರಾಗಿದ್ದಾರೆ. ಅವರು ಮಹಾರಾಜರನ್ನು ಜೀವದೊಂದಿಗೆ ಹೋಗಗೊಡಬಹುದು: ತಮ್ಮ ಮೇಲೆ ಮಾತ್ರ ಕೊಂಚವೂ ಕನಿಕರವಿಲ್ಲ ಅವರಿಗೆ. ತಾವು ಸಿಲ್ವಾಣದ ವರೆಗಾದರೂ ಸುರಕ್ಷಿತವಾಗಿ ಹೋದೀರೋ ಹೋಗಲಾರಿರೋ ಸಂದೇಹ. ತಾವು ಸತ್ಯವನ್ನು ತೀಯ ಬಯಸಿದ್ದರಿಂದ ಸತ್ಯವನ್ನೇ ಹೇಳಿದ್ದೇನೆ. ತಾವು ಮೋಟರಿನಲ್ಲಿ ಅಗವಾನೆಯಿಂದ ಹೊರಬಿದ್ದೊಡನೆ, ವಿಪ್ಲವವಾದಿಗಳು ತಮ್ಮನ್ನು ತರುಬಿ ಹೊರಗೆಳೆದು ಗುಂಡಿಕ್ಕಿ ಕೊಲ್ಲುವರು!"

"ನೀವು ಏನೇ ಹೇಳಿರಿ, ಅವರಿಗೀ ಕಾರ್ಯ ಎಷ್ಟು ಮಾತ್ರವೂ ಸಾಧ್ಯವಿಲ್ಲ. ನಾನು ಗ್ರಾವೋ ಅವರಲ್ಲಿ ನೆರವನ್ನು ಕೇಳಲೂ ಹೋಗುವುದಿಲ್ಲ, ಪ್ರಾಣಭಯದಿಂದ ಓಡಿಯೂ ಹೋಗುವುದಿಲ್ಲ" ಜಾನ್ ಪಿಟರ್ಸ್ ನುಡಿದ.

"ಅದರಲ್ಲಿ ದೋಷವೇನು? ತಾವು ವಿಪ್ಲವವಾದಿಗಳ ಮಹಾನಾಯಕರೆಂದು ಅವರು ನಂಬಿದರೆ ತಮಗೆ ಯಾವ ವಿಪತ್ತೂ ಇಲ್ಲ. ನಡೆಯಿರಿ, ನಾನು ತಮ್ಮ ಮೈಗಾಯ್ದು ಕಳಿಸಿ ಬರುವೆ. ತಾವು ವಿದ್ರೋಹಿಗಳ ನಾಯಕರೆಂದು ತಿಳಿದರೆ ಅವರು ಬೆರಗುಬೆಪ್ಪಾಗುವರು ನಿಜ, ಆದರೆ ಅದನ್ನು ಪ್ರಕಟಗೊಳಿಸದಿದ್ದರೆ ತಮಗೆ ಬಿಡುಗಡೆಯಿಲ್ಲ. ಅಲ್ಲದೆ ಈಗ ಈ ವಿಷಯವನ್ನು ರಟ್ಟುಮಾಡಿದರೆ ನಷ್ಟವೇನು? ಇಷ್ಟು ದಿನ ಅಗತ್ಯವಿತ್ತು, ಗುಟ್ಟಾಗಿಟ್ಟಿದ್ದಿರಿ, ಈಗ ಪ್ರಾಣರಕ್ಷಣೆಗಾಗಿ ಪ್ರಕಾಶಪಡಿಸಿರಿ."

ಜಾನ್ ಪಿಟರ್ಸ್ ಮೆಲ್ಲನೆ ತಲೆಯಲ್ಲಾಡಿಸಿ ಹೇಳಿದ : "ಇಲ್ಲ ಬರ್ನಾರ್ಡ್, ನಾನು ವಿಪ್ಲವವಾದಿಗಳ ಅಧಿನಾಯಕನೆಂಬುದನ್ನು ಒಪ್ಪಲಾರೆ. ಅದು ಉಚಿತವಾಗದು. ಅವರು ನನ್ನನ್ನು ನೋಡದೆ, ಯಾರೆಂದು ಅರಿಯದೆ ಅಧಿನಾಯಕನೆಂದು ಸ್ವೀಕರಿಸಿದ್ದಾರೆ, ನನ್ನ ಮಾತನ್ನು ವೇದವಾಕ್ಯವೆಂದು ಪಾಲಿಸುತ್ತಿದ್ದಾರೆ; ಆದರೆ ಅವರಿಂದ ಅತ್ಯಂತ ಪಾಪಿಯೂ ಬ ತಿರಸ್ಕಾರಕ್ಕೆ ಪಾತ್ರನಾದ, ಕೊಲೆಗೇ ಯೋಗ್ಯನೆಂಬ ದೃಢಭಾವನೆಗೆ ಗುರಿಯಾದ ನಾನೇ ಅವನೆಂದು ಕೇಳಿದರೆ ಅವರು ನಂಬಲಾರರು. ನನ್ನನ್ನು ವಂಚಕನೆಂದು ತಿಳಿಯುವರು; ಪಾರಾಗಲು ಸುಳ್ಳು ಹೇಳುತ್ತಿದ್ದೇನೆಂದು ಎಣಿಸುವರು. ನಾನು ಅವರನ್ನು ಯಾವ ರೀತಿ ನಡೆಸಲು ವ್ಯವಸ್ಥೆಮಾಡಿರುವೆನೋ ಅದರಂತೆ ನಡೆಯಲೆಂದು ನನ್ನಿಚ್ಛೆ. ತಮ್ಮನ್ನೀವರೆಗೆ ನಾಯಕನಾಗಿ ನಡೆಸಿದವನು ಈ ರಾಜ್ಯದ ಯುವರಾಜನೆಂದು ಗೊತ್ತಾದರೆ, ನನ್ನ ಸದುದ್ದೇಶದ ಬಗ್ಗೆ ಅವರಿಗೆ ಸಂದೇಹವುಂಟಾಗುವುದು; ಅವರ ಕಾರ್ಯೋತ್ಸಾಹ ಕುಗ್ಗುವುದು. ಇಲ್ಲ ಬರ್ನಾರ್ಡ್, ನಾನೇ ಕಷ್ಟಪಟ್ಟು ಕಟ್ಟಿದ ಕಟ್ಟಡವನ್ನು ನಾನೇ ಕೆಡವಲಾರೆ. ನನ್ನ ಪರಿಚಯವನ್ನು ಪ್ರಕಟಗೊಳಿಸಲಾರೆ."

ಬರ್ನಾರ್ಡ್ ಕಾತರಭಾವದಿಂದ ನುಡಿದ : "ಎಂದರೆ ಉನ್ಮತ್ತಪ್ರಜೆಗಳ ಕೈಯಲ್ಲಿ ಸಾಯುವುದೇ ಸಂಗತವೆನ್ನುವಿರಾ? ನನ್ನ ಮಾತಿನಲ್ಲಿ ತಮಗೆ ವಿಶ್ವಾಸವಿಲ್ಲವೋ ಅಥವಾ ತಮ್ಮ ಬುದ್ಧಿಗೆ ಮಂಕು ಕವಿದಿದೆಯೊ? ಯುವರಾಜ, ನಾನೀಗಲೂ ಹೇಳುತ್ತೇನೆ, ಉನ್ಮತ್ತರಾದ ಪ್ರಜೆಗಳು ಈಗ ಪಾರ್ಲಿಮೆಂಟ್ ಭವನದೆದುರು ನೆರೆದಿದ್ದಾರೆ. ಅಲ್ಲಿಯ ವಿಚಾರದ ಇತ್ಯರ್ಥವನ್ನು ತಿಳಿದುಕೊಂಡವರೇ ಖಂಡಿತವಾಗಿ ಅರಮನೆಗೆ ನುಗ್ಗುವರು. ಅದಕ್ಕೆ ಹೆಚ್ಚು ವಿಲಂಬವೇನಾಗಲಿಕ್ಕಿಲ್ಲ. ರಾಜರು ಅರಮನೆಯಿಂದ ಓಡಿಹೋಗಬಹುದು, ಜನರು ಅವರನ್ನು ತಡೆಯುವುದಿಲ್ಲ; ತಮ್ಮನ್ನು ಮಾತ್ರ ಎಲ್ಲಿದ್ದರೂ ಅವರು ಬಿಡುವುದಿಲ್ಲ. ನಾನು ವಸ್ತುಸ್ಥಿತಿಯನ್ನೇ ಅರುಹಿದ್ದೇನೆ. ತಾವಿನ್ನು ಕಾಲಹರಣ ಮಾಡಬೇಡಿರಿ. ನನ್ನ ಮೋಟರಿನಲ್ಲಿ ಅರಮನೆಯನ್ನು ಬಿಟ್ಟು ಕೂಡಲೆ ಹೊರಡಿರಿ. ವ್ಹೆನ್ನಿಸಿಗೆ ಹೋಗಿರಿ, ಅಲ್ಲಿಯವರೆಗೆ ತಮಗೆ ತೊಂದರೆಯಾಗುವುದಿಲ್ಲ. ಮುಂದೆ ತಮ್ಮ ಭಾಗ್ಯದಲ್ಲೇನುಂಟೋ ಹೇಳಲಾರೆ. ಒಂದು ವೇಳೆ ನನ್ನ ಸಲಹೆಯನ್ನು ಒಪ್ಪದೆ ಇಲ್ಲಿಯೇ ಇರುವುದಾದರೆ, ಕೊನೆಯ ಪಕ್ಷ

ಗ್ರಾವೋ ಅವರಿಗಾದರೂ ತಮ್ಮ ಪರಿಚಯ ಮಾಡಿಕೊಡದಿದ್ದರೆ, ತಾವು ಉಳಿಯುವ ಸಂಭವವೇ ಇಲ್ಲ."

ಜಾನ್ ಪಿಟರ್ಸ್ ಒಂದು ಸಿಗಾರೇಟನ್ನು ತೆಗೆದು ಹೊತ್ತಿಸಿ ಸೇದಿ ಹೊಗೆಬಿಡುತ್ತ ಮೆಲ್ಲನೆಂದ : "ಬರ್ನಾರ್ಡ್, ನನಗಾದರೂ ನನ್ನ ಜೀವ ರಕ್ಷಣೆಯ ಹಂಬಲವಿದೆಯೋ ಇಲ್ಲವೋ ; ಆದರೆ ನೀವು ಮಾತ್ರ ನನಗಾಗಿ ಅತ್ಯಂತ ವ್ಯಾಕುಲರಾಗಿದ್ದೀರಿ; ದೇವರು ನನ್ನನ್ನು ಇಂತಹ ಹಿತೈಷಿಗಳ ಹಸ್ತ ದಿಂದ ಉಳಿಸಲಿ. ನಿಮ್ಮ ಅಭಿಪ್ರಾಯವನ್ನು ನಾನು ದೂಷಿಸುತ್ತಿಲ್ಲ ; ನನ್ನ ಹಿತಚಿಂತನೆಯಿಂದ ನೀವಿಲ್ಲಿಗೆ ಬಂದು ನನ್ನನ್ನು ಎಚ್ಚರಿಸಿದಿರಿ, ಅದಕ್ಕಾಗಿ ನಿಮಗೆ ನಾನು ಕೃತಜ್ಞನಾಗಿದ್ದೇನೆ ಆದರೆ ಆಯುಷ್ಯವನ್ನು ಹೆಚ್ಚಿಸುವುದು ಮನುಷ್ಯನ ಕೈಯಲ್ಲಿಲ್ಲ. ಅಪಮೃತ್ಯು ನನ್ನ ಹಣೆಯಲ್ಲಿಯೇ ಬರೆದಿದ್ದರೆ ಯಾರು ತಪ್ಪಿಸುವರು ? ನಾನು ಈ ರಾಜ್ಯದಲ್ಲಿರುವವರೆಗೂ ಸದ್ಯದ ಕ್ರಾಂತಿಗೆ ನನ್ನ ಸಂಬಂಧವೇನುಂಟೆಂಬುದನ್ನು ಪ್ರಕಟಗೊಳಿಸುವುದಿಲ್ಲ ; ರಾಜನನ್ನು ಸುರಕ್ಷಿತವಾಗಿ ಗಡಿ ದಾಟಿಸುವವರೆಗೆ ಎಲ್ಲಿಯೂ ಹೋಗುವುದೂ ಇಲ್ಲ. ಆ ಮೇಲೆ ಅಗತ್ಯವಿದ್ದರೆ ಪ್ರಕಟವಾಗಿಯೆ ದೇಶತ್ಯಾಗಮಾಡುವೆ."

ಬರ್ನಾರ್ಡ್ ನಿಟ್ಟುಸಿರನ್ನು ಬಿಟ್ಟು ನುಡಿದ : "ಯುವರಾಜ, ತಮ್ಮ ಸಾಹಸಕ್ಕೆ ಎಣೆಯಿಲ್ಲ. ತಾವು ಅತ್ಯಂತ ಅದ್ಭುತಮನುಷ್ಯರು. ತಮ್ಮನ್ನು ಶೋಚನೀಯ ಮೃತ್ಯುವಿನಿಂದ ಉಳಿಸಲು ಸಾಧ್ಯವಿದ್ದಷ್ಟು ಪ್ರಯತ್ನಿಸಿದೆ. ಇದಕ್ಕೂ ಹೆಚ್ಚು ನನ್ನಿಂದಾಗುವುದೇನು ? ಇಷ್ಟರಲ್ಲಿಯೇ ಓಡಿಹೋಗಿದ್ದರೆ ತಾವು ಬದುಕುವ ಆಸೆಯಿತ್ತು ಆದರಿನ್ನು ಸಮಯವಿಲ್ಲ ; ನಿಪ್ಲವವಾದಿ ಗಳು ಇಷ್ಟೊತ್ತಿಗಾಗಲೇ ಅರಮನೆಯ ಮುಂಬಾಗಿಲಿಗೆ ಬಂದಿರಬಹುದು."

ಬಳಿಕ ಜಾನ್ ಪಿಟರ್ಸ್ ಮತ್ತು ಬರ್ನಾರ್ಡ್ ಕಿಡಿಕಿಯಲ್ಲಿ ನೋಡಿದರು ದೂರದ ವರೆಗೆ ಹಬ್ಬಿದ ರಾಜಬೀದಿಯಲ್ಲಿ ನೂರಾರು ಮೋಟರುಗಳು ಸಾಲಿಟ್ಟು ಬರುತ್ತಿದ್ದವು. ಅವು ಕಾಪಿನವರಿಂದ ಆವೃತವಾಗಿದ್ದವು. ಅವುಗಳ ಹಿಂದೆ ಕಾಲಾಳುಗಳ ಮಹಾಪ್ರವಾಹ.

"ಇದೋ ನೋಡಿರಿ, ಅವರು ಬರುತ್ತಿದ್ದಾರೆ. ಬಹುಶಃ ಗ್ರಾವೋ ಈ ಜನರ ದಳಪತಿಯಾಗಿ ಬರುತ್ತಿರಬೇಕು. ತಾವು ಅವರಿಗೆ ಇದ್ದುದನ್ನು ತಿಳಿಸಿಬಿಡಿರಿ. ತಾವು ಯಾರೆಂಬುದನ್ನು ಹೇಳಿರಿ. ತಮ್ಮ ದನಿ ಅವರಿಗೆ

ಅಪರಿಚಿತವಲ್ಲ. ಈ ಮೊದಲು ನಗರದ ಶಾಂತಿರಕ್ಷಣೆಯ ಆಜ್ಞೆಯನ್ನು ಅರಮನೆಯಿಂದಲೇ ತಾವು ಫೋನಿನಮೂಲಕ ವಿಧಿಸಿದ್ದೀರಿ. ಆದುದರಿಂದ ತಮ್ಮ ವಾಸ್ತವ ಪರಿಚಯವನ್ನು ಅವರಿಗೆ ಮಾಡಿಕೊಟ್ಟರೆ ಅವರು ನಂಬದಿರಲಾರರು. ಗ್ರಾಮೋ ಚಾಣಾಕ್ಷರು, ಯಾವುದನ್ನೂ ಸಹಜವಾಗಿ ಅರಿತುಕೊಳ್ಳುವರು."

ಎಂದು ಬರ್ನಾರ್ಡ್ ಮತ್ತೊಮ್ಮೆ ಸೂಚಿಸಿದ. ಜಾನ್ ಪಿಟರ್ಸ್ ಈಗಲೂ ಒಪ್ಪಲಿಲ್ಲ. ಗೋಣಲ್ಲಾಡಿಸಿ ಅವನೆಂದ: " ಇಲ್ಲ ಮಿತ್ರರೆ, ನಿಮ್ಮ ಸೂಚನೆ ತಕ್ಕುದಾಗಿಲ್ಲ. ನೀವು ನನ್ನನ್ನುಳಿಸಲು ಹೆಣಗಾಡಬೇಡಿರಿ. ಇದರಲ್ಲಿ ನಿಮಗೆ ಗೆಲವಾಗದು. ವಿಶೇಷವಾಗಿ ನೀವು ಸಂಕಟದಲ್ಲಿಯೇ ಬೀಳಬಹುದು. ನನಗಾಗಿ ನಾನು ವ್ಯಾಕುಲನಾಗಿಲ್ಲ; ಆತ್ಮರಕ್ಷಣೆಯ ಸಾಮರ್ಥ್ಯ ನನ್ನಲ್ಲಿದೆ."

ಬರ್ನಾರ್ಡನಿಗೆ ಮಾತನಾಡಲು ಆಸ್ಪದವೀಯದೆ ಜಾನ್‌ಪಿಟರ್ಸ ರಾಜನ ಹತ್ತಿರ ಹೊರಟುಹೋದ. "ಮಹಾರಾಜ, ಪಾರ್ಲಿಮೆಂಟಿನಿಂದ ತಮ್ಮ ಕಡೆ ದೂತ ಬರುತ್ತಿದ್ದಾನೆ. ಪ್ರಜಾಸಭೆಯ ದೂತನಿಗೆ ಕೊಡಬೇಕಾದ ಉತ್ತರವನ್ನು ತಮ್ಮ ಆತ್ಮಗೌರವಕ್ಕೂ ತೇಜಸ್ವಿತೆಗೂ ಕುಂದುಬಾರದಂತೆ ಕೊಡಿರಿ ಆದಕ್ಕಾಗಿ ಈಗಿಂದಲೆ ಅಣಿಯಾಗಿರಿ."

ಯುವರಾಜನ ಮಾತನ್ನು ಕೇಳಿ ದೊರೆ ಅತ್ಯಂತ ವ್ಯಾಕುಲನಾದ. ಆತನ ಅವಸ್ಥೆ ಅತ್ಯಂತ ಶೋಚನೀಯವಾಯಿತು. ಆತನ ಆತ್ಮಸಂಯಮ ಶಕ್ತಿ ಲುಪ್ತವಾಗಿ ಮುಪ್ಪಿನಲ್ಲಿ ಮಗುತನ ಬಂದಿತು. ಅವನೆಂದ: ' ಜಾನ್ ಪಾರ್ಲಿಮೆಂಟಿನ ದೂತ ನನ್ನ ಕಡೆ ಬರುತ್ತಾನೆಯೆ? ದೂತನಿಗೆ ನಾನು ಸರಿಯಾಗಿಯೆ ಉತ್ತರ ಕೊಡುವೆ; ಅವನಿಗೆ ಸಂತೋಷವಾಗುವಂತೆಯೆ ಮಾಡುವೆ; ಯಾವ ಭೀತಿಯೂ ಇಲ್ಲವಷ್ಟೆ? ನನಗೆ ವಯಸ್ಸಾದೆ, ಸಂಕಟವಿಪತ್ತುಗಳು ಮನಸಿಗೆ ಸೇರುವುದಿಲ್ಲ. ಈವರೆಗೆ ಎಷ್ಟೋ ವಿಪತ್ತುಗಳ ಅಘಾತವನ್ನು ಸಹಿಸಿದ್ದೇನೆ, ಇನ್ನು ನನ್ನೀ ನರೆತ ತಲೆ ಯಾವ ಆಘಾತವನ್ನೂ ಸಹಿಸಲಾರದು. ಜಾನ್, ನೀನು ಈಗ ನನ್ನನ್ನು ತೊರೆದುಹೋಗಬೇಡ. ನನ್ನ ಬಳಿಯಲ್ಲಿಯೆ ಇರು, ನಾನು ಸತ್ತರೆ ನಿನಗೆ ಪಟ್ಟಗಟ್ಟಿ ಸಾಯುವೆ."

ಜಾನ್ ಪಿಟರ್ಸ್ ಹೇಳಿದ: " ಇಲ್ಲ ಚಿಕ್ಕ, ನಾನು ತಮ್ಮನ್ನು ಬಿಟ್ಟು ಹೋಗುವುದಿಲ್ಲ. ನಾನು ಡಾಕ್ಟರ್ ರಿಸ್ ಇಬ್ಬರೂ ತಮ್ಮೊಂದಿಗೇ ಇರುವೆವು.

ಪಾರ್ಲಿಮೆಂಟಿನ ದೂತನೊಡನೆ ಮಾತನಾಡಲು ತಮಗೆ ಕಷ್ಟವಾಗುತ್ತಿದ್ದರೆ, ಆ ಕೆಲಸವನ್ನು ನನಗೊಪ್ಪಿಸಬಹುದು. ಆತನಿಗೆ ಸರಿಯಾದ ಉತ್ತರವನ್ನು ನಾನೇ ಕೊಡುತ್ತೇನೆ."

ರಾಜನಿಗೆ ಸಂತೋಷವಾಯಿತು. "ಸರಿ, ನಿನ್ನ ಮಾತು ಕೇಳಿ ಸಂತೋಷವಾಯಿತು. ಈ ವಯಸ್ಸಿನಲ್ಲಿ ವಾದಪ್ರತಿವಾದವೆಂದರೆ ಮನಸು ಬೇಸರಿಸುತ್ತಿದೆ; ಕೊಂಚ ವಿರಾಮವನ್ನು ಬಯಸುತ್ತಿದೆ. ನನಗಿಂದು ಬಹಳ ದಣಿವಾಗಿದೆ; ಎಲ್ಲ ಭಾರ ನಿನಗೊಪ್ಪಿಸಿದ್ದೇನೆ ಅವರಿಗೆ ಹೇಳಬೇಕಾದುದನ್ನು ಹೇಳಿಕಳಿಸು. ನಿನ್ನೆ ರಾತ್ರಿ ಬಹಳ ಹೊತ್ತು ನಿದ್ದೆಗೆಟ್ಟಿದ್ದೆ; ಆದುದರಿಂದ ತೂಕಡಿಕೆ ಬರುತ್ತಿದೆ ಏನು ಮಾತನಾಡುತಿದ್ದೆನೆಂಬುದು ಕೂಡ ಅರೆಮರೆವಾಗಿದೆ.—ಜಾನ್, ಪಾರ್ಲಿಮೆಂಟಿನಿಂದ ದೂತ ಏತಕ್ಕಾಗಿ ಬರುತ್ತಾನೆ?"

ಜಾನ್ ಪಿಟರ್ಸ್ ಮಾತನಾಡುವ ಮೊದಲೇ ಪೇದೆ ಬಂದು, ಪಾರ್ಲಿಮೆಂಟಿನಿಂದ ಐವರು ಸದ್ಗೃಹಸ್ಥರು ದೊರೆಗಳನ್ನು ಕಾಣಲು ಬಂದಿರುವುದನ್ನು ಅರುಹಿದ. ತತ್‌ಕ್ಷಣವೆ ರಾಜನು ಎದ್ದುನಿಂತು ತಲೆತುರಿಸಿಕೊಳ್ಳುತ್ತ "ಕರೆದುಕೊಂಡು ಬಾ," ಎಂದು ಆಜ್ಞಾಪಿಸಿದ.

ಮರುನಿಮಿಷದಲ್ಲಿ ಆ ಐವರುಜನರು ಒಳಕ್ಕೆ ಬಂದು, ರಾಜನಿಗೂ ಯುವರಾಜನಿಗೂ ಯಥಾವಿಧಿಯಾಗಿ ವಂದಿಸಿದರು. ಜಾನ್ ಪಿಟರ್ಸ್ ಅವರನ್ನು ಗುರುತಿಸಿದ. ಗುಪ್ತಸಮಿತಿಯ ವಿದ್ರೋಹಿಗಳವರ. ಹಲವು ಬಾರಿ ಜಾನ್ ಪಿಟರ್ಸನೊಂದಿಗೆ ಗುಪ್ತವಾಗಿ ಚರ್ಚಿಸಿ, ಅವನ ಮಾತನ್ನು ವೇದವಾಕ್ಯದಂತೆ ಪಾಲಿಸುತ್ತ ಬಂದವರು. ಅವರನ್ನು ನೋಡಿ ಜಾನ್ ಪಿಟರ್ಸ್ ಮುಗುಳ್ನಕ್ಕ. ಅವರು ಮಾತ್ರ ತಮ್ಮ ಬಹುರೂಪಿಯಾದ ದಲಪತಿಯನ್ನು ಗುರುತಿಸಲಿಲ್ಲ.

## ೩೮

ಗ್ರಾಮೋ ಪಾರ್ಲಿಮೆಂಟ್ ಪ್ರತಿನಿಧಿ ಮಂಡಲದ ಹಿರಿಯ ಆತ ಒಳ್ಳೇ ಮಾತುಗಾರ, ದೃಢಸಂಕಲ್ಪ, ಸತ್ಯವಾದಿ, ಕರ್ಮಠ; ಯಾರ ದೋಷಗಳನ್ನು ನಿರ್ದಾಕ್ಷಿಣ್ಯವಾಗಿ ತಿಳಿಸುವ ಸ್ಪಷ್ಟವಾಗಿ; ವೃಥಾ ಆಡಂಬರ ಅವನಿಗೆ ಸೇರದು; ಅವನು ಜನಸಾಮಾನ್ಯರ ಗೌರವ-ಶ್ರದ್ಧೆಗಳಿಗೆ ಪಾತ್ರನಾಗಿದ್ದ ವ್ಯಕ್ತಿ, ಗ್ರಾಮೋ ಪಾರ್ಲಿಮೆಂಟಿನ ಸಂದೇಶವನ್ನು ರಾಜನಿಗೆ ಅಸಂಕೋಚ

ವಾಗಿ ತಿಳಿಸಿದ : "ಮಹಾರಾಜ, ನಾನೂ ನನ್ನ ಈ ಸಹಕಾರಿಗಳೂ ಬರ್ಜಿ-ಲಂಡಿನಲ್ಲಿ ಸ್ಥಾಪಿತವಾದ ಸಾಧಾರಣ ತಂತ್ರದ ಪ್ರತಿನಿಧಿಗಳಾಗಿ ಬಂದಿದ್ದೇವೆ. ನಮ್ಮ ಹೊಸ ಪ್ರಜಾಪ್ರತಿನಿಧಿ ಸಭೆ–ಕೇಳಿದರೆ ತಮಗೆ ದುಃಖವಾದೀತು–ಈ ರಾಜ್ಯದಲ್ಲಿ ಸಾಧಾರಣ ತಂತ್ರವನ್ನು ಘೋಷಿಸಿದೆ"

ಗ್ರಾಮೋನ ಮಾತನ್ನು ಕೇಳಿ ದೊರೆ ಶೂನ್ಯದೃಷ್ಟಿಯಿಂದ ನೋಡುತ್ತ ಹಾ ಹಾ ಎಂದು ನಕ್ಕುಬಿಟ್ಟ. ಅವನ್ನು ಕಂಡು ರಾಜನ ತಲೆ ಸರಿಯಿಲ್ಲ, ವಿಪ್ಲವದ ಪ್ರಬಲವಾದ ಆಘಾತದಿಂದ ಅವನ ಮಿದುಳಿನ ಕೀಲು ಸಡಿಲಿದೆ ಎಂದು ಎಲ್ಲರೂ ಅರಿತುಕೊಂಡರು.

ರಾಜನೆಂದ : "ಮಹಾಶಯರೆ, ನನ್ನ ಪ್ರಕೃತಿಯೀಗ ಬಹಳ ಅಸ್ವಸ್ಥವಾಗಿದೆ. ಈ ಬಗ್ಗೆ ಯುವರಾಜನೊಡನೆಯೆ ಮಾತನಾಡಿಕೊಳ್ಳಿರಿ. ಆತನಿಗೇ ಎಲ್ಲ ಹೊಣೆಯನ್ನು ಒಪ್ಪಿಸಿದ್ದೇನೆ. ಅವನು ಮಾಡಿದಂತೆ ಆಗುವುದು." ಬಳಿಕ ದೊರೆ ಸ್ವಲ್ಪ ದೂರದಲ್ಲಿದ್ದ ವಿರಮಾಸನದಲ್ಲಿ ಒರಗಿದ. ಯಾರ ಕಡೆಗೂ ಹೊರಳಿ ನೋಡಲಿಲ್ಲ. ಅವನ ರೀತಿ ಸಂಪೂರ್ಣ ನಿರ್ಲಿಪ್ತನಂತಿತ್ತು.

ಗ್ರಾಮೋ ಯುವರಾಜನ ಕಡೆ ನೋಡಿ ಗಂಭೀರಸ್ವರದಲ್ಲಿ ನುಡಿದ : "ಮಹಾಶಯರೆ, ರಾಜರು ತಮ್ಮನ್ನು ತಮ್ಮ ಪ್ರತಿನಿಧಿಯಾಗಿ ನಿಯಮಿಸಿದ್ದಾರೆ. ಇಂದಿನಿಂದ ಈ ದೇಶದಲ್ಲಿ ರಾಜತಂತ್ರ ಅಸ್ತಂಗತವಾಯಿತು ಪಾರ್ಲಿಮೆಂಟ್ ಸಭೆ ಸರ್ವಸಮ್ಮತಿಯಿಂದ ಸಾಧಾರಣತಂತ್ರವನ್ನು ಪ್ರತಿಷ್ಠಿಸಿದೆ. ನೂತನ ಪ್ರಭುತ್ವದಲ್ಲಿ ಯಾರು ಯಾವ ಕಾರ್ಯವನ್ನು ವಹಿಸಿಕೊಳ್ಳಬೇಕೆಂಬುದೂ ನಿಶ್ಚಿತವಾಗಿದೆ. ಸಾಧಾರಣ ತಂತ್ರದ ಸಭಾಪತಿಯೆಂದು ಪಾರ್ಲಿಮೆಂಟು ನನ್ನನ್ನಾರಿಸಿದೆ. ಆ ಅಧಿಕಾರದಿಂದಲೇ ನಾನೀಗ ತಮ್ಮೊಡನೆ ಮಾತನಾಡುತ್ತಿದ್ದೇನೆ."

"ಒಳ್ಳೆಯ ಸುದ್ದಿ, ತಾವು ಈ ಉನ್ನತಿಪಡೆದುದನ್ನು ಕೇಳಿ ಸಂತೋಷವಾಯಿತು. ತಮಗೆ ಇನ್ನೂ ಏನು ಹೇಳಬೇಕಾಗಿದೆಯೋ ಹೇಳಿರಿ." ಎಂದ ಯುವರಾಜ.

ಯುವರಾಜನ ಮಾತು ಗ್ರಾಮೋನನ್ನು ಅತ್ಯಂತ ಅಚ್ಚರಿಗೊಳಿಸಿತು. ಈ ಸುದ್ದಿಯಿಂದ ಯುವರಾಜನ ತಲೆಗೆ ಸಿಡಿಲುಬಡಿದಂತಾಗುವುದು, ದುಃಖ

ಕ್ಷೋಭಗಳಿಂದ ಅವನ ಬಾಯಿಯೋ ಹೋಗುವುದು ಎಂದು ಗ್ರಾವೋ ಭಾವಿಸಿದ್ದ. ಆದರೆ ಪ್ರತ್ಯಕ್ಷವಾಗಿ ಕಂಡದ್ದು ವಿಪರೀತ – ಯುವರಾಜನು ಈ ಸುದ್ದಿಯಿಂದ ಬಿಂದುಮಾತ್ರವೂ ವಿಚಲಿತನಾಗಲಿಲ್ಲ, ಅವನ ಮುಖ ಕೊಂಚವೂ ಚಿಂತಾಕುಲವಾಗಲಿಲ್ಲ, ಅವನ ಲಲಾಟದ ಒಂದು ಶಿರವೂ ಕಂಪಿತವಾಗಲಿಲ್ಲ. ತಿರುಗಿ, ಯುವರಾಜನ ತುಟಿಗಳಲ್ಲಿ ಮೆಲುನಗೆಯ ಗೆರೆಯೊಂದು ಕಾಣಿಸಿತು!

ಗ್ರಾವೋ ಹೇಳಿದ: "ರಾಜರು ಪಾರ್ಲಿಮೆಂಟಿನ ನಿರ್ಣಯದಂತೆ ಸಿಂಹಾಸನಚ್ಯುತರಾಗಿದ್ದಾರೆ ನಿಜ. ಆದರೆ ಅವರ ಮೇಲೆ ಯಾವ ಅತ್ಯಾಚಾರವೂ ನಡೆಯದಂತೆ ನಾವು ನೋಡಿಕೊಳ್ಳುವೆವು. ಅವರು ತಡವಿಲ್ಲದೆ ದೇಶತ್ಯಾಗ ಮಾಡಬೇಕೆಂದು ನನ್ನ ಸೂಚನೆ. ಯಥಾವಿಧಿಯಾದ ಘೋಷಣೆಯಿಂದ ಅವರನ್ನು ಪದಚ್ಯುತಗೊಳಿಸುವುದು ಇಬ್ಬರಿಗೂ ಶ್ರೇಯಸ್ಕರವಲ್ಲ. ಅದರ ಆವಶ್ಯಕತೆಯೂ ನನಗೆ ತೋರುವುದಿಲ್ಲ ಸಾಧಾರಣತಂತ್ರ ಪ್ರಚಲಿತವಿದ್ದ ದೇಶದಲ್ಲಿ, ರಾಜಶಾಸನ ನಡೆಯುವುದಿಲ್ಲ; ಈ ದೇಶದಲ್ಲಿ ರಾಜನಿಗೆ ಸ್ಥಾನವಿಲ್ಲ."

ಪಿಟರ್ಸ್ ಹೇಳಿದ: "ಈ ಪರಿಸ್ಥಿತಿಯಲ್ಲಿ ರಾಜನು ಏನು ಮಾಡಬೇಕೆಂಬ ವಿಷಯದಲ್ಲಿ ನಿಮ್ಮೊಂದಿಗೆ ನನ್ನ ಒಮ್ಮತವಿದೆ."

ಗ್ರಾವೋ ಹೇಳಿದ: "ನಿಲ್ದಾಣದಲ್ಲಿ ಒಂದು ಉಗಿಬಂಡಿ ಮೊರೆಗಾಗಿ ಕಾದಿದೆ. ಅವರು ದೇಶಾಂತರ ಹೋಗಲಿ. ರಾಜರ ವ್ಯಕ್ತಿಗತ ಸೊತ್ತಿನ ವಿಷಯದಲ್ಲಿ ನಾವು ಕೈಹಾಕುವುದಿಲ್ಲ. ಅವರ ಯಾವ ಆಸ್ತಿಯನ್ನೂ ವಶಪಡಿಸಿಕೊಳ್ಳುವುದಿಲ್ಲ. ಅವರು ತಮ್ಮ ಸಂಪತ್ತಿಯ ಆಡಳಿತದ ಭಾರವನ್ನು ತಮಗೆ ಬೇಕಾದವರಿಗೆ ಒಪ್ಪಿಸಿ ಹೋಗಬಹುದು. ಆದರೆ ಅವರು ಈಗಿಂದೀಗಲೇ ಹೊರಡಬೇಕು ಮಾತ್ರ."

"ಸರಿ, ರಾಜನ ವಿಷಯ ತಿಳಿದಂತಾಯಿತು. ನನ್ನ ಬಗ್ಗೆ ಪಾರ್ಲಿಮೆಂಟಿನ ಅಪ್ಪಣೆಯೇನಿದೆ?" ಕೇಳಿದ ಜಾನ್ ಪಿಟರ್ಸ್.

ಗ್ರಾವೋ ಶುಷ್ಕಸ್ವರದಲ್ಲಿ ಉತ್ತರವಿತ್ತ: "ಮಹಾಶಯರೆ, ಇತರ ಮಾತು ಹೇಳುವ ಪೂರ್ವದಲ್ಲಿ ವೈಯಕ್ತಿಕವಾಗಿ ನಾನೊಂದು ಸಲಹೆ ಕೊಡಬೇಕೆಂದಿದ್ದೇನೆ. ಈ ಕ್ಷಣವೇ ತಾವು ತಮ್ಮ ಬಂಧುಬಾಂಧವರಲ್ಲಿ ಆಶ್ರಯ

ಹೊಂದಬೇಕು; ಅವಿಲಂಬವಾಗಿ ಛದ್ಮವೇಷವನ್ನು ಧರಿಸಿ ಯಾವ ರೀತಿ ಯಿಂದಲಾದರೂ ದೇಶತ್ಯಾಗ ಮಾಡಬೇಕು; ತಡವಾದರೆ ಪ್ರಜೆಗಳು ತಮ್ಮನ್ನು ಓಡಿಹೋಗಲು ಬಿಡಲಾರರು. ದೊರೆ ವೃದ್ಧರು; ವಿಶೇಷವಾಗಿ, ಅವರ ಅತ್ಯಾಚಾರ ಪ್ರಜೆಗಳನ್ನು ಜರ್ಜರಿತ ಮಾಡಿದ್ದರೂ ಅವರು ಒಮ್ಮೊಮ್ಮೆ ಒಂದೆರಡು ಒಳ್ಳೆಯ ಕೆಲಸಗಳನ್ನೂ ಮಾಡಿದ್ದಾರೆ; ಆದುದರಿಂದ ಅವರ ಬಗ್ಗೆ ಪ್ರಜೆ-ಗಳಲ್ಲಿ ಅಷ್ಟೊಂದು ರೊಚ್ಚಿಲ್ಲ. ಆದರೆ ತಮ್ಮ ಜೀವನ ಕಲಂಕಪೂರ್ಣ; ಜನರ ಸಹಾನುಭೂತಿಯನ್ನಾಗಲಿ ಶ್ರದ್ಧೆಯನ್ನಾಗಲಿ ಪಡೆಯುವಂತಹ ಒಂದೇ ಒಂದು ಕೆಲಸವನ್ನು ತಾವು ಮಾಡಿಲ್ಲ. ತಾವು ಯಾವಾಗಲೂ ಪಾಪಪಂಕದಲ್ಲಿ ಮುಳುಗಿದ್ದೀರಿ; ತಾವು ಮುಂದೆ ಅಗಸಾಗತಕ್ಕವರೆಂಬ ಕಲ್ಪನೆಯಿಂದ ಪ್ರಜೆ-ಗಳು ಅತ್ಯಂತ ಭಯಭೀತರಾಗಿದ್ದರು; ಅಲ್ಲದೆ ಬಹುಜನರು ತಮ್ಮ ಅತ್ಯಾ-ಚಾರಕ್ಕೆ ಈಡಾಗಿದ್ದರೆ, ಆ ಅಪಮಾನವನ್ನು ಅವರೆಂದಿಗೂ ಮರೆಯಲಾರರು. ಇದೆಲ್ಲ ತಮಗೆ ತಿಳಿದೇ ಇದೆ, ಹೇಳಬೇಕಾಗಿಲ್ಲ ಇದ್ದ ಸ್ಥಿತಿ ಇಷ್ಟು. ತಾವು ಆತ್ಮರಕ್ಷಣೆಯ ಉಪಾಯವನ್ನು ಯೋಚಿಸಿಕೊಳ್ಳಿರಿ.''

ಜಾನ್ ಪಿಟರ್ಸ್ ಧೀರಭಾವದಿಂದ ನುಡಿದ: “ಮಹಾಶಯರೇ, ತಮ್ಮ ಹಿತಸೂಚನೆಗಾಗಿ ಕೃತಜ್ಞನಾಗಿದ್ದೇನೆ. ಆದರೆ ತಮ್ಮ ಉಪದೇಶದಂತೆ ನಡೆದೇನೋ ಇಲ್ಲವೇ ಹೇಳಲಾರೆ. ಇರಲಿ. ಇನ್ನೇನಾದರೂ ಹೇಳುವುದಿದೆಯೆ?”

ಗ್ರಾವೊ ಹಿಂದುಮುಂದು ನೋಡತೊಡಗಿದ. ಅವನ ಹೃದಯದಲ್ಲಿ ಸಾಹಸಿಗಳ ವಿಷಯದಲ್ಲಿ ಶ್ರದ್ಧೆಯಿತ್ತು. ಹೆಚ್ಚಾಗಿ, ಈ ಭೀಷಣ ಸಂಕಟ-ಕಾಲದಲ್ಲಿಯೂ ಯುವರಾಜನಲ್ಲಿ ಈ ಸಂಯಮವನ್ನು, ಈ ನಿರ್ಭಯತೆ-ಯನ್ನು ಕಂಡು ಗ್ರಾವೋನ ಮನದಲ್ಲಿ ಅವನ ಬಗ್ಗೆ ಸನ್ಮಾನವುಂಟಾಯಿತು. ಕಿಡಿಕಿಯ ಕಡೆ ನೋಟವನ್ನು ಬೀರಿ ಗ್ರಾವೋ ಹೇಳಿದ: “ವಿಶೇಷವೇನೂ ಹೇಳತಕ್ಕುದಿಲ್ಲ. ಒಂದು ಮಾತನ್ನು ಮಾತ್ರ ಹೇಳುವೆ: ಬರ್ಜಿಲಂಡ್ ರಾಜ್ಯದಲ್ಲುಂಟಾದ ಈ ಕಲ್ಯಾಣಕರ ಪರಿವರ್ತನೆ, ನರಶೋಣಿತದಿಂದ ಕಲಂಕಿತವಾಗಬಾರದೆಂದು ನಮ್ಮ ದಳಪತಿಯ ಅಭಿಪ್ರಾಯ. ಅವರ ಅಪ್ಪಣೆ ಯನ್ನು ಮೀರುವಂತಿಲ್ಲ. ಅದಕ್ಕೇ ತಾವು ಈ ಕ್ಷಣವೇ ಪಲಾಯನ ಮಾಡ-ಬೇಕೆಂದು ನನ್ನ ಅನುರೋಧ. ಅರಮನೆಯ ಹಿಂದುಗಡೆ ಎರಡು ಮೋಟರು

ಗಳಿವೆ. ಅವುಗಳಲ್ಲೊಂದರಿಂದ ತಾವು ಗುಪ್ತ ಪಥದಲ್ಲಿ ನಿಲ್ದಾಣಕ್ಕೆ ಹೋಗಿರಿ. ಅಲ್ಪಾವಕಾಶದಲ್ಲಿಯೆ ಎಕ್ಸ್‌ಪ್ರೆಸ್ ಟ್ರೇನ್ ಸಿಕ್ಕುವುದು; ಆದರಿಂದ ದೇಶಾಂತರವನ್ನು ಸೇರಿರಿ. ತಡವಾದರೆ ಹಿಂಸಕರ ಕೈಯಲ್ಲಿ ಸಿಕ್ಕಬೀಳುವಿರಿ."

"ತಮ್ಮ ಅನುಗ್ರಹಕ್ಕಾಗಿ ಧನ್ಯವಾದಗಳು. ತಮ್ಮೀ ಸೂಚನೆ ಯುಕ್ತವೇ ಸರಿ. ಡಾಕ್ಟರ್ ರಿಸ್, ಮಹಾರಾಜರ ಕಾರ್ಯದರ್ಶಿಯನ್ನು ಕರೆಸಿ, ಅವರ ಪ್ರಸ್ಥಾನದ ವ್ಯವಸ್ಥೆ ಮಾಡಿಸಿರಿ." ಎಂದ ಜಾನ್ ಪಿಟರ್ಸ್.

ಅರಮನೆಯ ಹೆಬ್ಬಾಗಿಲಲ್ಲಿ ಒಮ್ಮೆಲೆ ಕೋಲಾಹಲವೆದ್ದಿತು. ಲೋಹ ಕವಾಟವನ್ನು ಮುರಿದು ಒಳನುಗ್ಗಲು ಕ್ರುದ್ಧರಾದ ಅಸಂಖ್ಯ ನಾಗರಿಕರು ಅಧೀರರಾಗಿದ್ದರು ಕಿಡಿಕಿಗೆ ಕಲ್ಲುಗಳನ್ನು ಬೀಸತೊಡಗಿದರು. ರಾಜನು ಅದನ್ನು ಕೇಳಿ ನಡುಗುವ ಹೆಜ್ಜೆಗಳನ್ನಿಡುತ್ತ ಬಾಗಿಲಕಡೆ ಮುಂದುವರಿದ. "ಜಾನ್. ನಡೆ. ನಾವು ಓಡಿ ಹೋಗಿ ಉಳಿದುಕೊಳ್ಳುವಾ. ಇಂಥ ಸುಖದ ಅರಸೊತ್ತಿಗೆ ಬೇಕಾಗಿಲ್ಲ; ಬೇಗ ನಡೆ."

ರಾಜನು ಡಾಕ್ಟರ್ ರಿಸ್ ಮತ್ತು ಬರ್ನಾರ್ಡರೊಡನೆ ಒಂದು ಮೋಟರನ್ನೇರಿದ. ಇನ್ನೊಂದು ಬಂಡಿಯಲ್ಲಿದ್ದ ಗ್ರೇಸ್ ಜಾನ್ ಪಿಟರ್ಸ ನನ್ನು ಕೈಹಿಡಿದು ಹತ್ತಿಸಿಕೊಂಡಳು. ಅವಳನ್ನಲ್ಲಿ ಕಂಡು ಜಾನ್ ಪಿಟರ್ಸ್ ಅತ್ಯಂತ ವಿಸ್ಮಯಗೊಂಡ. ಈ ಸಮಯದಲ್ಲಿ ಈಸ್ಥಳದಲ್ಲಿ ಅವಳನ್ನು ಕಂಡೇನೆಂದು ಆತ ಬಗೆದಿರಲಿಲ್ಲ.

ಅವನ ಬೆರಗನ್ನು ಕಂಡು ಗ್ರೇಸ್ ಎಂದಳು: "ಏಕೆ ಅವಾಕ್ಕಾಗಿ ನೋಡುತ್ತೀರಿ ನನ್ನನ್ನು? ನಾನು ನಿಮಗಾಗಿ ಕಾದಿದ್ದು ಒಂದು ಗಂಟೆಯಾ-ಯಿತು. ಬರ್ನಾರ್ಡ್ ನನ್ನನ್ನು ಕರೆಕಳುಹಿದ್ದರು. ಹಠಾತ್ ಏನಾದರೂ ಗಲಭೆಯಾದರೆ, ನೀವು ಅರಮನೆಯಿಂದ ಹೊರಡಲು ಒಪ್ಪದಿದ್ದರೆ, ಎಂಬ ಸಂದೇಹ ಭಯಗಳಿಂದ ನಾನು ನಿಮ್ಮನ್ನು ಕರೆದೊಯ್ಯಲು ಬಂದಿದ್ದೇನೆ."

"ನೀನು ನನ್ನ ಸಂಗಡ ಬರುವೆಯಾ?"

"ಏಕೆ ಬರಲಾರೆ? ಈ ನಗರದಲ್ಲಿ ಇನ್ನು ಯಾವ ಆಸೆಯಿಂದ ಇರಬೇಕು? ನಡೆಯಿರಿ, ಮತ್ತೆ ಯಾವ ದೇಶದಲ್ಲಾದರೂ ನನಗೆ ತಲೆ ಗಾಯ್ದುಕೊಳ್ಳಲು ಎಡೆಯುಂಟೋ ಹೇಗೋ ನೋಡುವಾ."

ಜನಸಂಚಾರ ವಿರಳವಾಗಿದ್ದ ದಾರಿಯಲ್ಲಿ ಮೋಟರುಗಳು ಧಾವಿಸಿದವು. ಆ ಊರಿಗೆ ಎರಡು ನಿಲ್ದಾಣಗಳಿದ್ದವು; ಚಿಕ್ಕ ನಿಲ್ದಾಣದಲ್ಲಿ ಅವರಿಗಾಗಿ ಕಾಯ್ದಿರಿಸಿದ ಬಂಡಿ ನಿಂತಿತ್ತು. ಮೋಟರುಗಳು ಅಲ್ಲಿಗೆ ನಡೆದವು. ದಾರಿಯಲ್ಲಿ ಯಾರೂ ಅವನ್ನು ತಡೆಯಲಿಲ್ಲ. ನಾಗರಿಕರು ವ್ಯಗ್ರರಾಗಿ ಪಾರ್ಲಿಮೆಂಟ್ ಭವನದ ಕಡೆಗೆ ನುಗ್ಗುತ್ತಿದ್ದರು. ಈ ಮೋಟರುಗಳು ಅವರ ಲಕ್ಷ್ಯವನ್ನು ಸೆಳೆಯಲಿಲ್ಲ. ಅವರು ಸುರಕ್ಷಿತವಾಗಿ ನಿಲ್ದಾಣವನ್ನು ಸೇರಿದರು.

ರಾಜನು ತನ್ನ ಡಬ್ಬಿಯನ್ನೇರಿ ಕುಳಿತ ಬಳಿಕ ಬರ್ನಾರ್ಡ್ ಹೇಳಿದ: "ದೇವರಿಗೆ ಧನ್ಯವಾದ. ಇದು ವರೆಗೂ ತಮ್ಮನ್ನು ಸುರಕ್ಷಿತವಾಗಿ ಪಾರು ಮಾಡಿದ. ಬಂಡಿ ಇಲ್ಲಿಂದ ಒಮ್ಮೆ ಹೊರಟಿತೆಂದರೆ ಈ ದೇಶದ ಯಾವ ನಿಲ್ದಾಣದಲ್ಲಿಯೂ ನಿಲ್ಲುವುದಿಲ್ಲ. ಯಾರು ಹೇಳಿದರೂ ನಿಲ್ಲಿಸಕೂಡದೆಂದು ಚಾಲಕನಿಗೆ ಕಟ್ಟಪ್ಪಣೆಯಾಗಿದೆ. ತಾವು ಗಂಡಾಂತರವಿಲ್ಲದೆ ಪ್ಯಾರಿಸ್ ತಲುಪುವಿರೆಂದು ಆಶಿಸುತ್ತೇನೆ. ಅಲ್ಲಿ ನಾನು ತಮ್ಮನ್ನು ಕಾಣುತ್ತೇನೆ."

ಜಾನ್ ಪಿಟರ್ಸ್ ಉಗಿಬಂಡಿಯನ್ನೇರಲು ಉದ್ಯುಕ್ತನಾದಾಗ ಒಬ್ಬ ಮನುಷ್ಯನು ತೇಕುತ್ತ ತೇಕುತ್ತ ಓಡಿ ಬಂದ. ಅವನ ಉಡಿಗೆ ತೊಡಿಗೆ ಅಕಳಸಕಳ ಆಗಿದ್ದವು; ಟೊಪ್ಪಿಗೆ ಎಲ್ಲಿ ಬಿದ್ದುಹೋಗಿತ್ತೋ ಹೋಗಿತ್ತು. ಹಣೆಯ ಮೇಲೆ ಬೆವರು ಹರಿಯುತ್ತಿತ್ತು. ಬಂಡಿ ಬಿಡುವುದರಲ್ಲಿತ್ತು. ಆ ಮನುಷ್ಯ ಓಡಿ ಬಂದು ಜಾನ್ ಪಿಟರ್ಸನ ಕೈಯಲ್ಲಿ ಒಂದು ಕಾಗದವನ್ನು ಕೊಟ್ಟ. ಕಾಗದದಲ್ಲಿ ಪೆನ್ಸಿಲಿನಿಂದ ಗೀಚಿದ ಒಂದೆರಡು ಸಾಲುಗಳಿದ್ದವು.— ಯಾವನೋ ಪ್ರಾಣಸಂಕಟದಲ್ಲಿ ಸಿಲುಕಿ ಅವಸರದಿಂದ ಬರೆದು ಕಳಿಸಿದಂತಿತ್ತು. ಅದನ್ನೋದಿ ಜಾನ್ ಪಿಟಸ್ ಬಂಡಿಯನ್ನಡರಲು ಕಾಲೆತ್ತಿದವನು ಹಿಂತೆಗೆದ.

ತಾನು ಸಿಳ್ಳು ಹಾಕಿದರೂ ಜಾನ್ ಪಿಟರ್ಸ್ ಕೆಳಗೇ ಇದ್ದುದನ್ನು ಕಂಡು ಗಾರ್ಡ್ ವಿನಯದಿಂದ ಬಿನ್ನವಿಸಿದ: "ಯುವರಾಜ, ಇನ್ನು ಸಮಯವಿಲ್ಲ. ದಯವಿಟ್ಟು ಹತ್ತಿರಿ, ಬಂಡಿ ಹೊರಟಿತು."

ಆ ಮಾತನ್ನು ಲೆಕ್ಕಿಸದೆ ಜಾನ್ ಪಿಟರ್ಸ್ ಉಗಿಬಂಡಿಯ ಕಿಡಿಕಿಯಲ್ಲಿ ಮುಖವನ್ನು ಚಾಚಿ, ಗ್ರೇಸಳನ್ನು ಆಲಿಂಗಿಸಿ ಚುಂಬಿಸಿದ. ಬಳಿಕ

ಹಿಂದೆ ಸರಿದು ಪ್ಲ್ಯಾಟ್‌ಫಾರ್ಮಿನಲ್ಲಿಯೇ ನಿಂತ. ಗಾರ್ಡ್ ಏನಂದರಿಯದೆ ಬರ್ನಾರ್ಡನ ಮೋರೆಯನ್ನು ನೋಡತೊಡಗಿದ.

"ಏನು ಸಮಾಚಾರ?" ಬರ್ನಾರ್ಡ್ ವಿಸ್ಮಯದಿಂದ ಜಾನ್ ಪಿಟರ್ಸನ ಕಡೆ ನೋಡಿ ಕೇಳಿದ.

"ವಿಶೇಷವೇನಿಲ್ಲ. ಆದರೂ ನಾನು ಹೊರಡುವಂತಿಲ್ಲ. ಬರ್ನಾರ್ಡ್, ಬಂಡಿಯನ್ನು ಬಿಡುವಂತೆ ಹೇಳಿರಿ. ರಾಜರು ಭಯ–ಚಿಂತೆಗಳಿಂದ ಅಧೀರರಾಗಿದ್ದಾರೆ. ಅವರನ್ನು ಎಷ್ಟು ಬೇಗ ಗಡಿ ದಾಟಿಸಿದರೆ ಅಷ್ಟು ಒಳ್ಳೇದು. ನಾನು ಹೊರಡದಿದ್ದುದಕ್ಕೆ ನಿಮಗೇಕೆ ಇಷ್ಟು ವಿಸ್ಮಯ? ನೀವು ನನ್ನೊಡನೆ ವಾದ ಹೂಡಬಹುದು. ನನಗೆ ವಾದದಲ್ಲಿ ಮನಸಿಲ್ಲ, ಅದರಿಂದ ಫಲವೂ ಇಲ್ಲ. ನಾನು ಹೋಗುವುದು ಅಸಂಭವ."

ಗ್ರೇಸ್ ಕೋಮಲಸ್ವರದಿಂದ ಜಾನ್ ಪಿಟರ್ಸನನ್ನು ಕರೆದಳು. ಅವನು ಅವಳ ಹತ್ತಿರ ಹೋಗಿ ಹೇಳಿದ: "ಪ್ರಿಯೆ, ನನಗೆ ಗೊತ್ತು, ನೀನು ನನ್ನನ್ನು ಬಾ ಎನ್ನುತ್ತೀ. ಆದರೆ ನಿನ್ನ ಇಚ್ಛೆಯನ್ನು ನಾನು ನಡೆಸಲಾರೆ. ಈಗ ಇದಕ್ಕಿಂತ ಹೆಚ್ಚಿಗೆ ಹೇಳಲೂ ಆರೆ. ನಾನು ಏಕೆ ಬರುತ್ತಿಲ್ಲವೆಂಬುದನ್ನು ಕೇಳಿದರೆ, ನೀನೂ ಅದನ್ನು ಅನುಮೋದಿಸುವೆ."

ಕೂಡಲೆ ಗ್ರೇಸ್ ಬಂಡಿಯಿಂದಿಳಿದು, "ಹಾಗಾದರೆ ನಾನೂ ಹೋಗುವುದಿಲ್ಲ. ನಿಮ್ಮನ್ನು ಬಿಟ್ಟು ಸ್ವರ್ಗಕ್ಕೆ ಹೋಗಲೂ ನನಗಿಷ್ಟವಿಲ್ಲ." ಎಂದಳು.

"ರಾಜಧಾನಿ ಈಗ ಅರಾಜಕವಾಗಿದೆ; ನೀನಿಲ್ಲಿರುವುದು ಸರಿಯಲ್ಲ. ಇಲ್ಲಿ ನಿನಗೆ ಕ್ಷಣಕ್ಷಣಕ್ಕೂ ಗಂಡಾಂತರ. ಗ್ರೇಸ್, ಏನಾದರೂ ಘಟಿಸಿದರೆ ನಿನ್ನನ್ನು ರಕ್ಷಿಸುವವರು ಯಾರು? ನಾವಿನ್ನು ಈ ಊರಿಗೆ ಯಾರೂ ಅಲ್ಲ. ನೀನು ಈ ಬಂಡಿಯಲ್ಲೇ ಹೊರಟು ಹೋಗು. ನೀನು ಇಲ್ಲಿದ್ದು ನನಗೆ ಯಾವ ಉಪಕಾರವನ್ನೂ ಮಾಡಲಾರೆ; ನನಗೆ ಉಪಕಾರ ಮಾಡುವುದು ಮನುಷ್ಯರಿಗೆ ಮೀರಿದ್ದು." ಎಂದು ಪಿಟರ್ಸ್ ಹೇಳಿದ.

"ನನ್ನ ಇಚ್ಛೆ ಯಾರ ಅಧೀನವೂ ಅಲ್ಲ. ಹೋಗದಿದ್ದರೆ ನನ್ನನ್ನು ಯಾರು ಕರೆದೊಯ್ಯುವರು? ನಾನು ಹೋಗುವುದಿಲ್ಲ."

ನಿರ್ವಾಹವಿಲ್ಲದೆ, ರಾಜನನ್ನೂ ರಾಜವೈದ್ಯನನ್ನೂ ಕರೆದುಕೊಂಡು ಬಂಡಿ ಸಾಗಿತು. ಜಾನ್ ಪಿಟರ್ಸ್, ಗ್ರೇಸ್, ಬರ್ನಾರ್ಡ್ ಹೊರಗೆ ಮೋಟರಿನ ಹತ್ತಿರ ಬಂದರು. ಬರ್ನಾರ್ಡ್ ಯುವರಾಜನ ಹೆಗಲಮೇಲೆ ಕೈಯಿಟ್ಟು ನುಡಿದ: "ಮಿತ್ರರೆ, ನಾನೇನು ಹೊಸದಾಗಿ ಹೇಳುವುದಿದೆ? ತಮ್ಮ ಸ್ಥಿತಿ ತಮಗೆ ಚೆನ್ನಾಗಿಯೇ ತಿಳಿಯುತ್ತದೆ. ಈ ದೇಶಕ್ಕಿನ್ನು ಗ್ರಾಮೋ ಅವರೇ ಸರ್ವಪ್ರಧಾನವ್ಯಕ್ತಿ. ಆದರೆ ತಮ್ಮ ರಕ್ಷಣೆಯ ವಿಷಯದಲ್ಲಿ ಅವರಿಂದಲೂ ಏನೂ ಆಗುವಂತಿಲ್ಲ ಉನ್ಮತ್ತ ನಾಗರಿಕರು ಒಂದು ಗಂಟೆಯಿಂದಲೂ ತಮ್ಮ ಹೆಸರೆತ್ತಿ ಬೊಬ್ಬರಿಯುತ್ತಿದ್ದಾರೆ ಅವರನ್ನು ಅರಮನೆಯಿಂದ ಬೀದಿಗೆ ಎಳೆದು ತಂದು ಗುಂಡಿಕ್ಕುತ್ತೇವೆ ಎಂದು ಕೂಗುತ್ತಿದ್ದಾರೆ."

ಅವನ ಮಾತಿಗೆ ಮರುನುಡಿಯದೆ ಜಾನ್ ಪಿಟರ್ಸ್ ಗ್ರೇಸಳ ಕಡೆ ನೋಡಿ, "ನನಗೆಲ್ಲವೂ ಗೊತ್ತಿದೆ ಆದರೆ ಗಂಡಾಂತರವನ್ನೆದುರುಗೊಳ್ಳದೆ ವಿಧಿಯಿಲ್ಲ ಬರ್ನಾರ್ಡ್, ನೀವು ಈಕೆಯ ರಕ್ಷಣೆಯ ಭಾರವನ್ನು ಹೊರಬಲ್ಲಿರಾ?" ಎಂದ.

"ಈಕೆ ನನ್ನ ಹತ್ತಿರ ಸುರಕ್ಷಿತವಾಗಿ ಇರಬಹುದು. ನನಗಿನ್ನು ಕೆಸಸದ ಚಿಂತೆಯಿಲ್ಲ. ಸಾಧಾರಣ ತಂತ್ರದ ಅಧೀನದಲ್ಲಿ ನಾನು ಪೋಲಿಸ್ ಕಮಿಶನರಾಗಿ ನಿಯುಕ್ತನಾಗಿದ್ದೇನೆ." ಎಂದು ಹೇಳಿದ ಬರ್ನಾರ್ಡ್.

ಗ್ರೇಸ್ ಜಾನ್ ಪಿಟರ್ಸನ ಕೈಯನ್ನು ಹಿಡಿದು ನುಡಿದಳು: "ನನಗೇನೂ ಭಯವಿಲ್ಲ; ನಿಮ್ಮ ಸಂಗಡಲೇ ಬರುವೆ."

"ಬೇಡ, ಅದು ಸಾಧ್ಯವಿಲ್ಲ." ಎಂದು ಪಿಟರ್ಸ್ ಮೋಟರನ್ನೇರಿ ನಗರದ ಕಡೆ ಹೊರಟ. ಅವನ ಬಂಡಿ ಮರೆಯಾಗುವ ವರೆಗೂ ಬರ್ನಾರ್ಡ್ ಮತ್ತು ಗ್ರೇಸ್ ಅದನ್ನೇ ನೋಡುತ್ತ ನಿಂತರು. ಬಳಿಕ ಬರ್ನಾರ್ಡ್ "ಯುವರಾಜರು ಅತ್ಯಂತ ಸಾಹಸಿಯಾದವರೂ ಇರಬೇಕು, ಇಲ್ಲವೆ ಹುಚ್ಚರಿರಬೇಕು. ಮತ್ತೊಬ್ಬರಾಗಿದ್ದರೆ ಇಂಥ ದುಃಸಾಹಸಕ್ಕೆ ಹೋಗುತ್ತಿರಲಿಲ್ಲ." ಎಂದ.

ಜಾನ್ ಪಿಟರ್ಸ್ ಸ್ವಲ್ಪ ದೂರ ಹೋದ ಮೇಲೆ, ಮುಂದೆ ಮೋಟರಿಗೆ ದಾರಿಯಿಲ್ಲವೆಂದು ಕಂಡಿತು. ಅಸಂಖ್ಯ ಜನರು ಉನ್ಮತ್ತರಂತೆ ಅರಮನೆಯ ಕಡೆ ನುಗ್ಗುತ್ತಿದ್ದರು. ಅತಿ ಕಷ್ಟದಿಂದ ದಾರಿ ಮಾಡಿಕೊಂಡು ಮೋಟರು

ಸಾವಕಾಶವಾಗಿ ಸಾಗಿ ಅರಮನೆಯನ್ನು ಸಮೀಪಿಸಿತು. ಅಲ್ಲಿ ಕೃತಕ ಜಲಪಾತದ ಹತ್ತಿರ ಹತ್ತು ಹನ್ನೆರಡು ಮಂದಿ ಒಬ್ಬನನ್ನು ಆಕ್ರಮಿಸಿದ್ದರು. ಆ ಮನುಷ್ಯ ನಿಃಸಹಾಯನಾಗಿ ತಡಕಲಿನ ಮೇಲ್ಗಡೆಯಿದ್ದ ಕಬ್ಬಿಣ ಕಂಬದ ಮೇಲೆ ಆಶ್ರಯ ಹೊಂದಿದ್ದ. ಅವನನ್ನು ಅಲ್ಲಿಂದಿಳಿಸಲು ಹಗೆಗಳು ಪ್ರಯತ್ನಿಸುತ್ತಿದ್ದರು. ಅವರು ದೊಡ್ಡ ದನಿಯಿಂದ ಯುವರಾಜನ ಹೆಸರನ್ನು ಕೂಗುತ್ತಿದ್ದರು.

ಜಾನ್ ಪಿಟರ್ಸ್ ಮೋಟರಿನಿಂದಿಳಿದು ಹಗೆಗಳನ್ನು ದೂರ ತಳ್ಳಿ ಗಂಭೀರ ಸ್ವರದಲ್ಲಿ ಹೇಳಿದ: " ಬಿಡಿರಿ ಅವನನ್ನು. ಅವನ ಮೇಲೇಕೆ ಅತ್ಯಾಚಾರ ನಡೆಸಿದ್ದೀರಿ ? ಅವನು ಯುವರಾಜನಲ್ಲ, ನಾನು ಯುವರಾಜ !"

ಒಂದು ಕ್ಷಣ ಎಲ್ಲರೂ ಸ್ತಂಭಿತರಾದರು. ಆಕ್ರಮಿತ ಮನುಷ್ಯನ ಮುಖಕ್ಕೆ ಗಾಯಗಳಾಗಿ ರಕ್ತ ಸೋರುತ್ತಿತ್ತು; ತಲೆಗೂ ಪೆಟ್ಟಾಗಿತ್ತು. ಜಾನ್ ಪಿಟರ್ಸನನ್ನು ಕಂಡು ಅವನಲ್ಲಿ ಜೀವ ಸಂಚಾರವಾದಂತಾಯಿತು. ಜನ ಅವನನ್ನೊಮ್ಮೆ ಇವನನ್ನೊಮ್ಮೆ ಆಶ್ಚರ್ಯದಿಂದ ನೋಡತೊಡಗಿತು. ಇಬ್ಬರ ಮುಖಗಳ ಹೋಲಿಕೆ, ಬಣ್ಣ, ಎತ್ತರ ಎಲ್ಲ ಒಂದೇ ಆಗಿತ್ತು. ಭೇದವೆಂದರೆ ಆಕ್ರಮಿತವ್ಯಕ್ತಿ ದುರ್ಬಲ, ಇಂದ್ರಿಯಾಸಕ್ತಿಯಿಂದ ಸೊರಗಿದವ : ಜಾನ್ ಪಿಟರ್ಸನ ದೇಹ ಸಬಲ, ಮೂರ್ತಿ ತೇಜಃಪುಂಜ, ಸಿಂಹನಂತೆ ವಿಕ್ರಮಶಾಲಿ ಇವನನ್ನು ನೋಡಿ ಜನ ಯುವರಾಜ ಇವನೇ ಎಂದು ತಿಳಿದರು. ಇಷ್ಟೊತ್ತು ದಾಳಿಗೆ ಗುರಿಯಾದವನು ಯುವರಾಜನಂತಿರುವ ಒಬ್ಬ ಸಾಧಾರಣ ಮನುಷ್ಯ. ಅವರು ಮೊದಲಿನವನನ್ನು ಬಿಟ್ಟು ಜಾನ್ ಪಿಟರ್ಸನ ಮೇಲೆ ಭರದಿಂದೆರಗಿದರು. ನೂರಾರು ಮಂದಿ ಕೊಲ್ಲುಕೊಲ್ಲೆಂದು ಮುತ್ತಿದರು. ಯುವರಾಜನು ಅಲ್ಲಿರುವ ವಿದ್ಯುದ್ದೀಪದ ಕಂಬವನ್ನೇರಿ ಬ್ರ್ಯಾಕೆಟ್ಟಿನ ಮೇಲೆ ಆಶ್ರಯ ಹೊಂದಿ ಹೇಳಿದ: " ನಾನು ಯಾರೆಂಬುದು ತಮಗೆ ಗೊತ್ತಾಗಿದೆ. ಅವನನ್ನು ಬಿಟ್ಟುಬಿಡಿರಿ. ನಿಮ್ಮ ಕೈಲಾದರೆ ನನ್ನನ್ನು ಕೊಲ್ಲಿರಿ. "

ಜನರು ದಶದಿಕ್ಕುಗಳೂ ಪ್ರತಿಧ್ವನಿಸುವಂತೆ ಜಯಧ್ವನಿ ಗೈದರು. ಒಬ್ಬನು ಒಂದು ಕಲ್ಲನ್ನು ಬೀಸಿದ. ಅದು ಗುರಿತಪ್ಪಿ ಯುವರಾಜನ ಕಿವಿಯ ಹತ್ತಿರ ಹಾಯ್ದುಹೋಯಿತು. ಇನ್ನೊಂದು ಕಲ್ಲು ಮಾತ್ರ ಅವನ ಹೆಗಲಿಗೆ

ತಾಕಿತು. ಕ್ರಮವಾಗಿ ನಾಲ್ಕು ನಿಟ್ಟುಗಳಿಂದಲೂ ಹಗೆಗಳು ಬಂದು ಮುತ್ತಿ-ದರು. ಆದರೆ ಯುವರಾಜನು ಅವರ ಕೈಗೆ ಸಿಕ್ಕಲಿಲ್ಲ. ನಿಜ. ಆದರೆ ಈ ರೀತಿ ಆತ್ಮರಕ್ಷಣೆ ಮಾಡಿಕೊಳ್ಳುವುದು ಸಾಧ್ಯವಿಲ್ಲ, ಸಾವು ಖಂಡಿತ ಎಂದು ಜಾನ್ ಪಿಟರ್ಸ್ ಭಾವಿಸಿಕೊಂಡ.

೩೯

ಈ ಘಟನೆ ನಡೆಯುತ್ತಿದ್ದ ಸ್ಥಳದಿಂದ ಸ್ವಲ್ಪದೂರದಲ್ಲಿ ಒಂದು ಓಣಿಯಿತ್ತು. ಅಲ್ಲಿಯೊಂದು ಕಟ್ಟಡದ ಉಪ್ಪರಿಗೆಯ ಕಿಡಿಕಿಯ ಬಳಿ ನಿಂತು ಮೇರಿ ಜನಸ್ರೋತವನ್ನು ನೋಡುತ್ತಿದ್ದಳು. ಆ ಗಲಭೆ ಅವಳನ್ನು ಅತ್ಯಂತ ಉದ್ವಿಗ್ನಗೊಳಿಸಿತ್ತು; ಅವಳ ಮನವನ್ನು ಒಂದು ಭೀತಿ ಆವರಿಸಿತ್ತು. ಎಷ್ಟೋ ಹೊತ್ತು ನೋಡಿ ನೋಡಿ ಬಳಿಕ ಕಿಡಿಕಿಯಿಂದ ಸರಿದುಹೋಗಿ ಕುರ್ಚಿಯಲ್ಲಿ ಕುಳಿತು ಉಸಿರ್ಗರೆದಳು : “ ಈ ಜನ ಅವರನ್ನು ಕೊಂದೇ ವಿಶ್ರಮಿಸುವ-ರೆಂದು ತೋರುತ್ತದೆ. ಇಷ್ಟರಲ್ಲಿಯೇ ಏನೇನು ಅನಾಹುತವಾಗಿದೆಯೊ! ದೇವರೇ, ಯುವರಾಜರನ್ನುಳಿಸು ! ”

ಸ್ವಲ್ಪ ಹೊತ್ತಿನಲ್ಲಿ ಮೆಟ್ಟಿಲಲ್ಲಿ ಅಡಿಗಳ ಸದ್ದಾಯಿತು. ಮೇರಿ ಕಿವಿ-ಗೊಟ್ಟು ಕುಳಿತಳು. ಯಾರೋ ವ್ಯಸ್ತರಾಗಿ ಕದವನ್ನು ತಟ್ಟಿದ್ದರು. ಅವಳು ಬಾಗಿಲು ತೆರೆದು, ಮೈಯೆಲ್ಲ ನೆತ್ತರು ಮುಳುಗಿದ ತೇಕುತ್ತಿರುವ ಯುವಕನನ್ನು ಕಂಡು ಚೀರಿದಳು. ಏನು ಯುವರಾಜನ ಅವಸ್ಥೆ-ಮುಖವೆಲ್ಲ ಒಡೆದು ಹೋಗಿದೆ !

“ ಮೇರಿ, ಬೇಗ ಬಾಗಿಲನ್ನಿಕ್ಕು. ಬಹಳ ದಣಿದಿದ್ದೇನೆ. ಒಂದು ಗ್ಲಾಸು ಬ್ರಾಂಡಿ ಕೊಡಬಲ್ಲೆಯಾ ? ” ಒಳಗೆ ಬರುತ್ತ ಜಾನ್ ಪಿಟರ್ಸ್ ನುಡಿದ.

ಮೇರಿ ಬಾಗಿಲನ್ನಿಕ್ಕಿ ಬ್ರಾಂಡಿಯನ್ನಿತ್ತಳು. ಜಾನ್ ಪಿಟರ್ಸ್ ನಡುಗುವ ಕೈಯಿಂದ ಅದನ್ನು ಕುಡಿದ. ಮೇರಿ ಎಂದಳು : “ ಬಹುಶಃ ನಿಮಗಿಲ್ಲಿ ಭಯವಿಲ್ಲ. ಸ್ವಲ್ಪ ಸಮಯ ವಿರಮಿಸಿರಿ. ನಾನು ಹೋಗಿ ನೀರು ತರುತ್ತೇನೆ; ನಿಮ್ಮ ಹಣೆ-ಕೆನ್ನೆಗಳು ಒಡೆದು ಹೋಗಿವೆ, ನೆತ್ತರು ಸುರಿಯುತ್ತಿದೆ,-ನಿಮ್ಮ ಮೋರೆಯನ್ನು ತೊಳೆಯುತ್ತೇನೆ. ”

ಜಾನ್ ಪಿಟರ್ಸ್ ಕೋಟನ್ನು ಕಳೆದು, ತನ್ನ ನೀಳವಾಗಿ ಮಸೆದ ಕತ್ತಿಯನ್ನು ಮೇಜಿನ ಮೇಲಿರಿಸಿದ. ನರರಕ್ತ ಮೆತ್ತಿದ ಖಡ್ಗವನ್ನು ಕಂಡು ಮೇರಿಯ ಮೈಗೂದಲು ನೆಟ್ಟಗಾದವು. ಅದನ್ನು ಕಂಡು ಜಾನ್ ಪಿಟರ್ಸ್ ಖಿನ್ನಭಾವದಿಂದ ಹೇಳಿದ: "ಮೇರೀ, ನನ್ನೀ ಕತ್ತಿಗೆ ದೇಶಬಾಂಧವರ ನೆತ್ತರನ್ನು ಕುಡಿಸಬೇಕೆಂದು ನಾನು ಇಚ್ಛಿಸಿರಲಿಲ್ಲ. ಅಂತರ್ಯಾಮಿ ಪರಮೇಶ್ವರನು ಅದನ್ನು ಬಲ್ಲ. ಜೀವದ ಮಾಯೆ ಬಲವತ್ತರವಾದದ್ದು, ಅತ್ಯಾಚಾರಿಗಳು ಕತ್ತಿಯನ್ನು ಉಪಯೋಗಿಸುವಂತೆ ಮಾಡಿದರು. ಈ ನಗರಕ್ಕೆ ಕಲಂಕಪ್ರಾಯನಾದ ನನ್ನನ್ನು ಕೈಗೆ ಸಿಕ್ಕಿದ್ದರೆ ಅವರು ನುಚ್ಚುನುಚ್ಚಾಗಿ ಕೊಚ್ಚಿಬಿಡುತ್ತಿದ್ದರು. ನಾನವರ ಕೈಗೆ ಸಿಕ್ಕಲಿಲ್ಲ; ಈ ಅಸಿಧಾರೆಯಿಂದ ಅನೇಕರನ್ನು ದಿಂಡುರುಳಿಸಿ ನೂರುಗಟ್ಟಲೆ ಜನಗಳ ಮಧ್ಯದಿಂದ ಪಾರಾಗಿ ಬಂದೆ. ಆದರೆ ಅವರು ನನ್ನನ್ನು ಸಹಜವಾಗಿ ಬಿಡಲಾರರೆಂದು ತೋರುತ್ತದೆ; ಇಲ್ಲಿಗೂ ಬೆನ್ನಟ್ಟಿ ಬರುವರು. ಹಾಗಾದರೆ ನಿನ್ನ ಸ್ಥಿತಿ ಭಯಂಕರವಾಗುವುದು ಮೇರೀ!"

ಮೇರಿ ಹೇಳಿದಳು: "ಇಲ್ಲ, ನನಗೆ ಪ್ರಾಣದ ಭಯವಿಲ್ಲ. ಜೀವನದಲ್ಲಿ ಆಸೆ-ಆಕಾಂಕ್ಷೆಗಳಿರಬೇಕು, ಸುಖ ಆನಂದಗಳು ತುಂಬಿರಬೇಕು; ಅಂಥವರು ಸಾವಿಗೆ ಅಂಜುತ್ತಾರೆ; ನನಗೇನು ಭಯ? ನನಗಾಗಿ ನೀವು ಚಿಂತಿಸಬೇಡಿರಿ. ಇನ್ನೂ ಕೊಂಚ ಬ್ರಾಂಡಿಯನ್ನು ಸೇವಿಸಿರಿ. ನಿಮ್ಮ ಶರೀರ ಇನ್ನೂ ಕಂಪಿಸುತ್ತಿದೆ;— ಭಯದಿಂದಲ್ಲ, ದುರ್ಬಲತೆಯಿಂದ."

ಜಾನ್ ಪಿಟರ್ಸ್ ಮತ್ತೊಂದು ಗ್ಲಾಸ್ ಬ್ರಾಂಡಿಯನ್ನು ಕುಡಿದು, ಮೇರಿ ತೊಳೆದುಕೊಂಡ ಆಗವನಿಗೆ ತಕ್ಕಮಟ್ಟಿಗೆ ಆರಾಮವೆನಿಸಿತು. "ಅವರಿಲ್ಲಿಗೆ ಬಂದರೆ ನನ್ನನ್ನು ಜೀವಿತಾವಸ್ಥೆಯಲ್ಲಿ ಕೊಲ್ಲುವುದು ಸಾಧ್ಯವಿಲ್ಲ. ಇನ್ನು ಕೆಲಹೊತ್ತು ನನಗಿಲ್ಲಿ ಅಡಗಿಕೊಂಡಿರುವುದು ಸಾಧ್ಯವಾದರೆ, ಬರ್ನಾರ್ಡ್ ಮತ್ತು ಗ್ರಾವೋ ನನ್ನ ಸಹಾಯಕ್ಕೆ ಬರುವರು; ಹಾಗಾದರೆ ಈ ಬಾರಿ ಬದುಕಿಕೊಳ್ಳುವೆ. ಮೇರೀ, ಒಂದು ಸಿಗರೇಟು ತಾ."

ಅವನು ನೀರವವಾಗಿ ಧೂಮ್ರಪಾನ ಮಾಡತೊಡಗಿದ. ಸುಮಾರು ಆರುಗಂಟೆ ಕಾಲ ಅವನು ಅತ್ಯಾಚಾರಿಗಳೊಡನೆ ಏಕಾಕಿಯಾಗಿ ಹೋರಾಡಿದ್ದ. ನೋವು ದಣಿವುಗಳಿಂದ ಅವನಿಗೆ ಅಂಗಾಂಗಗಳು ಕಳಚಿಬೀಳು

ವನ್ನೋ ಎಂಬಂತಾಗಿತ್ತು. ಏಳುವುದಕ್ಕೂ ಕೂಡುವುದಕ್ಕೂ ಕಷ್ಟವಾಗಿತ್ತು. ಊರ ಸಮಾಚಾರವನ್ನು ತಿಳಿದುಕೊಳ್ಳಲು ಮೇರಿ ಕಿಡಿಕಿಯ ಹತ್ತಿರ ಹೋಗಿ ನಿಂತಳು.

“ ಮೇರೀ ಏನಾದರೂ ಕೇಳುತ್ತಿದೆಯೆ ?” ಜಾನ್ ಪಿಟರ್ಸ್ ಕಣ್ಣು ಮುಚ್ಚಿಕೊಂಡೇ ಕೇಳಿದ.

“ ಇಲ್ಲ, ನಗರವು ನಿಃಸ್ತಬ್ಧವಾದಂತಿದೆ.”

ಜಾನ್ ಪಿಟರ್ಸ್ ನಿಶ್ಚಿಂತೆಯಿಂದ ನಿದ್ರಿತನಾದ. ಹಾಗೆ ಒಂದುಗಂಟೆ ಕಳೆಯಿತು. ಮೇರಿ ಬಹುದೂರದ ರಾಜಪಥವನ್ನು ನೋಡುತ್ತಲಿದ್ದಳು. ಸ್ವಲ್ಪಹೊತ್ತಿನಲ್ಲಿ ಬಹುಜನರ ಕೂಗಾಟ ಕೇಳಿತು, ಕ್ರಮಶಃ ಅದು ಹತ್ತಿರವಾಯಿತು. ಮೇರಿ ಬೆಚ್ಚಿದಳು. ಅರ್ಧಗಂಟೆಯೊಳಗಾಗಿ ಅಗಣಿತ ಜನಸ್ರೋತ ಅವಳ ಮನೆಗೇ ಬಂದಿತು. ಆಗ ಸಂಜೆ ತಿರುಗಿತ್ತು; ಅನೇಕರ ಕೈಗಳಲ್ಲಿ ಪಂಜುಗಳಿದ್ದವು; ಕೆಲವರ ಕೈಯಲ್ಲಿ ಪತಾಕೆಗಳಿದ್ದವು. ಅವಳ ಮನೆಯ ಹತ್ತಿರ ನೆರೆದು ಆ ಸಂಭೂತಗಳು ಯುವರಾಜ-ಮೇರಿಯರ ಹೆಸರು ಬಿಗಿದು ಕೂಗತೊಡಗಿದವು.

ಮೇರಿ ಜಾನ್ ಪಿಟರ್ಸ್‌ನನ್ನು ಎಚ್ಚರಿಸಿ, “ ನೀವು ಎಲ್ಲಿ ಅಡಗಿರುವಿರೆಂಬುದು ಅವರಿಗೆ ತಿಳಿದ ಹಾಗಿದೆ. ಬೀದಿಯಲ್ಲಿ ಬಹುಸಂದಿ ಗೊಂದಲ ಹಾಕುತ್ತಿದ್ದಾರೆ. ನಿಮ್ಮನ್ನು ಹುಡುಕಿಕೊಂಡು ಅವರು ಇಲ್ಲಿಯೇ ಬರಬಹುದು.” ಎಂದು ಉಸಿರಿದಳು.

ಜಾನ್ ಪಿಟರ್ಸ್ ಚಟ್ಟನೆ ಎದ್ದು ನಿಂತ. ನಿದ್ದೆಯಿಂದ ಅವನು ಇನ್ನಷ್ಟು ಸ್ವಸ್ಥನಾಗಿದ್ದ. ಮೇರಿ ದೀಪನಂದಿಸಿದಳು. ಅವನು ಕಿಡಿಕಿಯ ಹತ್ತಿರ ಹೋಗಿ ಹೊರಗೆ ನೋಡಿ “ ಮೇರೀ, ಹೌದು ಅವರೇ. ಕುಡಿದು ಮತ್ತರಾಗಿದ್ದಾರೆ. ಪಾಪಪುಣ್ಯಗಳ ಅರಿವು ಅವರಿಗಿಲ್ಲ. ಇವರು ನನ್ನನ್ನೇ ಹುಡುಕುತ್ತಿದ್ದಾರೆ, ಇವರನ್ನು ಇದಿರಿಸಲು ನಾನು ಸಿದ್ಧನಿದ್ದೇನೆ.”

ಬರಿ ಶರ್ಟುಪ್ಯಾಂಟುಗಳ ಮೇಲೆಯೇ, ಬಲಗೈಯಲ್ಲಿ ಕತ್ತಿಯನ್ನು ಎಡಗೈಯಲ್ಲಿ ಗುಂಡುತುಂಬಿದ ಪಿಸ್ತೂಲನ್ನು ಹಿಡಿದು ಸಿದ್ಧನಾಗಿ, ಜಾನ್ ಪಿಟರ್ಸ್ ಮೇರಿಗೆಂದ : “ ಫೋನಿನಲ್ಲಿ ಬರ್ನಾರ್ಡರಿಗೆ ನಾನು ಇಲ್ಲಿಯೇ ಇದ್ದೇನೆ, ಆತ್ಮರಕ್ಷಣೆಗಾಗಿ ಜೀವದ ಹಂಗುದೊರೆದು ಕಾದುತ್ತಿದ್ದೇನೆ ಎಂದು

ಹೇಳು, ಮೇರಿ. ಗ್ರ್ಯಾವೋ ಅವರಿಗೆ ನಾನು ಯಾರೆಂಬುದನ್ನು ತಿಳಿಸಲು ಹೇಳು. ನಾನು ಯಾರೆಂಬುದು ಗೊತ್ತಾಗಿ ಗ್ರ್ಯಾವೋ ನನ್ನ ರಕ್ಷಣೆಗೆ ಬಂದರೆ ಉಳಿದುಕೊಳ್ಳುವೆ. ನಾಯಿನರಿಗಳಂತೆ ಕೋಲಿನಿಂದ ಹೊಡೆಸಿಕೊಂಡು ಸಾಯುವ ಇಚ್ಛೆ ನನಗಿಲ್ಲ. ಯುದ್ಧದಲ್ಲಿ ಹೋರಾಡಿ ಸಾಯುವುದಾಗಿದ್ದರೆ ನನ್ನ ಆಕ್ಷೇಪಣೆ ಇರಲಿಲ್ಲ. ಬರ್ನಾರ್ಡರಿಗೆ ಸುದ್ದಿಯನ್ನು ಹೇಳಿ ನೀನು ಇಲ್ಲಿಂದ ಓಡಿಹೋಗಿ ಬೇರೆ ಮನೆಯಲ್ಲಿ ಅಡಗಿಕೋ. ಕ್ಷಿಪ್ರದಲ್ಲಿಯೇ ಈ ರಾಕ್ಷಸರೊಡನೆ ನನ್ನ ಯುದ್ಧ ಆರಂಭವಾಗುವುದು. ಹೆಂಗಸರ ಕಣ್ಣಿಗೆ ಆ ದೃಶ್ಯ ತಡೆಯುವುದಿಲ್ಲ."

ಮೇರಿ ಜಾನ್ ಪಿಟರ್ಸ್‌ನ ಮಾಂಗೈಯನ್ನು ಮುತ್ತಿಟ್ಟು, ಪಕ್ಕದ ಕೋಣೆಯನ್ನು ಪ್ರವೇಶಿಸಿದಳು. ಅವನು ತಲೆವಾಗಿಲ ಹೊರಗೆ ಬಂದು ಸೋಪಾನಶ್ರೇಣಿಯನ್ನು ನೋಡಿದ. ಅದು ಕಿರಿಯಗಲವಾಗಿತ್ತು. ಅದರ ಮೇಲ್ಗಡೆ ಪಕ್ಕದಲ್ಲಿ ಚಿಕ್ಕದಾದ ಸ್ಥಾನವೊಂದಿತ್ತು. ಹಗೆಗಳು ಬಂದೂಕು ತರದೆ ಬಂದರೆ ತನಗೆ ನಿಲ್ಲಲು ಈ ಸ್ಥಾನ ಸಾಕು, ಒಬ್ಬನೇ ಅನೇಕರನ್ನು ಎದುರಿಸಬಹುದು ಎಂದು ಜಾನ್ ಪಿಟರ್ಸ್ ಎಂದುಕೊಂಡ. ಒಮ್ಮೆಲೆ ಕೆಲವು ಜನ ನಿಂತು ಆಕ್ರಮಿಸಲು ಆ ಸ್ಥಳ ಅನುಕೂಲವಾಗಿರಲಿಲ್ಲ. ಅವನು ಅಲ್ಲಿ ಹಗೆಗಳನ್ನು ಕಾಯುತ್ತ ಕೊಂಡು ನಿಂತ. ಆಗ ಜನರು ಕೆಳಗಡೆ ಬಂದು ಸೇರಿದರು. ಮೇಲ್ಗಡೆ ಯುವರಾಜನನ್ನು ಕಂಡು ಉತ್ಸಾಹದಿಂದ ಹೂಂಕರಿಸಿ, ರಭಸದಿಂದ ಮೆಟ್ಟಿಲುಗಳನ್ನು ಅಡರತೊಡಗಿದರು.

ಮುಂದಿನವನು ಎರಡನೆ ಮೆಟ್ಟಿಲನ್ನು ಅಂತರದಲ್ಲಿರುವಾಗ ಜಾನ್ ಪಿಟರ್ಸ್ ಅವನ ತಲೆಗೆ ಪಿಸ್ತೂಲಿನ ಗುರಿಯಿಟ್ಟು ಹೇಳಿ : "ಜೀವಬೇಕಾಗಿದ್ದರೆ ಅಲ್ಲಿಯೇ ನಿಲ್ಲು; ನಾನು ಹೇಳುವುದನ್ನು ಕೇಳು."

ಅವನು ಅಲ್ಲಿಯೇ ನಿಂತ. ಹಿಂದಿದ್ದವರು ಅಧೀರರಾಗಿ ನುಗ್ಗಿ, ನುಗ್ಗಿ ಎಂದು ಕೂಗಿದರು; ಮುಂದುವರಿಯಲು ಧೈರ್ಯಸಾಲದಿದ್ದರೆ ಇಳಿದು ಬಾ ಎಂದು ಹೇಳಲಾರಂಭಿಸಿದರು. ಇಡೀ ಸೋಪಾನಶ್ರೇಣಿ ಜನರಿಂದ ತುಂಬಿತ್ತು. ಐವತ್ತು ಅರುವತ್ತು ಜನರು ಅಲ್ಲಿದ್ದರು. ಅವರಲ್ಲಿ ಹೆಚ್ಚಿನವರು ಹಂಬ ಒಕ್ಕಲಿಗರು; ಕುಡಿದು ಉನ್ಮತ್ತರಾದವರು. ಯುವರಾಜನನ್ನು ಕೊಲ್ಲುವುದಕ್ಕಾಗಿ

ಇತ್ತೀಚಿನ ಹುಡುಕುತ್ತ ತಿರುಗಿದ್ದರು; ಹಲವರಂತೂ ಅವನ ರುಂಡವನ್ನು ಚೆಂಡಾಡದೆ ಮನೆಗೆ ಹೋಗುವಂತಿಲ್ಲವೆಂದು ಪ್ರತಿಜ್ಞೆ ಮನ್ನೇ ಮಾಡಿದ್ದರು.

ಜಾನ್ ಪಿಟರ್ಸ್ ಕೇಳಿದ: "ಯುವರಾಜನನ್ನು ಹುಡುಕಿಕೊಂಡು ಬಂದಿರಲ್ಲವೇ? ನಾನೇ ಯುವರಾಜ ನನ್ನಿಂದ ನಿಮಗೇನಾಗಬೇಕಾಗಿದೆ?"

ಅನೇಕರು ಒಮ್ಮೆಲೆ ನುಡಿದರು: "ನಮಗೆ ಬೇಕು ನಿಮ್ಮ ಜೀವ."

"ನನ್ನನ್ನು ಕೊಲ್ಲುವುದರಿಂದ ನಿಮಗೆ ಯಾವ ಲಾಭವೂ ಇಲ್ಲ ನನ್ನನ್ನು ಏಕೆ ಕೊಲ್ಲಬೇಕೆನ್ನುವಿರಿ? ನನ್ನನ್ನು ನೀವು ದೇಶದ ಶತ್ರುವೆಂದು ಭಾವಿಸಿದ್ದೀರಿ. ಈಗಿನ ರಾಜ್ಯದ ನಾಯಕರಲ್ಲಿ ಯಾರನ್ನಾದರೂ ಕರೆದುಕೊಂಡು ಬನ್ನಿರಿ ಹೊಸ ಸರಕಾರದ ಒಬ್ಬ ಮಂತ್ರಿಯನ್ನಾಗಲಿ, ಪೋಲಿಸ್ ಕಮಿಶನರ್ ಜನಾರ್ದನರನ್ನಾಗಲಿ ಕರೆದುಕೊಂಡು ಬನ್ನಿರಿ. ನಾನು ನಾಡಿನ ಹಗೆಯಲ್ಲವೆಂಬುದನ್ನು ಸಿದ್ಧಮಾಡಿಕೊಡುತ್ತೇನೆ ನಾನೆಂದೂ ದೇಶದ ಶತ್ರುವಾಗಿರಲಿಲ್ಲ; ನೀವು ಸುಮ್ಮನೆ ನನ್ನನ್ನು ಕೊಲೆಮಾಡಬೇಕೆನ್ನುವಿರಿ."

ಜಾನ್ ಪಿಟರ್ಸನ ಮಾತಿಗೆ ಅವರು ತಮ್ಮ ಸಂಕಲ್ಪವನ್ನು ಬಿಟ್ಟುಕೊಡಲಿಲ್ಲ. ಸುಳ್ಳನೆಂದೂ ಹೇಡಿಯೆಂದೂ ಮೂದಲಿಸಿದರು. ಅವರಲ್ಲಿಯ ಗಿಡ್ಡ ಬಡಕಲು ಮನುಷ್ಯ ಮುಂದಿನವರನ್ನು ತಳ್ಳಿ ನೆಗೆದುಬಂದು ಜಾನ್ ಪಿಟರ್ಸನನ್ನು ಆಕ್ರಮಿಸಿದ. ಅವನು ಜಾನ್ ಪಿಟರ್ಸನ ನೆತ್ತಿಗೆ ಕೊಡಲಿಯನ್ನೆತ್ತಿ ಬೀಸಿದ. ಆದರೆ ಅವನ ಕಾರ್ಯ ಸಾರ್ಥಕವಾಗಲಿಲ್ಲ. ಪಿಟರ್ಸನ ಗುಂಡು ಅವನ ಎದೆಯನ್ನು ಹೊಕ್ಕು ಅವನನ್ನು ಉರುಳಿಸಿಬಿಟ್ಟಿತು.

ಜಾನ್ ಪಿಟರ್ಸ್ ರೋಷದಿಂದ ಮತ್ತೆ ಹೇಳಿದ: "ಮೂರ್ಖರೇ, ಇಲ್ಲಿಗೆ ಸಾಯಲಿಕ್ಕೆ ಬಂದಿರಾ ನೀವು? ನನ್ನ ಮೇಲೆ ಕೈಮಾಡಲು ಬಂದಿರಾ ನೀವು? ನನ್ನ ಮೇಲೆ ಕೈಮಾಡಲು ಬಂದರೆ ಎಲ್ಲರನ್ನೂ ಇವನಂತೆಯೇ ಉರುಳಿಸಿ ಬಿಡುವೆ. ಆದರೆ ವ್ಯರ್ಥವಾಗಿ ನರಹತ್ಯೆ ಮಾಡುವ ಇಚ್ಛೆ ನನಗಿಲ್ಲ. ನಾನು ಓಡಿಹೋಗುವುದಿಲ್ಲ: ಎಲ್ಲರೂ ಕಾಯ್ದುಕೊಂಡಿದ್ದು, ಜನಾರ್ದನರನ್ನು ಕರೆದುಕೊಂಡು ಬರಲು ಯಾರನ್ನಾದರೂ ಕಳಿಸಿರಿ ಅವರು ಕರೆದುಕೊಂಡು ಹೋದಲ್ಲಿಗೆ ನಾನು ಹೋಗುತ್ತೇನೆ ನನ್ನನ್ನು ಕಟ್ಟಳೆಗೆ ಗುರಿಪಡಿಸಿದರೆ ನಾನು ಸಂಪೂರ್ಣ ನಿರಪರಾಧಿಯೆಂದು ಪ್ರಮಾಣಿಸಿಕೊಡುತ್ತೇನೆ. ಇಲ್ಲದಿದ್ದರೆ ನ್ಯಾಯಾಧೀಶರು ವಿಧಿಸುವ ಶಿಕ್ಷೆಯನ್ನು ಅನುಭವಿಸುತ್ತೇನೆ."

ಭಾವನಾವಶರಾಗಿ ಬಂದಿದ್ದ ಜನರಿಗೆಲ್ಲರಿಗೂ ಈ ವಿಚಾರ ಸರಿಯೆಂದೆನಿಸಿತು. ಅವರು ಏನು ಮಾಡಬೇಕೆಂದು ಇತಿವಿ[illegible]ತಿಯಲ್ಲಿ ಬಿದ್ದರು. ರಕ್ತದ ಬಾಯಾರಿಕೆಯಿಂದ ಉನ್ಮತ್ತರಾಗಿ ಬಂದವರಿಗೆ ಮಾತ್ರ ಈ ಮಾತನ್ನು ಕೇಳಿ ಸಂತಾಪ ಹೆಚ್ಚಿತಲ್ಲದೆ ಕಡಿಮೆಯಾಗಲಿಲ್ಲ. ಅವರಲ್ಲಿ ಮೂವರು ವಿದ್ಯುದ್ವೇಗದಿಂದ ಒಮ್ಮೆಲೆ ಪಿಟರ್ಸನ್-ಮೇಲೆರಗಿದರು. ಆದರೆ ಯಾರ ಅಸ್ತ್ರವೂ ಅವನ ಅಂಗವನ್ನು ಸ್ಪರ್ಶಿಸಲಿಲ್ಲ. ಜಾನ್ ಪಿಟರ್ಸ್ ಒಬ್ಬನನ್ನು ಕತ್ತಿಯಿಂದ ಹೊಡೆದು ಕೆಡವಿದ. ಮೂರನೆಯವನು ಜಾನ್ ಪಿಟರ್ಸನ ಹಣೆಗೆ ಪಿಸ್ತೂಲಿನ ಗುರಿಯಿಟ್ಟಿದ್ದ. ಆದರೆ ಅವನು ಅದರ ಕುದುರೆಯನ್ನೊತ್ತುವ ಮೊದಲೇ ಮೇರಿಯ ಬಂದೂಕಿನ ಗುಂಡಿನೇಟಿನಿಂದ ಬಿದ್ದು ಪ್ರಾಣಬಿಟ್ಟ

ಜಾನ್ ಪಿಟರ್ಸ್ ಅದಾರೆಂದು ತಿರುಗಿ ನೋಡಿದ. ಎರಡೂ ಕೈಗಳಲ್ಲಿ ಎರಡು ಪಿಸ್ತೂಲುಗಳನ್ನು ಹಿಡಿದು ನಿಂತಿದ್ದಳು ಚಾಂಡಿ ಮೇರಿ. ಅವಳ ಕೆಕ್ಕರಿಸಿದ ಕಣ್ಣುಗಳಿಂದ ಕಿಡಿಗಳುದಿರುತ್ತಿದ್ದವು. ನೆರೆದ ಜನರನ್ನು ಕುರಿತು ಅವಳು ಗರ್ಜಿಸಿದಳು: " ಎಲೆ ನಾಯಿಗಳೆ, ಬದುಕುವ ಇಚ್ಛೆ ನಿಮಗಿದ್ದರೆ ಮಾನಗೊಟ್ಟು ನನ್ನ ಮಾತನ್ನು ಕೇಳಿರಿ "

" ಓಹೋ, ಯುವರಾಜರ ಉಪಪತ್ನಿ ! ಈಕೆಯೊಬ್ಬಾಕೆ ಏನೋ ಹೇಳಲಿಕ್ಕೆ ಬಂದಿದ್ದಳೆ, ಕೇಳಿರಿ ! " ಸೋಪಾನದ ಇನ್ನೊಂದು ತುದಿಯಿಂದ ಒಬ್ಬನೆಂದ.

ಮೇರಿ ಹೇಳಿದಳು: " ಸುಳ್ಳು ನಾನು ಯುವರಾಜರ ಉಪಪತ್ನಿಯಲ್ಲ. ಇದು ಸುಳ್ಳಲ್ಲದಿಲ್ಲ ನಾಳೆ ನಿಮಗೂ ತಿಳಿದೀತು. ನೀವು ಯಾರನ್ನು ಹುಡುಕುತ್ತಿದ್ದೀರೋ, ಯಾರನ್ನು ಯುವರಾಜನೆಂದು ತಿಳಿದಿರುವಿರೋ ಅವರು ಅವರಲ್ಲ. ನೀವು ಇವರ ಕೂದಲಿಗೆ ಧಕ್ಕೆ ಹಚ್ಚಿದರೆ, ಸಾಯುವವರೆಗೂ ಸರ್ವರ ತಿರಸ್ಕಾರಕ್ಕೆ ಗುರಿಯಾಗುವಿರಿ. ತನ್ನ ಸುಖಕ್ಕೆ ನೀರು ಬಿಟ್ಟು, ಸಿಂಹಾಸನದ ಆಶೆಯನ್ನು ತ್ಯಜಿಸಿ, ನಿಮ್ಮ ಕಲ್ಯಾಣಕ್ಕಾಗಿ ಸದಾ ಪರಿಶ್ರಮ ಪಟ್ಟವನನ್ನು ರಾಜನ ಸ್ವೈರವರ್ತನದಿಂದ ನಿಮ್ಮನ್ನು ಬಿಡುಗಡೆ ಮಾಡಿದವನನ್ನು ನೀವು ಕೊಲ್ಲಲು ಬಂದಿದ್ದೀರಿ. ಮುಂದೆ ನಿಮಗೆ ದೇಶಕ್ಕೆ ದೇಶವೇ ಛೀ ಹಾಕೀತು. ಇದಕ್ಕಿಂತಲೂ ಹೆಚ್ಚಿನ ಕೃತಘ್ನತೆಯ ಕೆಲಸ ಯಾವುದು ? "

ಮೇರಿಯು ತೇಜಃಪೂರ್ಣಭಾಷಣದಿಂದ ಎಲ್ಲರೂ ಕ್ಷಣಹೊತ್ತು ಸ್ತಂಭಿತರಾದರು. ಒಂದು ಕ್ಷಣ ಮಾತ್ರವೆ. ಅವಳ ಮಾತಿನ ಇಂಗಿತ ಅವರಿಗೆ ತಿಳಿಯಲಿಲ್ಲ; ಅದನ್ನವರು ನಂಬಲೂ ಇಲ್ಲ. ಅವರು ಕ್ರೋಧದಿಂದ ಅತ್ಯಂತ ಉದ್ರೇಜಿತರಾಗಿದ್ದರು. ದೀರ್ಘಕಾಲ ಅತ್ಯಾಚಾರಗಳನ್ನು ಸಹಿಸಿ ಸಹಿಸಿ ಅವರ ಸೈರಣೆಯ ಕಟ್ಟು ಒಡೆದು ಹೋಗಿತ್ತು. ಈ ಮನುಷ್ಯನೇ ತಮ್ಮೆಲ್ಲರ ಅನಿಷ್ಟದ ಮೂಲ ಎಂದವರು ಖಡಾಖಂಡಿತ ನಂಬಿದ್ದರು. ಈಗ ಕೈಗೆ ಸಿಕ್ಕ ಮಹಾ ಶತ್ರುವನ್ನು ಕೊಲ್ಲದೆ, ದೀರ್ಘಕಾಲದ ಮುಯ್ಯನ್ನು ತೀರಿಸದೆ ಇಲ್ಲಿಂದ ತಿರುಗಬಾರದೆಂದು ಅವರು ನಿಶ್ಚಯಿಸಿದ್ದರು. ಅವರು ಮತ್ತೆ ಮಹಾ ಉತ್ಸಾಹದಿಂದ ದಾಳಿಯಿಟ್ಟರು.

ಮೇರಿ ಕೆಲ ಹೆಜ್ಜೆ ಹಿಂದೆಸರಿದು ಗೋಡೆಯನ್ನಾತು ನಿಂತಳು. ಜಾನ್ ಪಿಟರ್ಸನೂ ಅವಳ ಬದಿಯಲ್ಲಿ ಹೋಗಿ ನಿಂತ. ಇಬ್ಬರೂ ತೆರಪಿಲ್ಲದೆ ಹಗೆಗಳ ಮೇಲೆ ಗುಂಡಿನ ಮಳೆಗರೆಯ ತೊಡಗಿದರು. ಆಕಾಶವನ್ನೆಲ್ಲ ಹೊಗೆ ವ್ಯಾಪಿಸಿತು. ಹಗೆಗಳಲ್ಲಿ ಮಹಾ ಗೊಂದಲವೆದ್ದಿತು. ಜನರು ಪಟಪಟನೆ ಬೀಳ ತೊಡಗಿದರು. ಉಳಿದವರು ಜೀವದಾಸೆಯನ್ನು ತೊರೆದು ಮೇರಿ- ಪಿಟರ್ಸರ ಮೇಲೆ ಏರಿಬಂದರು. ಈ ದಾಳಿ ಅವರ ಅಂಕವನ್ನು ಮೀರಿತು. ಇಬ್ಬರೂ ಹಿಂದೆ ಸರಿದು ಮನೆಯೊಳಗೆ ಹೊಕ್ಕರು. ಆ ಸಮಯದಲ್ಲಿ ಒಬ್ಬ ಜಾನ್ ಪಿಟರ್ಸನ ಮಸ್ತಕಕ್ಕೆ ಪಿಸ್ತೂಲನ್ನು ಗುರಿಯಿಟ್ಟ. ಈ ಸಲವೂ ಮೇರಿ ಸಾಹಸವನ್ನು ಮೆರೆದಳು. ದಾಳಿಗಾರರನ್ನು ಹೊಡೆದು ಕೆಡಹಿ ಪಿಟರ್ಸ್‌ನನ್ನು ಉಳಿಸಿದಳು. ಆದರೆ ಇನ್ನೊಬ್ಬ ತತ್‌ಕ್ಷಣವೇ ಗುಂಡು ಹಾರಿಸಿ ಅವಳ ಎದೆಯನ್ನು ಸೀಳಿದ. ಅವಳು ಪಿಟರ್ಸನ ಕಾಲಮೇಲೆ ಬಿದ್ದಳು. ಇದನ್ನು ಕಂಡು ಅವನು ವಿಚಲಿತನಾದ. ಒಬ್ಬ ಶತ್ರು ಬಿದ್ದುದನ್ನು ಕಂಡು ದಾಳಿಗಾರರ ಉತ್ಸಾಹ ಹೆಚ್ಚಿತು. ಅವರು ಜಾನ್ ಪಿಟರ್ಸ್‌ನನ್ನು ನಾಲ್ಕು ಕಡೆಯಿಂದಲೂ ಆವೇಶದಿಂದ ಮುತ್ತಿದರು. ಅವನು ಎರಡೂ ಕೈಗಳಲ್ಲಿ ಪಿಸ್ತೂಲನ್ನು ಹಿಡಿದು ಶಕ್ಯವಿದ್ದಷ್ಟು ಮಂದಿಯನ್ನು ಕೊಂದು ಆತ್ಮರಕ್ಷಣೆ ಮಾಡಿಕೊಂಡ. ಆದರೆ ಅವುಗಳೊಳಗಿನ ಗುಂಡುಗಳು ತೀರಿದವು. ಅವುಗಳನ್ನು ಬಿಟ್ಟು ಕತ್ತಿಗಾಳಗವನ್ನಾರಂಭಿಸಿದ. ಸುತ್ತಲಿಂದಲೂ ಬರುವ ನಾನಾ ಅಸ್ತ್ರಗಳ ಆಘಾತವನ್ನು ಕತ್ತಿಯಿಂದ ನಿವಾರಿಸಿಕೊಳ್ಳುತ್ತಲಿದ್ದ. ಆದರೆ

ಒಬ್ಬನೇ ಎಷ್ಟು ಹೊತ್ತು ಹೋರಾಡಿಯಾನು? ಕೊನೆಗೆ ಜಾನ್ ಪಿಟರ್ಸ್‌ನ ಖಡ್ಗ ಮುರಿಯಿತು. ಅದೇ ಹೊತ್ತಿನಲ್ಲಿ ಒಬ್ಬ ಯಹೂದಿ ಹಿಂದಿನಿಂದ ಬಂದು ಅವನ ಹೆಗಲನ್ನು ಚೂರಿಯಿಂದಿರಿದ. ಪಿಟರ್ಸ್ ಕಾದಾಡಿ ದಣಿದಿದ್ದ. ಗಾಯಗೊಂಡು ಬಳಲಿದ್ದ; ಈ ಆಘಾತವನ್ನು ಅವನಿಗೆ ಸಹಿಸಿಕೊಳ್ಳುವು ದಾಗಲಿಲ್ಲ. ಬಿದ್ದುಬಿಟ್ಟ. ಬದಿಯಲ್ಲಿಯೆ ಮೇರಿಯ ದೇಹವಿತ್ತು. ಅವಳ ಬಾಹುವನ್ನು ಸ್ಪರ್ಶಿಸಿ ಜಾನ್ ಪಿಟರ್ಸ್ ಅಸ್ಫುಟಸ್ವರದಿಂದ, "ಮೇರೀ, ನಿನ್ನನ್ನು ಉಳಿಸುವುದಾಗಲಿಲ್ಲ ನಾನೂ ಸಾಯುತ್ತಿದ್ದೇನೆ; ಆಕ್ಷೇಪಕ್ಕೆಡೆ ಯಿಲ್ಲ." ಎಂದು ನುಡಿದು ಮೆಲ್ಲಮೆಲ್ಲನೆ ಕಣ್ಣುಗಳನ್ನು ಮುಚ್ಚಿದ.

ಯುವರಾಜನಿನ್ನೂ ಸತ್ತಿಲ್ಲವೆಂದು ತಿಳಿದು ಉನ್ಮತ್ತರು ಅವನ ಮೇಲೆ ಮತ್ತೆ ದಾಳಿಯಿಟ್ಟರು. ಅದೇ ಹೊತ್ತಿಗೆ ಗ್ರಾಮೋ ಮತ್ತು ಬರ್ನಾರ್ಡ್ ಕೆಲವು ಸಶಸ್ತ್ರ ಸೈನಿಕರೊಡನೆ ಅಲ್ಲಿಗೆ ಬಂದರು. ಗ್ರಾಮೋನ ದೇಹ ಕ್ರೋಧ ದಿಂದ ಕಂಪಿಸುತಲಿತ್ತು; ಕಣ್ಣುಗಳು ಕಿಡಿಗಳನ್ನು ಚಿಮ್ಮುತ್ತಿದ್ದವು. ಗ್ರಾಮೋ ಬಂದವನೇ ನೆಲದ ಮೇಲೆ ಬಿದ್ದಿರುವ ಜಾನ್ ಪಿಟರ್ಸ್‌ನನ್ನಿರಿಯಲು ಚೂರಿ ಯನ್ನೆತ್ತಿದ ಮನುಷ್ಯನ ಚಂಡಿಗೆ ಬಲವಾಗಿ ಗುದ್ದಿದ. ಅತ್ಯಾಚಾರಿಯ ಕೈಯೊಳಗಿನ ಚೂರಿ ಜಾರಿ ಬಿದ್ದಿತು; ಅವನು ತಲೆ ದಿನ್ನೆಂದು ಗಿಮಿಗಿಮಿ ತಿರುಗುತ್ತ ಹೋಗಿ ದೂರ ಎಚ್ಚರುದಪ್ಪಿ ಬಿದ್ದ.

ಗ್ರಾಮೋ ಗರ್ಜಿಸಿದ: "ಎಲೆ ಪುಂಡಚಂಡಾಲರೆ, ಯಾರನ್ನು ಕೊಲ್ಲು ತ್ತಿದ್ದೀರಿ ಬಲ್ಲಿರಾ? ಅತ್ಯಾಚಾರದಿಂದ ದೇಶವನ್ನುಳಿಸಿದ ಮಹೋಪಕಾರಿ ಯನ್ನು ಹೊಡೆದಿರಾ? ಸೈನಿಕರೇ, ಇವರೆಲ್ಲರನ್ನೂ ಬಂಧಿಸಿರಿ."

ಜಾನ್ ಪಿಟರ್ಸ್ ಮೆಲ್ಲಮೆಲ್ಲನೆ ಕಣ್ತೆರೆದು ಮೇರಿಯ ಕಡೆ ನೋಡಿ ಕ್ಷೀಣಸ್ವರದಲ್ಲಿ ಮಾತನಾಡಿದ: "ನಾನಿನ್ನೂ ಬದುಕಿದ್ದೇನೆ ಆದರೆ ದೇವನ ಇಚ್ಛೆ ಏನಿದೆಯೋ— ಯಾರಾದರೊಬ್ಬರು ಬೇಗನೆ ಹೋಗಿ ಡಾಕ್ಟರನ್ನು ಕರೆದುಕೊಂಡು ಬನ್ನಿ; ಸಾಧ್ಯವಾದರೆ ಮೇರಿಯನ್ನು ಬದುಕಿಸಿರಿ. ಇವಳ ಪ್ರಯತ್ನದಿಂದಲೇ ನಾನು ಬದುಕಿದ್ದು; ಅವಳಿಲ್ಲದಿದ್ದರೆ ಇಷ್ಟೊತ್ತಿಗೆ ನನ್ನನ್ನು ಸಜೀವವಾಗಿ ನೀವು ಯಾರೂ ಕಾಣುತ್ತಿರಲಿಲ್ಲ."

ರಕ್ತಸ್ರಾವದಿಂದ ಅವನ ದೇಹ ಅವಸನ್ನವಾಗಿತ್ತು. ಅವನ ಕಣ್ಣೆದುರಿನಲ್ಲಿ ಸಮಸ್ತ ಪೃಥ್ವಿ ತಿರುಗುತ್ತಿತ್ತು ಸುತ್ತಲೂ ಕತ್ತಲೆ. ಕಣ್ಣೆವೆಗಳು ಮತ್ತೆ ಮುದುಡಿಕೊಂಡವು.

೪೦

ಒಂದು ವರ್ಷ ಗತಿಸಿತು. ಬರ್ಜಿಲಂಡಿನ ಸಾಧಾರಣ ತಂತ್ರದ ವಾರ್ಷಿಕ ಮಹೋತ್ಸವ. ಅಮೇರಿಕನ್ ಸದ್ಗೃಹಸ್ಥರಿಬ್ಬರು ಉತ್ಸವಭವನದಲ್ಲಿ ಕೂಡಿದ್ದರು. ಒಬ್ಬ ಮಾರ್ಕಿನ್ ಸಾಧಾರಣತಂತ್ರದ ಪ್ರತಿನಿಧಿ ಸೆಕ್ರೆಟರಿ, ಇನ್ನೊಬ್ಬ ಆತನ ಗೆಳೆಯ. ಗೆಳೆಯ ಎಲ್ಲ ದೇಶಗಳನ್ನು ನೋಡಲು ಹೊರಟು ಈಗ ಬರ್ಜಿಲಂಡಿನ ರಾಜಧಾನಿ ವ್ಹೆರಿಯಾಕ್ಕೆ ಬಂದಿದ್ದ. ಇಬ್ಬರೂ ಒತ್ತಟ್ಟಿಗೆ ಕುಳಿತು ನಿಮ್ನ ಸ್ವರದಲ್ಲಿ ಮಾತನಾಡುತ್ತಿದ್ದರು

ಸೆಕ್ರೆಟರಿ ಎಂದ : “ನಮ್ಮ ತಾಯಿನಾಡು ಮಾರ್ಕಿಣ್ ರಾಜ್ಯ ಬಹು ವೈಚಿತ್ರ್ಯಪೂರ್ಣವಾದದ್ದು ; ಅನೇಕ ವಿಷಯಗಳಲ್ಲಿ ಅದಕ್ಕೆ ಸಮನಾದ ದೇಶ ಮತ್ತೊಂದಿಲ್ಲ. ಆದರೆ ಈ ಚಿಕ್ಕ ರಾಜ್ಯದಲ್ಲಿ, ಇಡೀ ಪೃಥ್ವಿಯಲ್ಲಿಯೇ ಅತುಲನೀಯವಾದ ಕೆಲವು ವಿಷಯಗಳನ್ನು ಕಾಣಬಹುದು ಆ ಅದ್ಭುತ ಕಥೆಯನ್ನ ಕೇಳಿದರೆ ನಿನಗೆ ಆಶ್ಚರ್ಯವಾದೀತು. ಅಂತಹ ಕಥೆ ಅಮೇರಿಕೆಯಲ್ಲಿಲ್ಲ, ಯುರೋಪಿನಲ್ಲಿಯೂ ಎಲ್ಲಿಯೂ ಇಲ್ಲ. ಆ ಕೀರ್ತಿ ಈ ದೇಶದ ಸೊತ್ತು. ನೀನು ಇಲ್ಲಿಯ ಸಾಧಾರಣತಂತ್ರದ ಸಂಸ್ಥಾಪಕನನ್ನೂ ಆತನ ಹೆಂಡತಿಯನ್ನೂ ನೋಡಿದ್ದೀಯಾ ? ಅದೋ ಬಾಗಿಲಹತ್ತಿರ ನಿಂತು ಆಮಂತ್ರಿತರನ್ನು ಬರಮಾಡಿಕೊಳ್ಳುತ್ತಿದ್ದಾನೆ.-ಬಲಿಷ್ಠನಾದ ದೀರ್ಘದೇಹದ ಪುರುಷ, ಮುಖದಲ್ಲಿ ಗಾಯದ ಕಲೆಗಳಿವೆ.- ಇವನನ್ನು ಮೊದಲು ಎಲ್ಲಿಯಾದರೂ ನೋಡಿದ್ದೆಯೇನು ?”

ಗೆಳೆಯ ಹೇಳಿದ : “ಇಲ್ಲ. ಯುವತಿ ಮಾತ್ರ ಅತ್ಯಂತ ಸುಂದರಿ. ಯಾರವಳು ?”

“ಆತ ಮಿ. ಜಾನ್ ಪಿಟರ್ಸ್, ಆಕೆ ಆತನ ಹೆಂಡತಿ.”

ಜಾನ್ ಪಿಟರ್ಸ್ ಹೆಂಡತಿಯೊಡನೆ ಸಭಾಪತಿಯನ್ನು ಸಮೀಪಿಸುತ್ತಲೇ, ಆತನು ಸಂಭ್ರಮದಿಂದ ಆಸ್ಥೆಯಿಂದ ಅವರನ್ನ ಅಭಿವಂದಿಸಿದ. ಅದನ್ನು ಕಂಡು ಗೆಳೆಯ ಪ್ರಶ್ನಿಸಿದ : “ಅವರು ಸಭಾಪತಿಯ ಸನ್ಮಾನ್ಯಮಿತ್ರರೋ ?”

ಸೆಕ್ರೆಟರಿ ನಸುನಗೆಯೊಡನೆ ಹೇಳಿದ: "ನೀನು ಯುರೋಪಿನಲ್ಲಿ ಎಷ್ಟೋ ದಿನಗಳಿಂದ ತಿರುಗಾಡುತ್ತಿದ್ದರೂ, ಇಲ್ಲಿಯ ರಾಜಕಾರಣದ ಪರಿಚಯ ಕೊಂಚವೂ ಇದ್ದಂತಿಲ್ಲ ನಿನಗೆ. ನಿನಗಿದರಲ್ಲಿ ಅಭಿರುಚಿಯೇ ಇಲ್ಲ ವೆಂದು ತೋರುತ್ತದೆ. ಆದ್ದರಿಂದಲೇ ಜಾನ್ ಪಿಟರ್ಸ್ ಯಾರೆಂಬ ಕಲ್ಪನೆ ನಿನಗಿಲ್ಲ."

"ಹೌದು, ಇಲ್ಲ."

"ಈ ರಾಜ್ಯದ ಹಿಂದಿನ ರಾಜ ಫರ್ಡಿನಂದನ ನೆನಪಿದೆಯೆ? ಇಲ್ಲಿಯ ಪಾರ್ಲಿಮೆಂಟು ರಾಜತಂತ್ರದ ಬದಲು ಸಾಧಾರಣತಂತ್ರವನ್ನು ಘೋಷಿಸಿದಾಗ, ರಾಜನು ಸಿಂಹಾಸನವನ್ನು ತ್ಯಜಿಸಿ ಫ್ರಾನ್ಸಿಗೆ ಓಡಿಹೋದ."

"ಹೌದು, ಪತ್ರಿಕೆಗಳಲ್ಲಿ ಅದನ್ನೆಲ್ಲ ಓದಿದ್ದೇನೆ. ಪ್ಯಾರಿಸಿಗೆ ಹೋದ ಮೇಲೆ ಕೆಲವು ವಾರಗಳಲ್ಲಿಯೇ ದೊರೆ ಎದೆಯೊಡೆದುಕೊಂಡು ಸತ್ತನಂತೆ."

"ಜಾನ್ ಪಿಟರ್ಸ್ ಫರ್ಡಿನಂದ್ ದೊರೆಯ ತಮ್ಮನ ಮಗ; ಇವರೇ ಯುವರಾಜರಾಗಿದ್ದರು; ದೇಶದಲ್ಲಿ ರಾಜತಂತ್ರವಿದ್ದಿದ್ದರೆ ಇವರೇ ಒಂದು ದಿನ ದೊರೆಯಾಗುತ್ತಿದ್ದರು. ಸಾಧಾರಣತಂತ್ರದ ಪ್ರಸ್ಥಾಪನೆಗಾಗಿ ಸಹಜ ವಾಗಿ ಸಿಂಹಾಸನದ ಅಧಿಕಾರವನ್ನು ತೊರೆದುಬಿಟ್ಟರು. ಇಷ್ಟೇ ಅಲ್ಲ, ಇವರ ಸ್ವಾರ್ಥತ್ಯಾಗ, ಮನೋಬಲ, ಅದ್ಭುತ ಬುದ್ಧಿಕೌಶಲಗಳ ಬಗ್ಗೆ ಅನೇಕ ಕಥೆಗಳಿವೆ. ಅವೆಲ್ಲವೂ ಸತ್ಯದಕಥೆಗಳೋ ಪವಾಡಗಳೋ ನಿರ್ಣಯಿಸುವುದು ಕಠಿನವಾದರೂ ಜಾನ್ ಪಿಟರ್ಸ್ ಈ ರಾಜ್ಯದ ಸಾಧಾರಣತಂತ್ರದ ಸ್ಥಾಪಕ ನೆಂಬುದು ಅಖಂಡಿತ ಸತ್ಯ. ಹೊಸ ಪಾರ್ಲಿಮೆಂಟು ಹೇಗೆ ನಡೆಯಬೇಕು, ಬಹಿಃಶತ್ರುಗಳಿಂದ ಅದನ್ನು ಹೇಗೆ ಕೌಶಲದಿಂದ ಉಳಿಸಿಕೊಳ್ಳಬೇಕು, ಪ್ರಜಾ ಶಕ್ತಿಯನ್ನು ಹೇಗೆ ಸಂಘಟಿಸಬೇಕು ಇತ್ಯಾದಿಗಳೆಲ್ಲ ಇವರ ಸಂಯೋಜಕ ಶಕ್ತಿಯ ಫಲ. ಇವರ ಅಸಾಧಾರಣ ಶಕ್ತಿಯನ್ನು ಮನದಂದರೆ, ಸಮಗ್ರ ಯುರೋಪಿನಲ್ಲಿಯೇ ಇವರು ಅದ್ವಿತೀಯರೆಂದೆನಿಸುವುದು."

ಸೆಕ್ರೆಟರಿಯ ಗೆಳೆಯನು ವಿಸ್ಮಯ ವಿಸ್ಫಾರಿತ ನಯನಗಳಿಂದ ಜಾನ್ ಪಿಟರ್ಸನ ಮೊಗವನ್ನು ನೋಡತೊಡಗಿದ. ಜಾನ್ ಪಿಟರ್ಸ ಬೇರೆ ಯಾವ ಕಡೆಗೂ ನೋಡದೆ, ಪರಿಚಿತ ಸದ್ಗೃಹಸ್ಥರನ್ನು ಹಸ್ತಾಂದೋಲನದಿಂದ

ಗೊಣಗುತ್ತ ಪುಂಪುವರಿದಿದ್ದ. ಗೆಳೆಯ ಸೆಕ್ರೆಟರಿಯನ್ನು ಕೇಳಿದ : “ ನನಗೊಂದು ಮಾತನ್ನು ತಿಳಿಸುವೆಯಾ ? ಜಾನ್ ಪಿಟರ್ಸ್ ಯುವರಾಜರಾಗಿಯೂ ಪ್ರಜಾಶಕ್ತಿಯ ಪುರಸ್ಕರ್ತರಾಗಿ ರಾಜಪರಿವಾರದಲ್ಲಿ ಹೇಗೆ ಸ್ಥಾನ ಉಳಿಸಿಕೊಂಡಿದ್ದರು ? ರಾಜನ ಸ್ವಾರ್ಥಕ್ಕೆ ಅಡ್ಡಬರುವ, ರಾಜಶಕ್ತಿಯನ್ನು ನಷ್ಟಗೊಳಿಸುವ ರಾಜಪುತ್ರನಿಗೆ ರಾಜಕುಟುಂಬದಲ್ಲಿ ಸ್ಥಾನವಿರುವುದು ಎಂದಿಗೂ ಅಸಂಭವ. ಯುವರಾಜರಾದರೂ ಅವರ ಅಪರಾಧವನ್ನು ರಾಜರು ಕ್ಷಮಿಸುವುದು ಶಕ್ಯವಿಲ್ಲ.”

ಸೆಕ್ರೆಟರಿ ಹೇಳಿದ : “ ಜಾನ್ ಪಿಟರ್ಸ್ ಬಹುಕಾಲದಿಂದಲೂ ಪ್ರಜಾಶಕ್ತಿಯನ್ನು ಸಮರ್ಥಿಸುತ್ತಿದ್ದವರು. ಈ ರಾಜ್ಯದ ಸಿಂಹಾಸನವನ್ನು ಪಡೆಯಬೇಕೆಂದು ಅವರು ಕಲ್ಪನೆಯಲ್ಲಿ ಕೂಡ ಆಶಿಸಲಿಲ್ಲ. ಇವರಿಗೆ ಇಬ್ಬರು ಜ್ಞಾತಿಸೋದರರಿದ್ದರು. ಈ ರಾಜ್ಯದ ಸಿಂಹಾಸನದಲ್ಲಿ ಇವರಂತೆ ಅವರಿಗೂ ಹಕ್ಕಿತ್ತು. ಆದರೆ 'ಫರ್ದಿನಂದ್ ದೊರೆ' ಅವರ ಹಕ್ಕನ್ನಲ್ಲಗಳೆದು ಇವರಿಗೇ ಸಿಂಹಾಸನವನ್ನು ಕೊಡಬೇಕೆಂದು ನಿರ್ಧರಿಸಿ, ಆದರಂತೆ ಇವರೇ ಯುವರಾಜರೆಂದು ಸಾರಿದರು. ಜಾನ್ ಪಿಟರ್ಸ್ ಕಕ್ಕನ ಸಂಕಲ್ಪವನ್ನು ವಿಫಲಗೊಳಿಸಲು ಬಹಿರಂಗವಾಗಿ ಪ್ರಯತ್ನಿಸಲಿಲ್ಲ ; ರಾಜ್ಯದಲ್ಲಿ ಸಾಧಾರಣ ತಂತ್ರ ನೆಲೆಗೊಳ್ಳುವಂತೆ ಒಳಗೊಳಗೆ ಹೆಣಗಿದರು. ಇವರ ಈ ಪ್ರಯತ್ನ ಸಂಗತವೋ ಅಸಂಗತವೋ ಎಂದು ವಿಮರ್ಶಿಸುವುದು ಅನಾವಶ್ಯಕ. ಆದರೆ ತಮ್ಮ ಕಾರ್ಯ ಸಫಲವಾಗಲು ಇವರು ಕೈಕೊಂಡ ರೀತಿನೀತಿಗಳು ಇವರ ಅನನ್ಯಸಾಧಾರಣ ಪ್ರತಿಭೆಗೆ, ಕಲ್ಪಕತೆಗೆ ಪ್ರಮಾಣಗಳಾಗಿವೆ ; ಅದಕ್ಕಾಗಿ ಇವರು ಬೀಸಿದ ಚಾತುರ್ಯಜಾಲವನ್ನು ಭೇದಿಸುವುದು ಯಾರಿಗೂ ಸಾಧ್ಯವಿರಲಿಲ್ಲ. ಇವರ ಕಕ್ಕನ ಕೆಟ್ಟ ಆಳಿಕೆಯಿಂದ ತ್ರಸ್ತರಾದ ಜನಕ್ಕೆ ಆತನ ಹೆಸರೂ ಅಸಹನೀಯವಾಗಿತ್ತು. ಜಾನ್ ಪಿಟರ್ಸರಿಗೆ ದೂರಸಂಬಂಧದ ಬಂಧುವೊಬ್ಬನಿದ್ದ. ಆತನ ಮುಖದ ಹೋಲಿಕೆ, ನಿಲವು, ವೈಕೈಮಾಟ ಇವರಂತೆಯೇ ಇದ್ದವು. ಬಹುಜನ ಅವನೇ ಯುವರಾಜನೆಂದು ಭ್ರಮಿಸಿದ್ದೂ ಉಂಟು. ಆತನನ್ನು ಜಾನ್ ಪಿಟರ್ಸ್ ಪ್ಯಾರಿಸ್ ಮೊದಲಾದ ನಗರಗಳಿಗೆ ಛದ್ಮವೇಷದಲ್ಲಿ ಕಳಿಸುತ್ತಿದ್ದರು. ಅವನು ಅಲ್ಲೆಲ್ಲಾ ತಾನು ಯುವರಾಜನೆಂದೇ ಹೇಳಿಕೊಂಡಿರುತ್ತಿದ್ದ. ಆತನ ಚರಿತ್ರ ಅತ್ಯಂತ

ಕಲುಷಿತವಾದದ್ದು. ಆತ ಯಾವ ಪಾಪಕ್ಕೂ ಹೇಸುವವನಲ್ಲ ; ಕ್ಷಣಭಂಗುರವಾಗಿ ಸೂಳೆಯರ ಮನೆಗೆ ಹೋಗುತ್ತಿದ್ದ, ಮದ್ಯದಂಗಡಿಗಳಿಗೆ ನುಗ್ಗುತ್ತಿದ್ದ, ಥೇಟರಿನ ಅಭಿನೇತ್ರಿಯರೊಡನೆ ಎಗ್ಗಿಲ್ಲದೆ ತಿರುಗಾಡುತ್ತಿದ್ದ. ಯಾವ ಸುಂದರ ಸ್ತ್ರೀ–ಕನ್ನೆಯರನ್ನು ಕಂಡರೂ ಛಲದಿಂದ ಬಲದಿಂದ ಕೌಶಲದಿಂದ ಅವರ ಧರ್ಮವನ್ನು ಕೆಡಿಸುತ್ತಿದ್ದ. ಈ ಅತ್ಯಾಚಾರಗಳಿಂದ ಪ್ರಜೆಗಳು ಕಂಗೆಟ್ಟಿದ್ದರು. ರಾಜತಂತ್ರದ ವಿರುದ್ಧವಾಗಿ ಕೊಡಲಿ ಮಸೆಯುತ್ತಿದ್ದರು. ಇದೆಲ್ಲವೂ ಜಾನ್ ಪಿಟರ್ಸರ ಆಟ. ಇವರು ಅವನನ್ನು ಈ ರೀತಿಯಾಗಿ ಆಡಿಸುತ್ತ, ರಾಜನ ವಿಷಯದಲ್ಲಿ ಪ್ರಜೆಗಳಿಗೆ ಅಪ್ರೀತಿ ತಿರಸ್ಕಾರಗಳು ಹುಟ್ಟುವಂತೆ ಮಾಡುತ್ತಿದ್ದರು. ಹಾಗೆ ಮಾಡದೆ ದೇಶದಲ್ಲಿ ಸಾಧಾರಣತಂತ್ರದ ಪ್ರತಿಷ್ಠಾಪನೆ ಸಾಧ್ಯವೇ ಇರಲಿಲ್ಲ. ಇವರ ಚಾತುರ್ಯದ ಫಲವಾಗಿ ಪ್ರಜೆಗಳು ರಾಜ-ಯುವರಾಜರ ವಿರುದ್ಧ ಒಳಸಂಚು ನಡೆಸಿದರು. ಇವರ ಮರೆಯಲ್ಲಿದ್ದುಕೊಂಡೇ ಜನರ ಸಂಚಿಗೆ ಪ್ರೋತ್ಸಾಹನೆ ಕೊಡುತ್ತಿದ್ದರು. ಇದೆಲ್ಲವೂ ತುಂಬ ವೆಚ್ಚದ ಕೆಲಸವಾಗಿತ್ತು. ಯುವರಾಜರಿಗೆ ಹಣದ ಕೊರತೆಯಿರಲಿಲ್ಲ; ತಮ್ಮ ಅರ್ಥವನ್ನೆಲ್ಲ ಈ ಉದ್ದೇಶಕ್ಕಾಗಿ ಸುರಿದರು. ಪ್ರಜೆಗಳನ್ನು ಸ್ವಾಯತ್ತ ಶಾಸನದಲ್ಲಿ ತರಬೇತುಗೊಳಿಸಲು ಎಲ್ಲ ಪ್ರಯತ್ನಗಳನ್ನು ಮಾಡಿದರು. ಎಲ್ಲ ಉಪಾಯಗಳನ್ನೂ ಒಳ್ಳೇ ಜಾಣ್ಮೆಯಿಂದ ಪ್ರಯೋಗಿಸಿದರು. ಈ ಬದಲಾವಣೆ ಯಾರಿಗೂ ಯಾವ ನಷ್ಟವೂ ಆಗದಂತೆ ಆಗಬೇಕೆಂಬುದು ಇವರ ಉದ್ದೇಶವೇ ಆಗಿತ್ತು. ಶಾಸನಪ್ರಣಾಲಿ ಆಮೂಲಾಗ್ರವಾಗಿ ಪರಿವರ್ತಿತವಾಯಿತಾದರೂ ಯಾರಿಗೂ ಇದು ತಿಳಿಯಲಿಲ್ಲ. ಇದರಲ್ಲಿಯೇ ಜಾನ್ ಪಿಟರ್ಸರ ಅಸಾಧಾರಣತ್ವ. ಯುವರಾಜ ತಮ್ಮ ಗೆಳೆಯನೆಂಬುದು ಯಾವ ವಿಪ್ಲವಕಾರಿಗೂ—ಅಭಿನಾಯಕರಿಗೆ ಕೂಡ— ತಿಳಿದಿರಲಿಲ್ಲ. ಇಷ್ಟೇ ಅಲ್ಲ, ಯುವರಾಜನ ಇಂದ್ರಿಯ ಲೋಲುಪತೆ ಮತ್ತು ವ್ಯಸನಗಳನ್ನು ಅರಿತ ಪ್ರಜೆಗಳು ಅವರನ್ನು ಕೊಲ್ಲಲು ಬಹಳ ಪ್ರಯತ್ನಿಸಿದರು. ಇಲ್ಲಿಯ ಪಾರ್ಲಿಮೆಂಟು ಸಾಧಾರಣತಂತ್ರವನ್ನು ಸಾರಿದ ದಿನ ಘಟನಾಕ್ರಮದಿಂದ ಯುವರಾಜರೇ ತಮ್ಮ ಉದ್ಧಾರಕರೆಂದು, ಸ್ವಾತಂತ್ರ್ಯ ಮಂತ್ರದ ದ್ರಷ್ಟಾರರೆಂದು ಜನಕ್ಕೆ ಗೊತ್ತಾಯಿತು. ಈಗಲೋ ಜನರಿಗೆ ಜಾನ್ ಪಿಟರ್ಸರಿಗಿಂತ ಹೆಚ್ಚು ಪ್ರೀತಿಯವರು ಯಾರೂ ಇಲ್ಲ. ಇವರ

ಹೆಂಡತಿ ಮಾರ್ಕಿಣ ಕನ್ಯೆ; ಸಾಧಾರಣತಂತ್ರವು ಪ್ರತಿಷ್ಠಿತವಾದ ಬಳಿಕ ಸಾಧಾರಣ ಪ್ರಜೆಯಂತೆ ಆಡಂಬರವಿಲ್ಲದೆ ಅವಳನ್ನು ಮದುವೆಯಾದರು."

"ಒಳ್ಳೇ ಅದ್ಭುತ ಮನುಷ್ಯರು. ಜಾನ್ ಪಿಟರ್ಸ್‌ರೊಡನೆ ನನ್ನ ಪರಿಚಯ ಮಾಡಿಕೊಡುವೆಯಾ?" ಎಂದು ಗೆಳೆಯ ಕೇಳಿದ.

"ಇದೊಂದು ದೊಡ್ಡ ಮಾತೆ? ಇವರ ಬಾಗಿಲು ಯಾವಾಗಲೂ ತೆರೆದಿರುತ್ತದೆ. ಒಮ್ಮೆ ನಿನ್ನನ್ನು ಅವರ ಕಡೆ ಕರೆದುಕೊಂಡು ಹೋಗುವೆ. "ನಡೆ, ಈಗ ಆನಂದೋತ್ಸವದಲ್ಲಿ ಸೇರುವಾ."

* * * *

ಜಾನ್ ಪಿಟರ್ಸ್ ಹೆಂಡತಿಯೊಡನೆ, ಉತ್ಸವದಲ್ಲಿ ಬಂಧು ಬಾಂಧವರ ಅತ್ಯಧಿಕ ಆದರದಿಂದ ವ್ಯತಿವ್ಯಸ್ತರಾಗಿದ್ದರು ಅವರಿಬ್ಬರೂ ಕೊಡೆಮರಳಿ ಹೋಗುವಾಗ ಬರ್ನಾರ್ಡ್ ಅವನೆದುರಿಗೆ ಹೋದ. ನಗುತ್ತ, "ತಾವಿಲ್ಲಿ ಬರದಿದ್ದರೇ ನೆಟ್ಟಗಿತ್ತು. ಜರ್ಮನ್ ರಾಯಭಾರಿ ಪ್ರಿನ್ಸ್ ಸುಯೋಸ್ ಆಮಂತ್ರಣವನ್ನು ಸ್ವೀಕರಿಸಿ ಬಂದಿದ್ದಾರೆ." ಎಂದ.

ಜಾನ್ ಪಿಟರ್ಸ್ ಹೇಳಿದ: "ಅದು ನಿಜ. ನಾನು ಪ್ರಿನ್ಸ್ ಸುಯೋಸರ ಕೈಗೆ ಬಂದ ತುತ್ತನ್ನು ಕಸಿದುಕೊಂಡಿದ್ದೇನೆ. ನನ್ನ ಈ ಅಪರಾಧವನ್ನು ಅವರೆಂದಿಗೂ ಕ್ಷಮಿಸಲಾರರು. ನಾನು ಆ ಹೊತ್ತಿನಲ್ಲಿ ಎಚ್ಚರಿಯದಿದ್ದರೆ, ಇಂಗ್ಲಂಡ್-ಫ್ರಾನ್ಸ್‌ಗಳ ನೆರವನ್ನು ಪಡೆಯದಿದ್ದರೆ, ಎಲ್ಲ ನುಂಗುವ ಅವರ ದೊರೆ ಕೈಸರ್ ನಮ್ಮ ದೇಶವನ್ನು ಇಷ್ಟೊತ್ತಿಗೆ ಅರಗಿಸಿಕೊಂಡುಬಿಡುತ್ತಿದ್ದ. ನಾನು ಅವರ ಆಸೆಯನ್ನೆಲ್ಲ ವ್ಯರ್ಥಗೊಳಿಸಿಬಿಟ್ಟೆ. ಏನೇ ಆಗಲಿ, ಇನ್ನು ಅವರೊಡನೆ ನನ್ನ ಯಾವ ವಿರೋಧವೂ ಇಲ್ಲ. ಪಾಪ, ಅವರು ತಮ್ಮ ದೊರೆಯೆದುರು ತಲೆತಗ್ಗಿಸುವಂತಾಯಿತು".

ಬಳಿಕ ಜಾನ್ ಪಿಟರ್ಸ್ ಸಮಾರಂಭಸ್ಥಾನದಿಂದ ಹೊರಬಿದ್ದು ಹೆಂಡಯೊಡನೆ ಶಕಟವನ್ನೇರಿದ. ಆಗ ಮುಚ್ಚಂಜೆ ಸರಿದು ರಾತ್ರಿಯಾಗಿತ್ತು. ಬೀದಿಯ ಎರಡೂ ಪಕ್ಕಗಳಲ್ಲಿ ದಟ್ಟವಾದ ಗಿಡಗಳ ಸಾಲು. ನಾಗರಿಕರ ಸಮ್ಮಿಶ್ರಕಲಕಲಾಟವನ್ನು ಕೇಳುತ್ತ ಅವರು ಸಾಗಿದ್ದರು.

"ಹಿಂದಿನ ಮಾತುಗಳು ಇಂದು ಸ್ವಪ್ನದಂತೆನಿಸುತ್ತಿವೆ" ಗ್ರೇಸ್ ಎಂದಳು.

" ಅಸಾಧ್ಯವನ್ನು ಸಾಧ್ಯಮಾಡಿಕೊಂಡೆವೆಂದು ಈಗೆನಿಸುತ್ತಿದೆ. ಆಸೆಯಿಲ್ಲದಿದ್ದರೆ ಮನುಷ್ಯಬದುಕಲಾರ; ಎಷ್ಟು ಸಂಕಟಗಳಲ್ಲಿ ಎಂಥ ವಿಲಕ್ಷಣ ಉಪಾಯಗಳಿಂದ ಪಾರಾದೆನೆಂಬುದನ್ನು ನೆನೆದರೆ ವಿಸ್ಮಯವಾಗುತ್ತಿದೆ. ಇದೇ ಸ್ಥಳದಲ್ಲಿ ಒಬ್ಬ ನನ್ನನ್ನಿರಿಯಲು ಚೂರಿಯೆತ್ತಿದ್ದ. ಎಲ್ಲರೂ ನನ್ನನ್ನು ದೇಶದ ಹಗೆಯೆಂದು ಭಾವಿಸಿದ್ದರು. ಎಲ್ಲಿ ಯಾವಾಗ ಯಾರ ಕೈಯಿಂದ ಸತ್ತೇನೆಂಬ ನಿಶ್ಚಿಂತತೆಯೇ ಇರಲಿಲ್ಲ. ಈಗ ನಾನು ಒಬ್ಬೊಂಟಿಗನಾಗಿ ಎಲ್ಲಿ ಬೇಕಾದರೂ ನಿರ್ಭಯವಾಗಿ ತಿರುಗಾಡಬಲ್ಲೆ. ಇದೇ ಪರಮಲಾಭ " ಎಂದ ಪಿಟರ್ಸ್‌ನ.

" ನಿಮ್ಮ ಸುನಾಮವೇ ಅಷ್ಟು ಕಲಂಕಿತವಾಗಿತ್ತು; ಅದರಿಂದ ನಿಮ್ಮೊಡನೆ ಮಾತನಾಡುವುದಕ್ಕೆ ಯಾವ ಸನ್ಮಹಿಳೆಗೂ ಧೈರ್ಯವಿರಲಿಲ್ಲ. ಇಂಥ ದುರ್ನಾಮವು ಅಷ್ಟೊಂದು ಇಷ್ಟವಾದದ್ದಲ್ಲ".

" ದೇಶಹಿತಕ್ಕಾಗಿಯೆ ಈ ಕಲಂಕಗಳನ್ನು ತಲೆಯಮೇಲೆ ಹೊತ್ತಿದ್ದೆ; ದುರ್ದೈವಿ ನಿಕೋಲಸ್ ನನ್ನ ಭೂಮಿಕೆಯನ್ನು ವಹಿಸಿ ಪಾಪಪ್ರಮಾಣವನ್ನು ಹೆಚ್ಚಿಸಿಬಿಟ್ಟಿದ್ದ ಅವನಿಗೆ ತನ್ನ ಕುಕರ್ಮಕ್ಕೆ ತಕ್ಕ ಫಲಬೋಗವನ್ನು ಉಣ್ಣುವ ಪ್ರಸಂಗವೇ ಬಂದಿತ್ತು. ನಾನು ನನ್ನ ಜೀವವನ್ನು ಸಂಕಟದಲ್ಲಿ ನೂಕಿ ಅವನನ್ನು ಉಳಿಸಿದೆ. ಅಂದೇ ನಾನು ಸಾಯತಕ್ಕವ. ಒಬ್ಬ ಆತ್ಮತ್ಯಾಗಿನಿಯಾದ ಯುವತಿ ತನ್ನ ಜೀವವನ್ನು ಕೊಟ್ಟು ನನ್ನ ಜೀವವನ್ನು ಉಳಿಸಿದಳು. ಅವಳ ಋಣವನ್ನು ಈ ಜೀವನದಲ್ಲಿಯೇ ತೀರಿಸುವುದು ಸಾಧ್ಯವಿಲ್ಲ "

ಬಂಡಿ ಅತ್ಯುಚ್ಚಪರ್ವತವೊಂದರ ಅಡಿಯಲ್ಲಿ ಹೋಗಿ ನಿಂತಿತು. ಇಬ್ಬರೂ ನಿಃಶಬ್ದವಾಗಿ ಕೆಳಗಿಳಿದರು. ಗ್ರೇಸಳ ಕೈಯಲ್ಲಿ ಬಿಳಿಗುಲಾಬಿಯ ದೊಡ್ಡಮಾಲೆಯೊಂದಿತ್ತು. ಹತ್ತಿರವಿದ್ದ ಸಮಾಧಿಸ್ಥಾನಕ್ಕೆ ಅವರು ಹೋದರು. ಚಿಕ್ಕ ಸಮಾಧಿಸ್ತಂಭವೊಂದರ ಎದುರು ನಿಂತರು. ಸ್ತಂಭದ ಅಡಿಯಲ್ಲಿ ಶುಭ್ರವಾದ ಸಂಗಮರವರಿ ಹಲಗೆಗಲ್ಲಿನಲ್ಲಿ ಬರೆದಿತ್ತು— ' ಮೇರಿ ಮಿತ್ರನಿಗಾಗಿ ಜೀವತೆತ್ತಿದ್ದಾಳೆ.'

ಗ್ರೇಸ್ ಆವೇಗಪೂರ್ಣ ಹೃದಯದಿಂದ ಗುಲಾಬಿಯ ಮಾಲೆಯನ್ನು ಸಮಾಧಿಗರ್ಪಿಸಿದಳು. ಬಳಿಕ ಇಬ್ಬರೂ ಎಷ್ಟೋಹೊತ್ತು ಎವೆಯಿಕ್ಕದೆ ಆ ಚಿಕ್ಕ ಸಮಾಧಿಯನ್ನೇ ನೋಡುತ್ತಲಿದ್ದರು. ಜಾನ್ ಪಿಟರ್ಸನ ಕಣ್ಣುಗಳಲ್ಲಿ ನೀರು ಸೂಸಿತು.

"ಮನುಷ್ಯ ಪ್ರಪಂಚದಲ್ಲಿ ಏನಾದರೂ ಮಹತ್ಕಾರ್ಯವನ್ನು ಸಾಧಿಸಿದರೇ ಮನುಷ್ಯನ ಜೀವನ ಸಾರ್ಥಕ. ಆದರೆ ಕೆಲವೊಮ್ಮೆ ಜೀವನಕ್ಕಿಂತ ಮರಣವೇ ಹೆಚ್ಚು ಗೌರವಪೂರ್ಣವಾಗಿರುತ್ತದೆ" ಬಹಳ ಹೊತ್ತಿನಮೇಲೆ ಮೇರಿ ನುಡಿದಳು.

"ನಿಜ. ದೃಷ್ಟಾಂತಕ್ಕಾಗಿ ದೂರ ಹೋಗಬೇಕಾಗಿಲ್ಲ. ನನ್ನ ಕರ್ಮಮಯ ಜೀವನಕ್ಕಿಂತಲೂ ರಂಗವಿಲಾಸಿನಿಯಾದ ಮೇರಿಯ ಮೃತ್ಯು ಲಕ್ಷಪಟ್ಟು ಗೌರವವುರ್ಣವಾದದ್ದು. ನನ್ನ ಜೀವಕ್ಕಾಗಿ ಈಕೆ ತನ್ನ ಜೀವವನ್ನು ನಗುಮೊಗದಿಂದ ಕೊಟ್ಟುಬಿಟ್ಟಳು. ಪರಮೇಶ್ವರನು ಈಕೆಯ ಆತ್ಮಕ್ಕೆ ಶಾಂತಿಯನ್ನೀಯಲಿ."

---